ಸಂಚಿಕೆ ೧ ಸಂಪುಟ ೩೩

# ಶಿವಾನುಭವ

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.

●

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಜಾನೇವರಿ ೧೯೫೯.

# ವಿಷಯಾನುಕ್ರಮಣಿಕೆ.










# ಕನ್ನಡ ಸಾಹಿತ್ಯಾಭಿವರ್ಧಕ ಬಸವಣ್ಣ.

( ಲೇಖಕ:— ಶ್ರೀ. ಆರ್. ಬಸವರಾಜ್ ತಿಪಟೂರ. )

ನೃಪತುಂಗನ ಕಾಲದಿಂದ ನಡೆದು ಬಂದ ಸಾಹಿತ್ಯ ಮಾರ್ಗವನ್ನು ಗಮನಿಸಿದರೆ ಆಗ ರಚಿತವಾದ ಪ್ರೌಢ ಕಾವ್ಯಗಳು ಕೇವಲ ಒಂದು ಗುಂಪಿನವರಿಗೆ ಸಂಬಂಧಿಸಿದ್ದು ವೆಂದು ತಿಳಿದು ಬರುತ್ತದೆ. ಸಂಸ್ಕೃತ ಪಂಡಿತರಿಂದ ಆಗಿನ ರಾಜ ಮಹಾರಾಜರ ಆಶ್ರಯದಲ್ಲಿ ಬೆಳೆದು ಬಂದ ಸಾಹಿತ್ಯ, ತಮ್ಮ ಪೋಷಕರ ಪ್ರಶಂಸೆಗಾಗಿ, ಅವರ ಮನರಂಜನೆಗಾಗಿ ಸೃಷ್ಟಿಯಾದ್ದರಿಂದ ಲೋಕಹಿತ ದೃಷ್ಟಿ ಜನ ಸಾಮಾನ್ಯರ ನಿತ್ಯ ಜೀವನ ದೃಷ್ಟಿ ಅತ್ಯಂತ ಗೌಣವಾಗಿದ್ದಿತು. ಜೀವನ ಧರ್ಮಕ್ಕೆ ಅವಶ್ಯಕವಾದ ವಿಷಯ ನಿರೂಪಣೆಗಿಂತ ಇಂದ್ರ ಚಂದ್ರ ಮನ್ಮಥರ ಶೃಂಗಾರ ವರ್ಣನೆಗಳು ಕಾರ್ಯಗಳಲ್ಲಿ ಜೊಂಡಿನಂತೆ ಬೆಳೆದು ನಿಂತಿದ್ದವು. ಸಾಹಿತ್ಯ ಕೆಲವೇ ಮಂದಿ ಹೊಟ್ಟೆ ತುಂಬಿದವರ ವಿಹಾರ ಸಾಧನವಾಗಿತ್ತು. ಕಾರ್ಯ ವಸ್ತು

ಕೂಡ ರಾಮಾಯಣ ಮಹಾ ಭಾರತಗಳಿಂದ ಆಯ್ದ ಪ್ರಸಂಗಗಳಾಗಿದ್ದವು. ಯಾವುದು ಮತಧರ್ಮವಾಗಿತ್ತೊ ಅದು ಸಾಹಿತ್ಯ ಮನೋಧರ್ಮವೂ ಆಗಿತ್ತು. ತಮ್ಮ ತಮ್ಮ ಮತಪ್ರಚಾರಕ್ಕಾಗಿ ಆಗಿನ ಕವಿಗಳು ಸಾಹಿತ್ಯ ವನ್ನು ಬರೆದರೆಂದರೂ ತಪ್ಪಲ್ಲ. ಪಂಪ ರನ್ನ ಪೊನ್ನರ ಕೃತಿಗಳು ಇದಕ್ಕೆ ತಕ್ಕ ಉದಾಹರಣೆಗಳಾಗಿವೆ.

ಸಾಹಿತ್ಯ ನಿರೂಪಣಾ ಶೈಲಿಯೂ ಅತ್ಯಂತ ಕಠಿಣವಾಗಿ ಸಂಸ್ಕೃತ ತಿಳಿಯದವರಿಗೆ ಅವು ಅಪ್ರಯೋಜಕವಾಗಿದ್ದವು. ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಬಳಕೆಯಲ್ಲಿದ್ದರೂ ವಿಶೇಷವಾಗಿ ಸಂಸ್ಕೃತ ಪದಗಳನ್ನು ಬಳಸದಿದ್ದರೆ ಆ ಕವಿಗೆ ಮಾನ್ಯತೆ ಇರಲಿಲ್ಲ. ವಸ್ತು ಪ್ರಾಮುಖ್ಯಕ್ಕಿಂತ ವಾಗಾಡಂಬರವೇ ಅತಿಯಾಗಿತ್ತು. ನವರತ್ನಾಭರಣಗಳಿಂದ ಅಲಂಕೃತಳಾದ ಸಾಹಿತ್ಯದೇವಿ ಅರಮನೆಯ ಪಂಜರದಲ್ಲಿ ಬಂದಿಯಾಗಿದ್ದಳು. ಇಂತಹ ಪರಿಸ್ಥಿತಿಯಲ್ಲಿ ಜನಸಾಮಾನ್ಯರಿಗೂ ಸಾಹಿತ್ಯಕ್ಕೂ ಸಂಬಂಧ ನೇರ್ಪಡು ವುದು ಹೇಗೆ ?

ಸಮಾಜದಲ್ಲಿ ಕೀಳೆಂದು ಪರಿಗಣಿಸಲ್ಪಟ್ಟವರಿಗೆ ಆಗ ರಚಿತವಾಗಿದ್ದ ವೇದ, ಉಪನಿಷತ್ತು ಗೀತೆ ಮುಂತಾದವುಗಳನ್ನು ಓದುವುದಿರಲಿ, ಕೈಯಿಂದ ಸ್ಪರ್ಶಿಸಲೂ ಅವಕಾಶವಿರಲಿಲ್ಲ. ಕಾಯಕದ ಸ್ವಾತಂತ್ರ್ಯ, ಇತರ ಗುಣ ಕರ್ಮದವರೊಂದಿಗೆ ಬೆರೆಯುವುದು ಹೇಗೆ ಅಸಾಧ್ಯವಿದ್ದಿತೊ ಅದೇ ರೀತಿ ಜ್ಞಾನಾರ್ಜನೆ ಮಾಡುವ ಅವಕಾಶವನ್ನೂ ಕೆಲವು ಮಂದಿ ಸ್ವಾರ್ಥಿಗಳು ಅಪಹರಿಸಿ ಸಮಾಜದ ಬಹು ಸಂಖ್ಯಾತರನ್ನು ಅಜ್ಞಾನಾಂಧಕಾರದಲ್ಲಿರಿಸಿ ದರು. ಇದರ ಭೀಕರ ಪರಿಣಾಮವನ್ನು ಶತಶತಮಾನಗಳವರೆಗೂ ಅವರು ಅನುಭವಿಸಬೇಕಾಯಿತು.

ಕನ್ನಡದ ಮೊಟ್ಟಮೊದಲು ಕವಿ ನೃಪತುಂಗನ ಕವಿರಾಜಮಾರ್ಗ, ಪಂಪನ ವಿಕ್ರಮಾರ್ಜುನ ವಿಜಯ, ಆದಿಪುರಾಣ, ರನ್ನನ ಗದಾಯುದ್ಧ ಕಾವ್ಯ, ಪೊನ್ನನ ಕೃತಿಗಳು ಇವೆಲ್ಲವೂ ಶ್ರೇಷ್ಠ ಸಾಹಿತ್ಯವನ್ನೊಳಗೊಂಡಿ ದ್ದರೂ ಅವು ಮಹಾಕಾವ್ಯಗಳಿಂದ ವಸ್ತುಪಡೆದಿವೆ.

ಇಲ್ಲವೆ ಮತತತ್ವವನ್ನು ಮುಖ್ಯವಾಗೆಣಿಸಿವೆಯಲ್ಲದೆ ಜನತೆಯ ದಿನ ನಿತ್ಯದ ಬಾಳ್ವೆಯನ್ನು ಪ್ರತಿಬಿಂಬಿಸುವ ರನ್ನಗನ್ನಡಿಯಲ್ಲ. ಅವುಗಳು ಕಠಿನ ವಾದ ಪದ್ಯರೂಪದಲ್ಲಿದ್ದು ಪಂಡಿತರಿಗೆ ಮಾತ್ರ ಎಟುಕುವಂತಿದ್ದವು.

ಸಾಹಿತ್ಯಕ್ಕೂ ಸಮಾಜಕ್ಕೂ ಸಂಬಂಧವಿಲ್ಲದ ಈ ದುರ್ಭರ ಪರಿಸ್ಥಿತಿ ಹನ್ನೆರಡನೆಯ ಶತಮಾನದಲ್ಲಿ ಸಂಪೂರ್ಣ ಬದಲಾವಣೆ ಹೊಂದಿತು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಈ ಶತಮಾನವು ಅತ್ಯಂತ ಕ್ರಾಂತಿಕಾರಿ ಹಾಗೂ ಅನುಭಾವಪ್ರಾಧಾನ್ಯಕಾಲವೆಂದು ಹೇಳಬಹುದು. ಧರ್ಮ ಮತ್ತು ಸಾಹಿತ್ಯ ಸಮಾಜದ ಕೆಲವು ಮಂದಿಯ ಗುತ್ತಿಗೆಯಲ್ಲ! ಇಡೀ ಮಾನವ ಕೋಟಿಗೆ ಸಂಬಂಧಿಸಿದ್ದು ಎಂಬ ಅಂಶವನ್ನು ಮೊಟ್ಟಮೊದಲಿಗೆ ಶಿವಶರಣರು ಪ್ರತಿಪಾದಿಸಿದರು. ಈ ಸಮಯದಲ್ಲಿ "ಧಾರ್ಮಿಕ ಸಾಮಾಜಿಕ ಜೀವನದಲ್ಲಿ ಮೂಲಭೂತವಾದ ವ್ಯತ್ಯಾಸಗಳು ಅದಕ್ಕೆ ವಿರೋಧಕವಾದ ಪ್ರತಿಕ್ರಿಯೆಗಳು ಸಂಘರ್ಷ ಸಾಮರಸ್ಯಗಳು ತಲೆದೋರಿ ಕನ್ನಡ ಸಾಹಿತ್ಯದ ಮೇಲೆ ಆಳವಾದ ವರ್ಚಸ್ಸು ಬೀರಿದ್ದವು. ಕನ್ನಡ ಸಾಹಿತ್ಯವು ಮಾರ್ಗದಿಂದ ದೇಸಿಗೆ ಸಂಕ್ರಮಣ ಹೊಂದಿದ ಯುಗ ಇದು."

"ಹನ್ನೆರಡನೆಯ ಶತಮಾನದ ವೀರಶೈವ ವಚನಕಾರರ ಧೋರಣೆಯನ್ನು ನೋಡಿದರೆ ಅವರು ಒಂದು ಹೊಸಮತವನ್ನು ನೆಲೆಗೊಳಿಸುವ, ಒಂದು ಹೊಸ ಸಮಾಜವನ್ನು ಸ್ಥಾಪಿಸುವ ಕಾರ್ಯದಲ್ಲಿ ಉದ್ಯುಕ್ತರಾಗಿದ್ದರೆಂದು ತಿಳಿದುಬರುತ್ತದೆ."

ವಿಶ್ವಸಾಹಿತ್ಯದ ಸಾಲಿನಲ್ಲಿ ನಿಲ್ಲಬಲ್ಲಂಥ ಶಕ್ತಿಯುತವೂ ವಿಶಾಲವಿಶ್ವ ಪರಿಜ್ಞಾನವೂ ಉಳ್ಳ ಸಾಹಿತ್ಯ ಕನ್ನಡದಲ್ಲಿದೆಯೆ ಎಂಬ ಪ್ರಶ್ನೆಗೆ, "ವಚನ ಸಾಹಿತ್ಯವು ಕನ್ನಡ ನುಡಿ ವಿಶ್ವಸಾಹಿತ್ಯಕ್ಕೆ ಕೊಟ್ಟ ಅಪೂರ್ವ ಕಾಣಿಕೆ ಎಂದು ಕನ್ನಡಿಗರು ಹೆಮ್ಮೆಪಡಬಹುದಾಗಿದೆ." ವಚನಶಾಸ್ತ್ರವು ಮತ ಧರ್ಮಪ್ರಚಾರ ದೃಷ್ಟಿಯಿಂದ ಸೃಷ್ಟಿಯಾದರೂ ಅದು ಬಸವೇಶ್ವರನ ಕಾಲದ ಜನಜೀವನಕ್ಕೆ ಹಿಡಿದ ಕನ್ನಡಿಯಾಗಿದೆ. ಹಳಗನ್ನಡದ, ಸಂಸ್ಕೃತ ಭೂಯಿಷ್ಠವಾದ ಪದ್ಯ ಪ್ರಕಾರದಲ್ಲಿ ರಚಿತವಾಗುತ್ತಿದ್ದ ಸಾಹಿತ್ಯ ಜನಸಾಮಾನ್ಯರಿಗೂ ಅರ್ಥವಾಗುವಂತೆ, ಜನಸಾಮಾನ್ಯರ ಮೇಲ್ಮೆಗಾಗಿಯೇ ಸರಳ ಗದ್ಯದಲ್ಲಿ ರಚಿತವಾದದ್ದು ಬಸವಣ್ಣನವರ ಸಾಹಸದಿಂದ. ಮೇಲಾಗಿ ತಮ್ಮ ಮತಪ್ರಚಾರ ಮಾಡಲು ಜನಸಾಮಾನ್ಯರ ಕನ್ನಡ ಭಾಷೆಯಲ್ಲಿ ಬರೆಯುವುದು ಅತ್ಯವಶ್ಯಕವಾಗಿತ್ತು. ಈ ಕಾರಣದಿಂದ ಕನ್ನಡ ಸಾಹಿತ್ಯ ಮಾರ್ಗ ಸಂಪೂರ್ಣ ಬದಲಾವಣೆಹೊಂದಿತು. ಸಂಸ್ಕೃತದ ವಾಗಾಡಂಬರದ ಹಿರಿಮೆ ಸಡಲಿ ಕನ್ನಡದ ಚೆಲುವು ಶಕ್ತಿಗಳು ಉದಯವಾದುದು ಈ ವಚನದ

ಸಾಹಿತ್ಯೋದಯದಿಂದ. "ಬಹುಕಾಲದಿಂದಲೂ ಪಂಡಿತರ ತುತ್ತಾಗಿದ್ದ ವಿಶಿಷ್ಟ ವರ್ಗದವರ ಸೊತ್ತಾಗಿದ್ದ, ರಾಜ್ಯಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ ತಮ್ಮ ಅನುಭವದ ಕಮ್ಮಟದಲ್ಲಿಯೇ ಅಚ್ಚೊತ್ತಿದ ವಚನ ನಾಣ್ಯಗಳನ್ನು ಜನಸಾಮಾನ್ಯರೆಲ್ಲರಲ್ಲಿ ಸಲುವಂತೆ ಹರಡಿದವರು ವಚನಕಾರರು." "ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೆ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ಪುರುಷರು ವೀರಶೈವ ವಚನಕಾರರು." ಇಂತಹ ವಚನಕಾರರ ಪಂಥ ಬೆಳೆದು ಬಂದುದು ಆದ್ಯ ವಚನಕಾರರಾದ ಬಸವೇಶ್ವರರಿಂದ.

ಆದ್ಯ ವಚನಕಾರರಾದ ಬಸವಣ್ಣನವರನ್ನೆ ಅನುಸರಿಸಿ ಅವರ ಅನಂತರ ಅನೇಕ ಮಂದಿ ಶಿವಶರಣ ಶರಣೆಯರು ವಚನವಾಙ್ಮಯವನ್ನು ಮತ್ತಷ್ಟು ವೃದ್ಧಿಗೊಳಿಸಿದರು. ನೂರಿನ್ನೂರು ಮಂದಿ ಶರಣರ ಜೀವನದೃಷ್ಟಿ ಲೋಕಾನುಭಾವಗಳಿಂದ ಸೃಷ್ಟಿಯಾದ ಅಸಂಖ್ಯಾತ ವಚನಸಾಹಿತ್ಯ ಕನ್ನಡಿಗರ ರತ್ನ ಭಂಡಾರ ಸಂಸ್ಕೃತ ಸಾಹಿತ್ಯ ಸಾಗರದ ಅಲೆಗಳಬ್ಬರದಲ್ಲಿ ಕನ್ನಡ ಕಣ್ಮರೆ ಸಿಕೊಂಡಿದ್ದಾಗ ಅದಕ್ಕೊಂದು ಶಕ್ತಿಯನ್ನು ತುಂಬಿ ಜೀವಂತ ಧ್ವನಿಯನ್ನು ಕೊಟ್ಟು ಬೆಳಕಿಗೆ ತಂದು ಕನ್ನಡಿಗರಿಗೆ ಎದೆಗಾರಿಕೆಯನ್ನೂ, ಕನ್ನಡ ನುಡಿಗೊಂದು ನೆಲೆಗಟ್ಟನ್ನೂ ಕಟ್ಟಿದವರಾದ್ದರಿಂದ ಬಸವಣ್ಣನವರಿಗೆ "ಕನ್ನಡ ಸಾಹಿತ್ಯಾಭಿವರ್ಧಕ" ಎಂಬ ಮಾತು ಅಕ್ಷರಶಃ ಒಪ್ಪುತ್ತದೆ. ಇವರ ಮಾರ್ಗದಲ್ಲಿ ಮುಂದುವರಿದ ಕನ್ನಡ ಸಾಹಿತ್ಯದ ಮಾರ್ಗ ಸಂಪೂರ್ಣ ಬದಲಾವಣೆ ಹೊಂದಿತಲ್ಲದೆ ತಮಿಳು ತೆಲುಗು ಮರಾಠಿ ಭಾಷೆಗಳ ಸಾಹಿತ್ಯ ರಚನಾ ಮಾರ್ಗಗಳೂ ಅಪೂರ್ವ ಬದಲಾವಣೆ ಹೊಂದಿ ಸ್ವತಂತ್ರ ವಿಚಾರ ಶಕ್ತಿ, ವಿಮರ್ಶ ಪರಿಜ್ಞಾನಗಳಿಂದ ದಶದಿಕ್ಕುಗಳನ್ನೂ ವ್ಯಾಪಿಸಿ ವಿಸ್ತರಿಸಿತು. ಜನಜೀವನಕ್ಕೂ ಸಾಹಿತ್ಯಕ್ಕೂ ನಿಕಟ ಸಂಬಂಧವೇರ್ಪಟ್ಟು ಲೋಕಹಿತ ದೃಷ್ಟಿಯೇ ಸಾಹಿತ್ಯಸೃಷ್ಟಿಯ ದೃಷ್ಟಿಯಾಗಿ ಪರಿಣಮಿಸಿತು. ಬಹುಕಾಲದಿಂದ ನಡೆದು ಬಂದಿದ್ದ ಶಾಸ್ತ್ರೀಯ ಮಾರ್ಗವು ರಗಳೆ, ಷಟ್ಪದಿ, ಸಾಂಗತ್ಯ, ಗದ್ಯ, ತ್ರಿಪದಿ ಮುಂತಾದ ವಿವಿಧ ನೂತನ ಸಾಹಿತ್ಯ ಪ್ರಕಾರಗಳಿಗೆ ತನ್ನ ಮಾರ್ಗವನ್ನು ಬಿಟ್ಟುಕೊಟ್ಟಿತು. ಇದನ್ನು ಹರಿಹರ, ರಾಘವಾಂಕ, ಸರ್ವಜ್ಞ ಮುಂತಾದವರ ಕೃತಿಗಳಲ್ಲಿ ಕಾಣಬಹುದು.

ವಚನಕಾರರು ಮತಧರ್ಮ ದೃಷ್ಟಿಯಿಂದ ಅತ್ಯಂತ ವಿಶಾಲ ಮನೋಭಾವದ, ವಿಶ್ವಕುಟುಂಬತ್ವ ವಿಶ್ವಸಾಖ್ಯದ ಬುನಾದಿಯಾದ ಧರ್ಮವನ್ನು ಹೇಗೆ ರೂಪಿಸಿದರೋ ಅದರಂತೆಯೇ ಕನ್ನಡ ಸಾಹಿತ್ಯದಲ್ಲಿ ಎಂದೆಂದಿಗೂ ಅಚ್ಚಳಿಯದಂತಹ ಸೊಬಗನ್ನು ತಂದಿತ್ತರು. ತಾವು ಕಂಡುಂಡ ಹೃದಯದ ನೂರಾರು ಅನುಭಾವಗಳು, ನೋವು-ನಲಿವುಗಳು, ಹುಚ್ಚು ಮನಸ್ಸಿನ ಹತ್ತಲ್ಲ; ಸಾವಿರಾರು ಮುಖಗಳನ್ನು ಜನಸಾಮಾನ್ಯರಿಗೆ ದರ್ಶನಮಾಡಿಸಲು ಅವರು ಬಹು ಸರಳವಾದ ಭಾಷಾಶೈಲಿಯನ್ನನುಸರಿಸಿ ಕೃತಕೃತ್ಯರಾದರು. ಕೇವಲ ಧರ್ಮದೃಷ್ಟಿಯಿಂದ ಮಾತ್ರವೇ ಅಲ್ಲದೆ ಸಾಹಿತ್ಯದೃಷ್ಟಿಯಿಂದಲೂ ಕನ್ನಡ ನಾಡಿಗೆ ಕನ್ನಡ ನುಡಿಗೆ ಮಹೋಪಕಾರ ಮಾಡಿದ್ದಾರೆ. ಅಷ್ಟೇಕೆ, ಕವಿಯಾಗಿಯೇ ಬಾಳಿ ಬದುಕಿದ ಯಾರೂ ಈ ಭಕ್ತಿಯೋಗಿಯಷ್ಟು ಭಾಷಾಭಿವೃದ್ಧಿಗೆ ಸಹಾಯಕರಾಗಿಲ್ಲ. ಜನತೆಗೆ ಅರ್ಥವಾಗದ ಶಾಸ್ತ್ರೀಯಸಾಹಿತ್ಯ ರಚನಾಮಾರ್ಗ ಅವರಿಗೆ "ಶಸ್ತ್ರಮಾರ್ಗ"ವಾಗಿ ಶಾಸ್ತ್ರಿ "ಶಸ್ತ್ರಿಕ"ನಾಗಿ ಕಂಡಿರಬೇಕು. ಛಂದಸ್ಸು, ಮಾತ್ರೆ, ಗುರು ಲಘುಗಳ ಗುಣಾಕಾರದ ಗೊಂದಲ ಅವರಿಗೆ ತಲೆಬೇಸರವೆನಿಸಿರಬೇಕು. ಆದ್ದರಿಂದಲೇ ಅವರು ಎಂತಹ ಭಾವನೆಗಳ ಅಭಿವ್ಯಕ್ತಿಗೂ ಸರಳ ಕನ್ನಡವನ್ನೇ ಬಳಸಿದರು.

ವಚನ ಸಾಹಿತ್ಯದ ಭಾಷೆ ಸರಳ ಸುಲಭವಾಗಿದ್ದರೂ ಅದರಲ್ಲಡಗಿರುವ ಜೀವನ ಸೌಂದರ್ಯ, ಉನ್ನತ ಭಕ್ತಿಭಾವ ಮಹೋನ್ನತಿ, ಶ್ರೇಷ್ಠ ಸಾಹಿತ್ಯದ ಲಕ್ಷಣಗಳಾದ ಲೋಕಾನುಭಾವ ಮತ್ತು ಜೀವನ ಪ್ರತಿಬಿಂಬ ಅಸದೃಶವಾದವು. ಇಂದಿನ ಶ್ರೇಷ್ಠ ಗದ್ಯಸಾಹಿತ್ಯಕ್ಕೆ ವಚನಶಾಸ್ತ್ರವು ಬಹು ಮಟ್ಟಿಗೆ ಕಾರಣವಾಗಿದೆ. ಆಧ್ಯಾತ್ಮ ಜ್ಞಾನದ ಅತಿಶಯತೆಯ ಜೊತೆ ಜೊತೆಯಲ್ಲೆ ರಸಪ್ರವಾಹದಂತೆ ಹರಿದುಬಂದಿರುವ ಜೀವನ ಧರ್ಮ ಸೂತ್ರಗಳಿಂದೆ ವಚನಸಾಹಿತ್ಯ ಜಗತ್ತಿನ ಪ್ರಖ್ಯಾತ ಅನುಭಾವ ಸಾಹಿತ್ಯದಲ್ಲಿ ಅತ್ಯಂತ ಹಿರಿಯ ಸ್ಥಾನಗಳಿಸಿದೆ.

ಇನ್ನುಮುಂದೆ ವಚನಗಳಲ್ಲಿ ಕಂಡುಬರುವ ಶ್ರೇಷ್ಠ ಸಾಹಿತ್ಯ ಲಕ್ಷಣಗಳಾವುವೆಂಬುದನ್ನು ಕುರಿತು ವಿವೇಚಿಸೋಣ.

ಪರಿಶುದ್ಧವಾದ ಮನಸ್ಸು ಪರಿಶುದ್ಧವಾದ ನಡೆನುಡಿಗಳಿಗೂ ಬುನಾದಿಯಾಗಿರುತ್ತದೆ. "ಕುಲವನ್ನು ನಾಲಿಗೆ ಹೇಳುವುದು" ಸ್ವಾಭಾವಿಕ. ಮಾತೇ

ಮುತ್ತು" ಎಂಬುದು ಎಷ್ಟು ಸತ್ಯವೋ ಎಚ್ಚರ ತಪ್ಪಿ ನುಡಿದ "ಮಾತೇ ಮೃತ್ಯು"ವೂ ಆಗುತ್ತದೆ. ಯಾರ ಮನಸ್ಸಿಗೂ ನೋವುಂಟು ಮಾಡದ ನುಡಿಯೇ ಸರ್ವರಿಗೂ ಲೇಸಾದದ್ದು. ಅಂತಹ ನುಡಿ ಹೇಗಿರಬೇಕು?

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.
ನುಡಿದರೆ ಲಿಂಗಮೆಚ್ಚಿ 'ಅಹುದಹುದೆ'ನಬೇಕು
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮ
ದೇವನೆಂತೊಲಿವನಯ್ಯಾ ?

ಕನ್ನಡ ನುಡಿನೆಲೆಗಟ್ಟಿನ ಸಾರಸರ್ವಸ್ವವೂ ಈ ನುಡಿಗಳಲ್ಲಿ ಮುತ್ತಿನ ಹಾರದಂತೆ ಕಂಗೊಳಿಸಿದೆ. "ಮಾತೇ ಜ್ಯೋತಿರ್ಲಿಂಗ"ವೆ ಬ ವಾಣಿಯ ಸಾರ್ಥಕತೆ ವ್ಯೆದೋರಿದೆ ಈ ವಾಙ್ಮಯದಲ್ಲಿ.

ಬಸವಣ್ಣನವರು ಭಾಷೆಯ ಸರಳತೆಯ ವ್ಯಾಮೋಹದಲ್ಲಿ ಭಾವವನ್ನು ಕಡೆಗಣಿಸಿರಲಿಲ್ಲ. ಉನ್ನತ ಭಕ್ತಿಭಾವವನ್ನು ಸರಳಸುಂದರ ಪದಸಮೂಹ ಗಳಲ್ಲಿ ಹೊರಹೊಮ್ಮಿಸುವುದೇ ಅವರ ಭಾಷಾ ಸೌಂದರ್ಯದ ಬೆಡಗು ಸಾಹಿತ್ಯ ಸೃಷ್ಟಿಯಲ್ಲಿ ಶಾಸ್ತ್ರೀಯ ತಾಳಮಾನಕ್ಕಿಂತ ಕೂಡಲಸಂಗಮದೇವನೊಲುಮೆಗೆ ಭಕ್ತಿರಸ ತನ್ಮಯತೆ ಮುಖ್ಯವೆಂಬ ಅಂಶವನ್ನು—

ತಾಳಮಾನ ಸರಿಸವನರಿಯೆ!
ಓಜೆಬಜಾರಣೆಯ ಲೆಕ್ಕವನರಿಯೆ !
ಅಮೃತ ಗಣ ದೇವಗಣವನರಿಯೆ!
ಕೂಡಲ ಸಂಗಮದೇವಾ- ನಿನಗೆ ಕೇಡಿಲ್ಲವಾಗಿ
ನಾನು ಒಲಿದಂತೆ ಹಾಡುವೆ

ಎಂಬ ವಚನದಲ್ಲಿ ವ್ಯಕ್ತ ಪಡಿಸಿದ್ದಾರೆ. ತಾಳಮಾನ ಸರಿಸ, ಓಜೆ ಬಜಾರಣೆಯ ಲೆಕ್ಕ ಅಮೃತಗಣ ದೇವಗಣ ಇವುಗಳನ್ನು ಅರಿಯೆನೆಂದು ಹೇಳಿರುವುದು ಬಸವಣ್ಣನೇ ಆದ್ಯ ವಚನಕಾರ, ಆ ಮಾರ್ಗದಲ್ಲಿ ಬೇರೆ ವಚನಕಾರರಿಂದ ಮೊದಲಿಗೆ ಕೃಷಿ ನಡೆದು ನಿರ್ದಿಷ್ಟ ರಚನಾ ಮಾರ್ಗ ನೇರ್ಪ ಟ್ಟಿರಲಿಲ್ಲ ಎಂಬ ವಾದವನ್ನು ಸಮರ್ಥಿಸುತ್ತವೆ. ಇದರಂತೆ— " ಆದಿ

ಕೊಂಡಾರೆಂದು ಅಂಜಲದೇಕೆ? ಏನನೂ ಅರಿಯೆನೆಂದು ಮೌನಗೊಂಡಿರಲೇಕೆ? ಕೂಡಲ ಸಂಗಮ ದೇವರ ಮುಂದೆ ದಂಡಣ ದತ್ತಣ ಎನ್ನಿ' ಎಂಬ ವಚನವೂ ನಿಷ್ಕಾಮ ನಿಷ್ಠೆಗಳಿಂದ ಕೂಡಿದ ಭಕ್ತಿಗೆ ದೇವರು ಪ್ರಸನ್ನನಾಗುವನೆಂಬ ತತ್ವವಿದೆ.

ಬಸವಣ್ಣನವರು ಬಳಸಿರುವ ಶಬ್ದಗಳು ತಿಳಿಗನ್ನಡದ ಸಾಮಾನ್ಯ ಪದಗಳಾದರೂ ಪ್ರತಿಪದಕ್ಕೂ ತನ್ನದೇ ಆದ ವಿಶಿಷ್ಟ ಭಾವಾರ್ಥವಿದೆ. ಅನುಭಾವ, ಜೀವನ ವಿಮರ್ಶೆಗಳ ಹೊಳಪಿನೆ, ದೃಢತೆಯಿದೆ. ಸುಲಭ ಪದಪುಂಜಗಳಲ್ಲಿ ಭಕ್ತಿರಾಗದ ಮಹೋನ್ನತಿ ತೂಗಿ ಬಂದ ಬಗೆಯನ್ನು ನೋಡಿ.

ವಚನದಲ್ಲಿ ನಾಮಾಮೃತ ತುಂಬಿ।
ನಯನದಲ್ಲಿ ನಿಮ್ಮ ಮೂರುತಿ ತುಂಬಿ।
ಮನದಲ್ಲಿ ನಿಮ್ಮ ನೆನಹು ತುಂಬಿ।
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ।
ಕೂಡಲ ಸಂಗಮ ದೇವಾ।
ನಿಮ್ಮ ಚರಣಕಮಲದೊಳಾನು ತುಂಬಿ।

ಆತ್ಮ ಮನ ಸಕಲ ಇಂದ್ರಿಯಗಳೂ ಸಂಗನ ಧ್ಯಾನದಿಂದ ಪುಳಕಗೊಂಡು ಪುನೀತವಾದ ರೀತಿ, ನಾಮಾಮೃತ ಭಾವಾಮೃತ ಸಮ್ಮಿಲನದ ಸಾರ್ಥಕ್ಯ ಈ ಗೀತೆಯಲ್ಲಿ ಬಹಳ ಸೊಗಸಾಗಿ ವ್ಯಕ್ತವಾಗಿ ನಿಂತಿದೆ. ಕೂಡಲ ಸಂಗಮದೇವರ ಚರಣಕಮಲಗಳಲ್ಲಿ 'ತುಂಬಿ' ಯಾಗಿ ನಿಂತ ಅವರ ವ್ಯಕ್ತಿತ್ವ ಭಕ್ತಿಯೆಂಬ ಕಮಲದಲ್ಲಿ ಅವಿನಾಭಾವದಿಂದ ಐಕ್ಯಗೊಂಡಿದೆ.

ಈ ವಚನದಲ್ಲಿ ಸಾಹಿತ್ಯದ ಶ್ರೇಷ್ಠ ಗುಣಗಳನ್ನೂ ನೋಡಬಹುದು. ಮೊದಲಿನ ನಾಲ್ಕು ಸಾಲುಗಳ ವಚನದಲ್ಲಿ, ನಯನದಲ್ಲಿ, ಮನದಲ್ಲಿ, ಕಿವಿಯಲ್ಲಿ ಇವು ನಾಲ್ಕು ಪದಗಳೂ ಸಮಪದ ಸಮಾಕ್ಷರಗಳಿಂದ ಕೂಡಿ ತಾಳಬದ್ಧವಾಗಿ ಹಾಡಲು ಅತ್ಯುತ್ತಮವಾಗಿವೆ. ಇದೇರೀತಿ ನಾಲ್ಕು ಸಾಲುಗಳ ಕೊನೆಯ 'ತುಂಬಿ' ಎಂಬ ಪದ ಸಮನಾಗಿ ಒಂದೇ ಆಗಿದ್ದು ತೂಕವನ್ನು ಸಮಗೊಳಿಸಿದೆ. 'ತುಂಬಿ' ಎನ್ನುವಾಗ 'ತುಂಬಿ'ಯ ಅರ್ಥ 'ಭ್ರಮರ' ಎಂದಾಗುತ್ತದೆ. ಇಲ್ಲಿ ಅರ್ಥ ಚಮತ್ಕಾರ ಬಹಳ ಚನ್ನಾಗಿ

ಅಭಿವ್ಯಕ್ತವಾಗಿದೆ. ಮೇಲಾಗಿ- 'ಶಿವ', 'ಮನ', 'ನಯನ' ಮತ್ತು 'ವಚನ' ಎಂಬ ಪದಗಳು ಮೃದು ಮತ್ತು ಲಾಲಿತ್ಯದಿಂದ ಕೂಡಿ ಅತ್ಯಂತ ಮನೋಹರವಾಗಿವೆ.

ಸಮಪದ ಸಮಅಕ್ಷರಗಳಿಗೆ ಇದೇ ರೀತಿಯ ಮತ್ತೊಂದು ವಚನವನ್ನು ಉದಹರಿಸಬಹುದು.

ನೀನೊಲಿದರೆ ಕೊರಡು ಕೊನರುವುದಯ್ಯಾ ।
ನೀನೊಲಿದರೆ ಬರಡು ಹಯನಹುದಯ್ಯಾ ।
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ ।
ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲಿಪ್ಪವು
ಕೂಡಲಸಂಗಮ ದೇವಾ ||

ಈ ವಚನದ ನಾಲ್ಕು ಸಾಲಿನ ನಾಲ್ಕು ಪದಗಳೂ ಸಮಾಕ್ಷರಗಳಿಂದ ಕೂಡಿವೆಯಲ್ಲದೆ ಅಂತ್ಯಪ್ರಾಸದ 'ಅಹುದಯ್ಯಾ' ಪದವು ಕ್ರಮವಾಗಿ ಮೂರು ಸಾಲಿನಲ್ಲಿದೆ. 'ಕೊರಡು' 'ಬರಡು' ಎಂಬ ಪದಗಳೂ ಪ್ರಾಸಬದ್ಧವಾಗಿ ತೂಕವನ್ನು ಹೊಂದಿಸುತ್ತವೆ. ಈ ರೀತಿಯ ಆದಿಪ್ರಾಸ ಅಂತ್ಯಪ್ರಾಸವಿದ್ದು ಸಮಪದ, ಸಮಅಕ್ಷರ, ಮಧ್ಯಪ್ರಾಸ ಅಂತ್ಯಪ್ರಾಸಗಳುಳ್ಳ ನೂರಾರು ಉದಾಹರಣೆಗಳನ್ನು ವಚನಸಾಹಿತ್ಯದಲ್ಲಿ ಕಾಣಬಹುದು.

ವಚನಗಳು ಶಿವಶರಣರ ಜೀವನಾನುಭವದಿಂದ ಹೊರ ಹೊಮ್ಮಿದ ಪಡಿನುಡಿಗಳಾದ್ದರಿಂದ ನೇರವಾಗಿ ಹೃದಯವನ್ನು ಹೊಕ್ಕು ನಿರ್ದೇಶಿತ ಪರಿಣಾಮವುಂಟು ಮಾಡುತ್ತವೆ. ಅವುಗಳನ್ನು ಅರ್ಥ ಮಾಡಿ ಕೊಳ್ಳಲು ಅತಿ ಕಷ್ಟದಿಂದ ಸಿಪ್ಪೆಯನ್ನೊಡೆಯುವ ಶ್ರಮ ಬೇಕಾಗಿಲ್ಲ ಏಕೆಂದರೆ ಅವು ಅಷ್ಟೊಂದು ಸುಲಭವಾಗಿ ಸ್ವಾಭಾವಿಕವಾಗಿ ಸರ್ವ ಗ್ರಾಹ್ಯವಾಗಿವೆ. ಅಲ್ಲಲ್ಲಿ ಕನ್ನಡದ ಗಾದೆಗಳು, ದಿನ ಬಳಕೆಯ ಪದಗಳೂ ಹೇರಳವಾಗಿ ಸೂರೆಯಾಗಿವೆ. ವಚನಕಾರರಸಂಖ್ಯೆ ಇನ್ನೂರಕ್ಕೂ ಮೇಲಿದೆ. ಅವರಲ್ಲಿ ಇಪ್ಪತ್ತು ಮೂವತ್ತು ಮಂದಿ ಸ್ತ್ರೀಯರೇ ಇದ್ದಾರೆ.

ಉತ್ತಮ ಸಾಹಿತ್ಯ ಗುಣಗಳೆಲ್ಲವೂ ವಚನಗಳಲ್ಲಿರುವದರಿಂದ ಅವು ರಂಜನೀಯವಾಗಿ ಹೃದಯಂಗಮವಾಗಿವೆ. "ಕಿರಿದೊಳು ಪಿರಿದರ್ಥ" ವನ್ನು ಅಡಗಿಸುವ ಕಲೆ ವಚನಕಾರರಿಗೆ ಸಾಧಿಸಿದಷ್ಟು ಬೇರಾರಿಗೂ ಸಾಧಿಸಿಲ್ಲ.

ಒಂದೊಂದು ವಚನವೂ ಚಿಕ್ಕ ಚಿಕ್ಕ ಭಾವಗೀತೆಯ ರೀತಿಯಲ್ಲಿದ್ದು ನೆನ್ನ ಪಿನಲ್ಲಿಡಲು ಅನುಕೂಲವಾಗಿವೆ. ಜೀವನ ಧರ್ಮಕ್ಕೆ ಮತ್ತು ಭಕ್ತಿಭಾವಕ್ಕೆ ಸಂಬಂಧಿಸಿದ ನೂರಾರು ನೀತಿ ನಿಯಮಗಳನ್ನು ಹೇಳುವುದರಿಂದ ಅವು ಉಪದೇಶಾತ್ಮಕವಾಗಿವೆ. ಭವ ಬಂಧನ ಚಕ್ರದಿಂದ ಬಿಡುಗಡೆ ಹೊಂದಿ ಭಗವಂತನ ಅಮೃತಮಯ ಸಾನ್ನಿಧ್ಯವನ್ನು ಸೇರಲು ಜೀವಿಯು ನಿಷ್ಠೆಯಿಂದ ಪ್ರಯತ್ನ ನಡಿಸುವದೇ ಭಕ್ತಿ ಯೋಗದ ದೃಷ್ಟಿ. ಹೀಗೆ ಜೀವಿಯು ಪರಮಾತ್ಮನಲ್ಲಿ ಒಂದಾಗಲು ಪ್ರಾರ್ಥನೆ ನಡೆಯಿಸುವದರಿಂದ ವಚನಗಳು ಪ್ರಾರ್ಥನಾತ್ಮಕವಾಗಿವೆ. ಜಗತ್ತಿನಲ್ಲಿ ಸರ್ವಶಕ್ತ ಭಗವಂತನೊಬ್ಬನೇ ಪುರುಷನು. ಉಳಿದ ಜೀವಿಗಳೆಲ್ಲ ಸ್ತ್ರೀತ್ವ ವನ್ನೊಳಗೊಂಡಿನೆಯಾದ್ದರಿಂದ ಭಕ್ತನಿಗೂ ಭಗವಂತನಿಗೂ ಸತಿ ಪತಿ ಭಾವವಿದೆ ಎಂಬುದನ್ನು ವಚನಗಳು ಪ್ರತಿ ಪಾದಿಸುತ್ತವೆ. ಇನ್ನು ಕೆಲವು ವಚನಗಳು ನಿರುಕ್ತ ರೀತಿಯಿಂದ ಕೂಡಿ ಗೂಢಾತ್ಮಕವಾಗಿ, ವರ್ಣನಾತ್ಮಕವಾಗಿ ಇವೆ.

ಶ್ರೇಷ್ಠ ಸಾಹಿತ್ಯವೆಂದಮೇಲೆ ನವರಸಗಳ ಸಂಗಮವಿರಬೇಕಲ್ಲವೇ ? ಅಂತೆಯೇ ವಚನಸಾಹಿತ್ಯದಲ್ಲಿ ವಿವಿಧರಸಗಳ ಸಮ್ಮಿಲನವನ್ನು ಕಾಣಬಹುದು. ವೀರಭಾವ, ಆರ್ತಭಾವ, ಕರುಣೆ, ತಿರಸ್ಕಾರ, ದೈನ್ಯ, ಕೋಪ, ವಿನೋದ, ಪರಮ ಅನುಭಾವ, ಭಕ್ತಿ, ಕರ್ಮ ಇವೇ ಮೊದಲಾದ ವಿವಿಧ ಭಾವಗಳನ್ನು ನೋಡಬಹುದು.

## ಉದಾಹರಣೆಗಾಗಿ ಕೆಲವು ವಚನಗಳನ್ನು ನೋಡಿರಿ.

**ವೀರಭಾವಕ್ಕೆ:—**

ನಾಳೆ ಬಪ್ಪುದು ನಮಗಿಂದೆ ಬರಲಿ ;
ಇಂದು ಬಪ್ಪುದೀಗಳೆ ಬರಲಿ;
ನಾಳೆ ಬಪ್ಪುದೀಗಳೆ ಬರಲಿ;
ಇದಕಾರಂಜುವರು ಇದಕಾರಳುಕುವರು ?
"ಜಾತಸ್ಯಂ ಮರಣಂ ಧ್ರುವಂ" ಎಂಬುದಾಗಿ
ನಮ್ಮ ಕೂಡಲಸಂಗಮದೇವ ಬರೆದ ಬರಹ ತಪ್ಪಿಸುವರೆ
ಹರಿ ಬ್ರಹ್ಮಾದಿಗಳಿಗಳದಲ್ಲ !
ಆರು ಮುನಿದು ನಮ್ಮನೇನು ಮಾಡುವರು ?

ಊರು ಮುನಿದು ನಮ್ಮನೆಂತು ಮಾಡುವರು ?
ನಮ್ಮ ಕುನ್ನಿಗೆ ಕೂಸ ಕೊಡಬೇಡ,
ನಮ್ಮ ಸೊಣಗಂಗೆ ತಳಿಗೆಯ ಸಿಕ್ಕಬೇಡ !
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ,
ನಮಗೆ ನಮ್ಮ ಕೂಡಲಸಂಗಯ್ಯನುಳ್ಳನ್ನಕ್ಕ ?
ಆಯುಷ್ಯ ತೀರದಲ್ಲದೆ ಮರಣವಿಲ್ಲ ;
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ,
ಅಂಜಲದೇಕೊ ಲೋಕ ವಿಗುರ್ಬಣೆಗೆ,
ಅಂಜಲದೇಕೊ ಕೂಡಲಸಂಗಮದೇವಾ, ನಿಮ್ಮಾಳಾಗಿ

ಧೈರ್ಯ:—

ಆನೆ ಅಂಕುಶಕ್ಕಂಜುವುದೆ, ಅಯ್ಯಾ॥
ಮಾಣದೆ ಸಿಂಹದ ನಖವೆಂದಂಜುವುದಲ್ಲದೆ ?
ಆನೀ ಬಿಜ್ಜಳಂಗಂಜುವೆನೆ, ಅಯ್ಯಾ,
ಕೂಡಲಸಂಗಮದೇವಾ,
ನೀನು ಸರ್ವ ಜೀವದಯಾಪಾರಿಯಾದ ಕಾರಣ
ನಿನಗಂಜುವೆನಲ್ಲದೆ ?
ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರ ನಾನಲ್ಲ ,
ಲೋಕ ವಿರೋಧಿ, ಶರಣನಾರಿಗಂಜುವನಲ್ಲ
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪೆನಾಗಿ

ಆರ್ತಭಾವಕ್ಕೆ:—

ಅಕಟಕಟಾ! ಶಿವ, ನಿನಗಿನಿತು ಕರುಣವಿಲ್ಲಾ;
ಅಕಟಕಟಾ! ಶಿವ, ನಿನಗಿನಿತು ಕೃಪೆಯಿಲ್ಲಾ;
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕದೂರನ?
ಕೂಡಲಸಂಗಮದೇವ ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮರನಿಲ್ಲವೆ?
ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ

ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ
ಓ ಎನ್ನಲಾಗದೆ ಅಯ್ಯಾ
ಆವಾಗಲೂ ನಿಮ್ಮ ಕರೆಯುತ್ತಲಿದ್ದೇನೆ.
ಮೌನವೇ ಕೂಡಲಸಂಗಮದೇವಾ.

ತಿರಸ್ಕಾರಕ್ಕೆ:—

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು;
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ!
ಉಂಬ ಜಂಗಮ ಬಂದರೆ ನಡೆಯೆಂಬರು;
ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ!
ನಮ್ಮ ಕೂಡಲಸಂಗನ ಶರಣರ ಕಂಡುದಾಶೀನವ ಮಾಡಿದರೆ
ಕಲ್ಲುತಾಗಿದ ಮಿಟ್ಟೆಯಂತಪ್ಪರಯ್ಯಾ.

ಕರುಣೆ:—

ದಯವಿಲ್ಲದ ಧರ್ಮವದೆಂತಯ್ಯಾ
ದಯವೇಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು
ಕೊಂದಹನೆಂಬುದನರಿಯದೆ
ಬೆಂದ ಒಡಲ ಹೊರೆಯ ಹೋಯಿತ್ತಲ್ಲದೆ
ಅಂದಂದೆ ಹುಟ್ಟಿತ್ತು ಅಂದಂದೆ ಹೋಯಿತ್ತು
ಕೊಂದವರುಳಿದರೆ ಕೂಡಲಸಂಗಮದೇವಾ?

ಭಕ್ತಿ:—

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ

ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು ;
ನಿಷ್ಪತ್ತಿಯೆಂಬ ಹಣ್ಣಾಯಿತ್ತು.
ನಿಷ್ಪತ್ತಿಯೆಂಬ ಹಣ್ಣ ತೊಟ್ಟು ಬಿಟ್ಟು ಕಳಚಿಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

ಲೋಕನೀತಿ—

ಕಳಬೇಡ ಕೊಲಬೇಡ; ಹುಸಿಯ ನುಡಿಯಲುಬೇಡ;
ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ;
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ.
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ

ಉತ್ತಮ ವರ್ಣನೆಗೆ:—

ನೆರೆ ಕೆನ್ನೆಗೆ, ತೆರೆ ಗಲ್ಲಕೆ ಶರೀರಗೂಡುವೋಗದ ಮುನ್ನ
ಹಲ್ಲುಹೋಗಿ, ಬೆನ್ನುಬಾಗಿ ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ,
ಪೂಜಿಸು ನಮ್ಮ ಕೂಡಲಸಂಗಮದೇವನ.
ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ:
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ!
ಅಗಮ್ಯ ಅಗೋಚರ ಅಪ್ರತಿಮಲಿಂಗವೇ ಕೂಡಲಸಂಗಮದೇವಯ್ಯ
ಎನ್ನ ಕರಸ್ಥಲಕೆ ಬಂದು ಚುಳುಕಾದಿರಯ್ಯಾ!!

ಉಪಮೆ:—

ಬಿಡಿರೆಲೆಯ ಮೆಲಿದರೆ ಮೆಲಿದಂತಲ್ಲದೆ,
ರಸವನು ಹಡೆಯಲು ಬಾರದು!
ಮಳಲ ಹೊಸೆದರೆ ಹೊಸೆದಂತಲ್ಲದೆ,

ಸರವಿಯು ಹಡೆಯಲು ಬಾರದು!
ನೀರ ಕಡೆದರೆ ಕಡೆದಂತಲ್ಲದೆ,
ಬೆಣ್ಣೆಯು ಹಡೆಯಲು ಬಾರದು।
ನಮ್ಮ ಕೂಡಲ ಸಂಗಮದೇವನಲ್ಲದೆ,
ಅನ್ಯದೈವಕ್ಕೆರಗಿದರೆ
ಹೊಳ್ಳುಕುಟ್ಟಿ ಕೈಹೊಟ್ಟೆಯಾದಂತಾಯಿತ್ತಯ್ಯಾ

ಪ್ರಸಾದಿಶಬ್ದಾಲಂಕಾರಃ—

ಕರಿ ಘನ ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ;
ಗಿರಿ ಘನ ವಜ್ರ ಕಿರಿದೆನ್ನಬಹುದೆ? ಬಾರದಯ್ಯಾ;
ತಮಂಧ ಘನ ಜ್ಯೋತಿ ಕಿರದೆನ್ನಬಹುದೆ; ಬಾರದಯ್ಯ
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೆ? ಬಾರದಯ್ಯ;
ಕೂಡಲಸಂಗಮದೇವಾ.

ಶ್ರೇಷ್ಠ ಕಲ್ಪನಾಶಕ್ತಿ:—

ಅರಸಿನವನೇ ಮಿಂದು ಹೊಂದೊಡಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ!
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,
ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ!
ಕೆಟ್ಟುಬಾಳುವರಿಲ್ಲಾ ಎಮ್ಮವರ ಕುಲದಲ್ಲಿ;
ನೀ ನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ
ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕು ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು
ಒಲಿದುಯ್ಯಾಲೆಯಾಡುವಂತೆ
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ!

**ಅರ್ಥಚಮತ್ಕಾರಃ—**

ತೊರೆವ ಮೀವಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ,
ತೊರೆಯಿಂ ಭೋ ತೊರೆಯಿಂ ಭೋ,
ಪರನಾರಿಯ ಸಂಗವ ತೊರೆಯಿಂಭೋ !
ಪರದನದಾಮಿಷವ ತೊರೆಯಿಂ ಭೋ !
ಇವ ತೊರೆಯದೆ ಹೋಗಿ ತೊರೆಯ ಮಿಂದರೆ,
ಬರುದೊರೆ ಹೋಹುದು ಕೂಡಲಸಂಗಮದೇವಾ

**ಕೆಲವುಪಡಿನುಡಿಗಳುಃ—**

೧. ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ.
೨. ಸಂಸಾರವೆಂಬ ಸರ್ಪ, ಪಂಚೇಂದ್ರಿಯವೆಂಬ ವಿಷ.
೩. ಒಂದು ಮೊಲಕ್ಕೆ ನಾಯನೊಂಭತ್ತು ಬಿಟ್ಟಂತೆ.
೪. ಹೊರಿಸಿಕೊಂಡು ಹೋದ ನಾಯಿ ಮೊಲನ ಹಿಡಿಯುವುದೆ?
೫. ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ?
೬. ಕೀಳಿಂಗಲ್ಲದೆ ಹಯನ ಕರೆವುದೆ?
೭. ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ.
೮. ಎಳ್ಳಿಲ್ಲದೆ ಗಾಣವನಾಡಿದ ಎತ್ತಿನಂತೆ.
೯. ಬಂಜೆ ಬೇನೆಯನರಿಯದಂತೆ.
೧೦. ಮರಕ್ಕೆ ಬಾಯಿ ಬೇರು
೧೧. ತೊತ್ತಿಂಗೇಕೆ ಲಕ್ಷಣ? ಬಂಟಂಗೇಕೆ ಆಚಾರ?
೧೨. ಆದಿಪುರಾಣ ಅಸುರರಿಗೆ ಮಾರಿ.
೧೩. ವೇದಪುರಾಣ ಹೋತಿಂಗೆ ಮಾರಿ.
೧೪ ಹೊಲೆಯೊಳಗೆ ಹುಟ್ಟಿ ಕುಲವನರಸುವರು.
೧೫. ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತೆಂಬಂತೆ.
೧೬. ಕಣ್ಣಮುಚ್ಚಿ ಕನ್ನಡಿಯ ತೋರುವಂತೆ.
೧೭. ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ.
೧೮. ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬರೆವಂತೆ.
೧೯. ಒಡೆಯರಿಲ್ಲದ ಮನೆಯ ತುಡುಗಣಿ ನಾಯಿ ಹೊಗುವಂತೆ.

೨೦. ಭಿತ್ತಿಯಿಲ್ಲದ ಚಿತ್ತಾರದಂತೆ.

೨೧. ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆಪಡುವಂತೆ

೨೨. ಎಲವಾದ ಮರವು ಫಲನಾದ ತೆರನಂತೆ.

೨೩. ಸಂತವಿದ್ದವರ ಮನೆಗೆ ಕೊಂತವ ತಂದಂತೆ.

೨೪. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ.

೨೫. ಸುಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

ಇಲ್ಲಿನವರೆಗೂ, ವಚನಶಾಸ್ತ್ರದಲ್ಲಿ ಕಂಡುಬರುವ ಶ್ರೇಷ್ಠ ಸಾಹಿತ್ಯ ಲಕ್ಷಣಗಳಾವುವು ಮತ್ತು ವಚನಕಾರರ ಹೊಸಮಾರ್ಗದಿಂದ ಮುಂದಿನ ಶತಮಾನಗಳಲ್ಲಿ ಉಂಟಾದ ಗಮನಾರ್ಹ ಬದಲಾವಣೆಗಳೇನು ಎಂಬುದನ್ನು ವಿಹಂಗಮ ದೃಷ್ಟಿಯಿಂದ ವಿವೇಚಿಸಿದ್ದಾಯಿತು. ಇನ್ನು ಮುಂದೆ ವಚನ ಸಾಹಿತ್ಯದ ಬಗ್ಗೆ ಮಹನೀಯರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕೊಡಲಾಗಿದೆ.

## ವಚನಸಾಹಿತ್ಯದ ಬಗ್ಗೆ ಮಹನೀಯರ ಅಭಿಪ್ರಾಯಗಳು.

೧. "ವಚನ ಧರ್ಮದ ಧರ್ಮಸಾರ ಯಾರಿಗೂ ಸತ್ಯವೇ, ಯಾರಿಗೂ ಧರ್ಮವೇ." —'ಶ್ರೀ'.

೨. "ವಚನಗಳು ಗೀತಗಳು, ಲಯಬದ್ಧವಾಗಿ ರಚಿತವಾಗಿವೆ. ಅರ್ಥ ಗಾಂಭೀರ್ಯ, ಶಬ್ದಾಲಂಕಾರ, ತಿಳಿಗನ್ನಡತನ ಇವು ಅದರ ವೈಶಿಷ್ಟ್ಯ. ಮಾತುಗಳ ಆಟ, ಸಹಜತೆ, ಅನುಭಾವ, ಉಪಮೆ, ಹಾಸ್ಯ, ರಸಭಾವ, ಅಲಂಕಾರ, ಅಂತರಂಗ ಲೋಕಾನುಭವಗಳ ಮಿಳಿತ."

—ಶ್ರೀ ಎಂ. ಆರ್. ಶ್ರೀ.

೩. "ವಚನವೆಂಬುದು ಭಾವಗೀತ ಲಕ್ಷಣದಿಂದ ಕೂಡಿದ ಅನುಭಾವ ಗದ್ಯವೇ ಸರಿ. ಇದರಲ್ಲಿ ಶಿವಶರಣರು ಅಂತರಂಗದ ಆಳವಾದ ಅನುಭಾವಕ್ಕೆ ಕನ್ನಡಿ ಹಿಡಿದಿದ್ದಾರೆ. ನಿರ್ಭಯವಾದ ಆತ್ಮನಿರೀಕ್ಷೆಯನ್ನೂ ಮಾಡಿದ್ದಾರೆ."

೪. "ಬಸವಣ್ಣನವರ ಉಪದೇಶಪರ ವಚನಗಳಲ್ಲಿ ಸರ್ವಸಮಾನತೆ, ಭೂತದಯೆ, ನೀತಿನಿಷ್ಠೆ, ಶಿವಭಕ್ತಿ ಇದನ್ನು ಕಳಕಳಿಯಿಂದ ತಿಳಿಸಿ ಹೇಳುವ

ಸ್ಫೂರ್ತಿಯಿದೆ. ಹಲವು ವಚನಗಳು ಅಂತಃಪ್ರಜ್ಞೆಯ, ಅನುಭಾವದ ಶಿಖರದಿಂದ ಕೆಳಗಿಳಿದು ಶ್ರುತಿಯ ಶಕ್ತಿ ಕಾಂತಿಗಳನ್ನು ತೋರಿವೆ. ಅನೇಕ ವಚನಗಳಲ್ಲಿ ಲೋಕ ಸುಮುಖ ದೃಷ್ಟಿಯ ಮೂಲಕ ಜನಜೀವನದಿಂದೆತ್ತಿದ್ದ ದೃಷ್ಟಾಂತಗಳು, ಗಾದೆಗಳು, ಪಡಿಮಾತುಗಳು ಇವುಗಳ ಸೂತಿಯಾಗಿದೆ."

೫. "ಸಾಮಾನ್ಯವಾಗಿ ಬಸವೇಶ್ವರನ ವಚನಗಳು ಪ್ರಸನ್ನ ಲಲಿತವಾಗಿವೆ. ಹೃದಯ ಸ್ಪರ್ಶಿಯಾಗಿವೆ. ಅವು ವೀರಶೈವ ಧರ್ಮದ ಹಾಗೂ ವಿಶ್ವಧರ್ಮದ ಕನ್ನಡಿಯಾಗಿದ್ದು ಕನ್ನಡ ಸಾಹಿತ್ಯಕ್ಕೆ ವಿಶೇಷ ಕಾಂತಿಯನ್ನುಂಟು ಮಾಡಿವೆ."

೬. "ವಚನಗಳೆಂದರೆ ನಡುಗನ್ನಡ ಶೈಲಿಯ ಅನುಭಾವ ಗದ್ಯದಲ್ಲಿ ಉಸುರಿದ ಆಧ್ಯಾತ್ಮಿಕ ಭಾವಗೀತೆಗಳು. ಜಗತ್ತಿನ ಸಾಹಿತ್ಯದಲ್ಲಿ ಇವುಗಳನ್ನು ಹೋಲುವ ರೂಪ ಕಡಿಮೆ. ಕನ್ನಡದಲ್ಲಿಯಂತೂ ಅಪೂರ್ವ"

—ಶ್ರೀ. ರಂ. ಶ್ರೀ. ಮುಗಳಿ.

೭. "ವಚನಗಳು ಸುಲಭವಾಗಿ, ಸ್ವಾಭಾವಿಕವಾಗಿ, ಸಂಕ್ಷೇಪವಾಗಿ, ಸೂತ್ರವಾಗಿ, ವರ್ಣನಾತ್ಮಕವಾಗಿ, ಸತಿಪತಿಭಾವದಿಂದ ಕೂಡಿ, ನಿರುಕ್ತ ರೀತಿಯಿಂದ, ಗೂಢಾತ್ಮಕವಾಗಿ, ತಾಲಬದ್ಧವಾಗಿ ಸಮತೂಕದಿಂದ ಕೂಡಿ ಇರುವವು."

— ಶ್ರೀ. ರಂ. ರಾ. ದಿವಾಕರರು.

೮. "ವೀರಶೈವ ಸಾಹಿತ್ಯದಲ್ಲಿ ಕನ್ನಡತನ ಹೃದಯವನ್ನು ಸೆರೆಹಿಡಿಯುತ್ತವೆ. ವೀರಶೈವ ಸಾಹಿತ್ಯ ಸಂಸ್ಕೃತಿಗಳೆಂದರೆ ಕನ್ನಡ ಸಾಹಿತ್ಯ ಸಂಸ್ಕೃತಿ. ವೀರಶೈವ ಧರ್ಮವೆಂದರೆ ಕನ್ನಡ ಧರ್ಮ."

ಶ್ರೀ. ಅ. ನ. ಕೃಷ್ಣರಾಯರು.

೯. "ಕನ್ನಡಿಗರಿಗೆ ಅವರ ತಾಯಿಮಾತಿನಲ್ಲಿಯೇ ಅವರ ನೋವಿನ ಪರಿಜ್ಞಾನ ಮಾಡಿಕೊಟ್ಟರು."

೧೦. "ವಚನಕಾರರ ಒಂದೊಂದು ಶಬ್ದಗಳ ಉತ್ಪತ್ತಿಯಲ್ಲಿ ಕನ್ನಡಿಗನ ಜೀವನವೇ ಜೀಕುತ್ತಿದೆ."

೧೧. "ಇದು ಒಳ್ಳೆಯ ವ್ಯಾಕರಣವೂ ಹೌದು. ಏಕೆಂದರೆ ಜನಸಾಮಾನ್ಯರು ಮಾತನಾಡುವ ಭಾಷೆಯೇ ವ್ಯಾಕರಣವೆಂದು ಪಾಣಿನಿ ಹೇಳುತ್ತಾನೆ."

೧೨. "ತತ್ವಗಳನ್ನು ತಮ್ಮ ಅಂತರಾತ್ಮನ ಪಡಿಯಚ್ಚಿನಲ್ಲಿ ಒತ್ತಿ ಅವುಗಳಿಗೆ ಒಂದು ವಿಶಿಷ್ಟ ರೂಪವನ್ನು ಕೊಟ್ಟು, ತಿಳಿಗನ್ನಡದ ಉಡುಪನ್ನು ತೊಡಿಸಿ, ಪಂಡಿತಪಾಮರರಿಗೆ ಮನೋಹರ ಮತ್ತು ಮನದಟ್ಟಾಗುವಂತೆ ಶಿವಶರಣರು ಈ ವಚನಶಾಸ್ತ್ರವನ್ನು ರಚಿಸಿದ್ದಾರೆ."

೧೩. "ವಚನವೆಂಬ ಹೂವಿನಲ್ಲಿ ಸವಿಜೇನಿದೆ. ಎಳೆಯ ಮಗುವಿನ ಮೊಗದಲ್ಲಿ ಅದರ ಭಾವವೆಲ್ಲ ಕಾಣುವಂತೆ, ತಿಳಿಗನ್ನಡದಲ್ಲಿ ವಿಶ್ವವೆಲ್ಲ ಪ್ರತಿಬಿಂಬಿಸುವಂತೆ ಈ ವಚನಾಮೃತದಲ್ಲಿ ವಚನಸಾರವೆಲ್ಲ ಪ್ರತಿಬಿಂಬಿತವಾಗಿದೆ."

೧೪. "ವಚನಸಾಹಿತ್ಯ ಶ್ರೇಷ್ಠ, ಅನುಪಮ, ಆಧ್ಯಾತ್ಮಿಕ ಸಾಹಿತ್ಯವೂ ಆಹುದು."

೧೫. "ತಾನು ಪಂಡಿತ ಶ್ರೇಷ್ಠನೆನಿಸಿದ್ದರೂ ತಂದೆಯು ತನ್ನ ಚಿಕ್ಕ ಮಗುಗಳೊಡನೆ ಒಬ್ಬ ಮಗುವಾಗಿಯೇ ಮಾತನಾಡುವಂತೆ ವಚನಕಾರರು ಕರ್ಣಾಟಕ ಜನತೆಗೆ ತಿಳಿನುಡಿಯಲ್ಲಿ ತಮ್ಮ ಉಪದೇಶಾಮೃತವನ್ನು ಉಣಿಸಲೆತ್ನಿಸಿದ್ದಾರೆ."

೧೬. "ವಚನವೆಂದರೆ ನುಡಿ, ಮಾತು, ಹೇಳಿಕೆ. 'ಕಿರಿದರೊಳು ಪಿರಿದರ್ಥ,' ಒಂದು ಬಗೆಯ ಮೋಹಕ ರಾಗ, ತಾಳ, ಪ್ರಾಸ ಮತ್ತು ಪ್ರಮಾಣ ಬದ್ಧತೆ ಯಥಾಯೋಗ್ಯ ಶಬ್ದೋಪಯೋಗ ಕೌಶಲ, ವಿಚಾರ ವ್ಯಕ್ತಿಯಲ್ಲಿ ಸಾಧಿಸಿದ ಸಮತೂಕ, ತಿಳಿಗನ್ನಡ ಶಬ್ದಗಳ ಕುಶಲ, ಬಳಕೆ ಈ ಮುಂತಾದ ಗುಣಗಳು ವಚನ ವಾಙ್ಮಯದಲ್ಲಿ ಪರಮಾವಧಿಯನ್ನು ಮುಟ್ಟಿವೆ."

೧೭. "ಪಂಡಿತದಲ್ಲದವರು, ಗುರುಮನೆ ಅರಮನೆಗಳ ವಿಶೇಷ ಬೆಂಬಲವಿಲ್ಲದವರು, ಆಷ್ಟೊಂದು ಸಿರಿಸಂಪತ್ತುಗಳ ಸಹಾಯವಿಲ್ಲದವರು, ತಮ್ಮ ತಮ್ಮ ಕಾಯಕಗಳನ್ನು ನಮ್ರತನದಿಂದ ಮಾಡುತ್ತಿರುವ ಶಿವಶರಣರು ಈ ವಚನಗಳನ್ನು ರಚಿಸಿದರು ಎಂಬುದು ಈ ಶರಣರ ಸಂಸ್ಕೃತಿಯ ಹಿರಿಮೆಯನ್ನು ತೋರಿಸುವುದು."

೧೮. "ವಚನವೆಂದರೆ ಅಮೃತವಾಣಿ ಇದ್ದಂತೆ. ಹಾಲು ತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮರಳು, ತವರಾಜದಂತಹ ತೆರೆ

ನೊರೆಗಳಿದ್ದರೆ ಅದು ಹೇಗೆ ಉತ್ತಮೋತ್ತಮವೋ ಹಾಗೆ ಆದ್ಯರ ವಚನಗಳು ಅನುಭಾವ, ಸ್ಫೂರ್ತಿ, ನಡೆನುಡಿಗಳ ಮೇಳ ಮತ್ತು ಸುಲಭ ಶೈಲಿ ಇವೆಲ್ಲವುಗಳ ಸಂಗಮ ಸಾಧನವಾಗಿವೆ."

೧೯. "ವೀರಶೈವ ಮಹಾನುಭಾವರ ಭಾವನೇತಿಹಾಸ, ಚಾರಿತ್ರ್ಯ ವಚನಗಳಲ್ಲಿ ಸ್ಪಷ್ಟವಾಗಿ, ನಿರ್ವಂಚನ ರೀತಿಯಿಂದ ಪ್ರತಿಬಿಂಬಿತವಾಗಿವೆ"

೨೦. "ಸ್ವಯಂಪುರಕ್ಕೆ ಸಿದ್ಧಳಾದ ಅರಸುಮಗಳಂತೆ ನಾನಾ ಚಿನ್ನ ರನ್ನದ ವಸ್ತ್ರಾಲಂಕಾರಗಳಿಂದ ವಿಭೂಷಿತಳಾಗದಿದ್ದರೂ ವಚನ ವಧುವು ಋಷಿ ಕನ್ಯೆಯಂತೆ ತನ್ನ ನಿರ್ವ್ಯಾಜ ನೈಸರ್ಗಿಕ ವನದ ಸುಲಭವಾದ ಹೂ ಚಿಗುರುಗಳಿಂದ ಶೋಭಿಸುತ್ತಿರುವಳು."

೨೧. "ವಚನಕಾರರ ಈ ವೀರ ಸಂದೇಶವನ್ನು ಓದಿದೊಡನೆ ಕತ್ತಲೆ ಕವಿದ ನಮ್ಮ ದಾರಿಯ ಮೇಲೆ ಝಗ್ಗನೆ ಬೆಳಕು ಬೀಳುವುದು. ನಮ್ಮ ಕೈಯ್ಯಲ್ಲಿರುವ ಬರಿಯ ಬಾಂಢದಲ್ಲಿ ಮಧು ತುಂಬಿದಂತಾಗುವುದು. ನಮ್ಮ ರೂಕ್ಷ ಜೀವನವು ಹೊಸ ಅರ್ಥ ತುಂಬಿ ಸಂಪೂರ್ಣವಾಗುವುದು."

೨೨. "ಹುಚ್ಚು ಹೆಚ್ಚಾಗಿ ಹರಿಯಬಹುದಾದ ಒಡಲಬಂಡಿಗೆ ಶರಣರ ವಚನಗಳೆಂಬ ಕಡೆಗೀಲನ್ನು ಹಾಕಿದರೆ ಒಡಲ ಬಂಡಿ ಉಳಿದುಕೊಳ್ಳುತ್ತದೆ. ಅಲ್ಲದಿದ್ದರೆ ನರಕಕ್ಕೆ ಉರುಳಿಕೊಳ್ಳುತ್ತದೆ. ಪುನಃ ಎತ್ತಿ ನಿಲ್ಲಿಸಿದರೂ ಸ್ವಲ್ಪ ದೂರ ಹೋಗಿ ಉರುಳಿಕೊಳ್ಳುತ್ತದೆ."

## "ವಚನಗಳಲ್ಲಿ ಶರಣರು ಐಕ್ಯವಾಗಿದ್ದಾರೆ."

೨೩. "ವಚನಕಾರರು ಈ ಯಾವ ಸರಸ, ಸಬಲ, ಸುಲಭ, ಸರಳ ಸಾಧನವನ್ನು ಕೆಡುಕನ್ನು ಕೊಲ್ಲಲಿಕ್ಕೆ, ದುರ್ಜನರನ್ನು ಜರಿಯಲಿಕ್ಕೆ, ಶಲ್ಯದಂತೆ, ಶಿಲದಂತೆ, ಬಾಣದಂತೆ, ಬರ್ಚಿಯಂತೆ ಎಸೆದಿರುವದು. ಒಳ ತನ್ನು ವರ್ಧಿಸಲಿಕ್ಕೆ, ಗುಣವನ್ನು ಬೆಳೆಸಲಿಕ್ಕೆ ನಿರ್ಮಲ ನಿರ್ಝರದಂತೆ, ನೀರ ತೊರೆಯಂತೆ, ಮಳೆಯ ಕರೆಯಂತೆ ಅವರು ಅದನ್ನು ಉಪಯೋಗಿಸಿರುವರು. ಅಮೃತಾನುಭವದ ಧನ್ಯತೆಯನ್ನು ವರ್ಣಿಸುವಾಗ ಅವರ ವಚನಗಳು ಬಂಡುಂಡ ತುಂಬಿಯ ಝೇಂಕಾರದಂತೆ, ವಸಂತದ ಕೋಗಿಲೆಯ ಕುಕಿಲಿನಂತೆ ಕಂಗೊಳಿಸುವುವು. ಭಕ್ತನ-ಅಂತರ್ಯದಲ್ಲಿ ಉಕ್ಕುವ ಭಾವ

ಲಹರಿಗಳನ್ನು ಸುರುವಾಗ ವಚನಗಳಿಗೆ ಮುನ್ನೀರ ಅಲೆಗಳಂತೆ, ವಿರಹಿಣಿಯ ಗದ್ಗದಿತ ಉಲಿವಿನಂತೆ, ವೀಣೆಯ ಮಧುರ ಸ್ವರದಂತೆ ಅವರು ರೂಪು ಕೊಟ್ಟಿರುವರು ಧರ್ಮ ಮಾರ್ಗವನ್ನು ತೋರಿಸಲಿಕ್ಕೆ ಜೊಡೆಮಿಂಚಿನಂತೆ, ನಿರ್ಮಲ ಜ್ಯೋತಿಯಂತೆ ಆ ವಚನಗಳ ಉಪಯೋಗವನ್ನು ಅವರು ಮಾಡಿರುವರು. "

೨೪. "ಬಸವಣ್ಣನವರ ವಚನಗಳು ಬರಿ ನಟನೆಯಲ್ಲ, ಅವು ಅಂತರಂಗ ಸ್ಫುರಿತ ಭಾವಗಳು. "

೨೫. "ಅವರ ಬೋಧೆಯಲ್ಲಿ ಕಾಠಿನ್ಯವಿಲ್ಲ. ಅಧಿಕಾರದ ಸ್ವರವಿಲ್ಲ. ಕಣ್ಣ ಮುಂದೆ ರಾಶಿಯಾಗುತ್ತಿರುವ ಪಾಪ ಸಮುದಾಯದಿಂದ ಸಂತಪ್ತರಾಗಿ 'ಅಪ್ಪಾ!' 'ಅಣ್ಣಾ!' ಎಂಬ ಪ್ರೇಮ ವಚನಗಳಿಂದ ಕೈಹಿಡಿದು ಬುದ್ಧಿಗಲಿಸುವ ಕೋಮಲ ಹೃದಯವು ಬಸವಣ್ಣನವರದು. ಅವರ ಮಾತುಗಳಲ್ಲಿ ಅಷ್ಟೊಂದು ಮಾಧುರ್ಯವಿದೆ, ಅನುಭವವಿದೆ, ಪ್ರೇಮವಿದೆ, ಹಿತವಿದೆ. "

೨೬. "ಕನ್ನಡ ನುಡಿಯ ಸೊಬಗು ಗತಿ ಮತ್ತು ಅಡಕ ಬಸವಣ್ಣನವರ ವಚನಗಳಲ್ಲಿ ಸೊಗಸಾಗಿ ಕಂಡುಬರುತ್ತದೆ. ಕನ್ನಡ ಜಾತಿ ವಿಶಿಷ್ಟ ಗುಣ, ಅದರ ದೇಶೀಯತೆ ಸ್ಫುಟವಾಗಿ ಕಂಡುಬರುತ್ತದೆ. ಆಡುವ ಭಾಷೆ ತತ್ವನಿರೂಪಣೆ ಮಾಡಬಲ್ಲದೆಂಬುದನ್ನು, ಆಡುವ ಭಾಷೆ ಉತ್ತಮ ಸಾಹಿತ್ಯವಾಗಬಲ್ಲದೆಂಬುದನ್ನು ಬಸವಣ್ಣನವರು ತೋರಿಸಿಕೊಟ್ಟಿದ್ದಾರೆ; ಜನಸಾಮಾನ್ಯರ ಹಸಿವು ನೀಗುವಂತೆ ತತ್ವಾಮೃತವನ್ನು ಅವರ ಮಧ್ಯದಲ್ಲಿ ಹರಿಯಬಿಟ್ಟಿದ್ದಾರೆ. ಅವರಿಗೆ ಮತಧರ್ಮದಲ್ಲಿ ಹೇಗೊ, ಹಾಗೆಯೇ ಸಾಹಿತ್ಯದಲ್ಲೂ ಉನ್ನತ ಸ್ಥಾನವಿದೆ. "

೨೭. "ಶಾಸ್ತ್ರವೂ ಸಾಹಿತ್ಯವೂ ಆದ ವಚನಗಳು ಕನ್ನಡ ಸಾಹಿತ್ಯದ ಜೀವ ರತ್ನಗಳು, ಕನ್ನಡ ನುಡಿಯ ಚೆಲುವನ್ನು ಬೆಳಗುವ ಹಿರಿಯ ಮಾತಗಳು. "

೨೮. "ಶರಣರು ಸಾಧಿಸಿದ ಸುಧಾರಣೆ ಕ್ರಾಂತಿಗಳೂ ಅವರ ನಿರ್ಭಯ ನಿದಾರ್ಕ್ಷಿಣ್ಯ ವಿಚಾರಪರತೆ ಮುತ್ತಿನ ಮಣಿಯಂತೆ ಹೊಳೆಯುವ ತಿಳಿಗನ್ನಡದಲ್ಲಿ ವ್ಯಕ್ತವಾಗಿವೆ. "

೨೯. "ವೈಯ್ಯಕ್ತಿಕ ಮನೋಭಾವ, ಅಂತರಂಗದ ಹೋರಾಟ, ಧರ್ಮಬೋಧೆ, ಹೃದಯದಿಂದ ಹೊರಟು ನೇರವಾಗಿ ಹೃದಯವನ್ನು ಮುಟ್ಟುವ ಸರಳ ಶೈಲಿ ಇವು ವಚನಗಳಲ್ಲಿರುವುದರಿಂದ ಈ ಸಾಹಿತ್ಯದಲ್ಲಿ ಜೀವ ಕಳೆಯಿದೆ ಮತ್ತು ಸಾಹಿತ್ಯ ಅಮೂಲ್ಯವಾಗಿದೆ."

೩೦. "ವಚನ ಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸ್ವತ್ತು. ವಚನಕಾರರು ಸಂಸ್ಕೃತದ ಆಚಾರ್ಯರಲ್ಲ; ಅವರು ಅಚ್ಚ ಕನ್ನಡದ ಬೇಸಾಯಗಾರರು."

೩೧. "ವೀರಶೈವ ಗೃಹ್ಯ ಸೂತ್ರಗಳು, ಧರ್ಮಸೂತ್ರಗಳು, ವೇದಾಂತ ಸೂತ್ರಗಳು, ಆಚಾರ ವ್ಯವಹಾರಗಳು, ಮತತತ್ವಗಳು ಎಲ್ಲವೂ ಸೇರಿ ವಚನ ಸಾಹಿತ್ಯ ವೀರಶೈವ ಧರ್ಮ ಸಾಹಿತ್ಯವಾಗಿದೆ."

೩೨. "ವಚನ ಧರ್ಮವು ಸಮಾಜದಲ್ಲಿ ಸ್ವಾತಂತ್ರ್ಯ, ಸರ್ವಸಮಾನತೆ, ಪರಸ್ಪರ ಭ್ರಾತೃತ್ವ ಭಾವನೆಗಳನ್ನು ಬೋಧಿಸುತ್ತದೆ."

೩೩. "ವಚನಗಳು ಧರ್ಮವನ್ನು ಬೋಧಿಸುವುದರಿಂದ ಧರ್ಮಗ್ರಂಥಗಳಾಗಿವೆ. ತತ್ವವನ್ನು ಬೋಧಿಸುವುದರಿಂದ ಸಿದ್ಧಾಂತ ಗ್ರಂಥಗಳಾಗಿವೆ. ಕಾವ್ಯ ಲಕ್ಷಣಗಳನ್ನು ಒಳಗೊಂಡಿರುವುದರಿಂದ ಉತ್ತಮ ಸಾಹಿತ್ಯ ಗ್ರಂಥಗಳೂ ಆಗಿವೆ."

—ಶ್ರೀ ಎಂ. ಆರ್. ಶ್ರೀ.

೩೪. "ವಚನಗಳು ಗದ್ಯದ ಒಂದು ವಿಶಿಷ್ಟ ಮಾದರಿ ಎಂದು ಹೇಳಬಹುದಾದರೂ ಅವು ಗದ್ಯಪದ್ಯಗಳ ನಡುವಿನ ಒಂದು ಮಾದರಿ."

—ಶ್ರೀ. ಶಿ. ಶಿ. ಬಸವನಾಳರು.

೩೫. "ಬಸವಣ್ಣನವರು ಭಾಷಾ ಪಂಡಿತರಲ್ಲ, ಭಾಷಾ ಜನಕರು ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಬಹುದೆಂಬುದನ್ನು ತೋರಿಸುತ್ತವೆ. ಅವರ ಹೃದಯವು ಕರಗಿ ನೀರಾಗಿ ವಚನಗಳ ರೂಪದಲ್ಲಿ ಹರಿದಿದೆ. ವಚನ ಪ್ರವಾಹದಲ್ಲಿ ಅವರ ವಿಚಾರಗಳು ಭೋರ್ಗರೆಯುತ್ತಿವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ. ತತ್ವರತ್ನಗಳು ಥಳಥಳಿಸುತ್ತಿವೆ. ಆ ವಚನಗಳಲ್ಲಿ ನಾವೀನ್ಯವು ಮಿನುಗುತ್ತಿದೆ.

ತೇಜವು ತುಳುಕುತ್ತಿದೆ. ಅವು ಅವರ ಮೃದುವಾದ ಒಳ ಎದೆಯ ಒಳನುಡಿಗಳು; ನಂಜಿನ ನಾಲಗೆಯ ಬಿರುನುಡಿಗಳಲ್ಲ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ, ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ, ಅನುಭವದ ಕಾಠಿನ್ಯವು ಕಂಗೊಳಿಸುತ್ತಿದೆ. ಅವರ ಆಚಾರದ ಕೆಚ್ಚು ಅಲ್ಲಿ ಕಾಣುತ್ತದೆ, ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ. ಬಸವಣ್ಣನವರ ಈ ವಚನಗಳು ಕನ್ನಡ ಭಾಷಾ ಪ್ರವಾಹವನ್ನು ಹೊಸ ಬದಿಗೆ ತಿರುಗಿಸಿದವು. —ಶ್ರೀ ಆಲೂರ ವೆಂಕಟರಾಯರು.

೩೬. "ಸಾಹಿತ್ಯ ಮತ್ತು ಜನಜೀವನಕ್ಕೆ ನಿಕಟಸಂಬಂಧವೇರ್ಪಟ್ಟದ್ದು ವಚನ ಸಾಹಿತ್ಯದಿಂದ ಕನ್ನಡ ನುಡಿಯ ಸಾಮರ್ಥ್ಯ ಎಷ್ಟೆಂಬುದನ್ನು ವಚನಕಾರರು ತೋರಿಸಿಕೊಟ್ಟರು."

೩೭. "ಅತಿ ವಿರಳವಾಗಿದ್ದ ಗದ್ಯರೂಪವು ಕನ್ನಡ ಸಾಹಿತ್ಯದ ಒಂದು ಸ್ವತಂತ್ರ ಅಂಗವಾಗಿ ಫಲ ಬಿಟ್ಟಿದ್ದು ವಚನಗಳ ರಚನೆ ಪ್ರಾರಂಭವಾದಂದಿನಿಂದ."

೩೮. "ವೇದವನ್ನು ಕೇಳಲು ಮತ್ತು ಓದಲು ಶೂದ್ರರಿಗೂ ಸ್ತ್ರೀಯರಿಗೂ ಅಧಿಕಾರವಿಲ್ಲವೆಂಬ ನಿರ್ಬಂಧವಿದ್ದ ಕಾಲದಲ್ಲಿ, ಸಂಸ್ಕೃತವು ಜನರಿಗೆ ಅರ್ಥವಾಗದ ಕಾಲದಲ್ಲಿ ಬಸವಣ್ಣನವರು ಜ್ಞಾನದ ಹೆದ್ದೊರೆಯನ್ನು ಎಲ್ಲೆಡೆ ಹರಿಸಿದರು. ವಚನಗಳ ಮೂಲಕ ಜ್ಞಾನ ದೀವಿಗೆ ಬೆಳಗಿತು. ವಚನ ಬೋಧೆಯಿಂದ ಸಮಾಜೋದ್ಧಾರವಾಯಿತು."

೩೯. "ಭಾವ ಭಾಷೆಗಳ ಹೆಸನಾದ ಬೆಸುಗೆ, ಉನ್ನತ ಭಾವನೆಗೆ ರಥ-ವಚನ ಸಾಹಿತ್ಯ."

೪೦. "ಅವರ ವಚನಗಳಲ್ಲಿ ಅನುಭವದ ಸಂದೇಶವಿದೆ, ವಿಚಾರಧಾರೆಯಿದೆ, ಲೋಕವನ್ನು ಮೆಚ್ಚಿಸುವುದಕ್ಕಾಗಿ ಅವರು ವಚನಗಳನ್ನು ಆಡಲಿಲ್ಲ, ಹಾಡಲಿಲ್ಲ. ಅವರು ನ್ಯಾಯ ನಿಷ್ಠುರರು; ದಾಕ್ಷಿಣ್ಯಪರರಲ್ಲ. ಜನರ ಟೀಕೆಗೆ ಹೆದರದೆ ಉಪದೇಶ ಮಾಡಿದ್ದಾರೆ. ಅವರ ವಚನಗಳಲ್ಲಿ ಸತ್ಯ ನಿದ್ಯಾಕ್ಷಿಣ್ಯತೆಗಳ ಕೆಚ್ಚನ್ನೂ, ಸಕಲರಿಗೂ ಲೇಸನ್ನು ಬಯಸುವ ಉದಾರ ಮನೋಭಾವವನ್ನು ಆದರ್ಶ ಜೀವನದ ಹೊಳಪನ್ನೂ ನೋಡಬಹುದು." —ಶ್ರೀ ಗ. ಸ. ಹಾಲಪ್ಪನವರು.

## ಈ ಲೇಖನಕ್ಕೆ ಬಳಿಸಿಕೊಂಡ ಹೊತ್ತಗೆಗಳು.

೧. ಬಸವಣ್ಣನವರ ಷಟ್ಸ್ಥಲ ವಚನಗಳು.

೨. ವಚನಶಾಸ್ತ್ರ ರಹಸ್ಯ. : ಶ್ರೀ ರಂ. ರಾ. ದಿವಾಕರರು.

೩. ವಚನಶಾಸ್ತ್ರಸಾರ

೪. ಭಕ್ತಿಭಾಂಡಾರಿ ಬಸವಣ್ಣನವರು

(೩, ೪) : ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿ.

೫. ಬಸವರಾಜದೇವರ ರಗಳೆ : ಶ್ರೀ. ಟಿ. ಎಸ್. ವೆಂಕಣ್ಣಯ್ಯನವರಿಂದ ಸಂಪಾದಿತವಾದದ್ದು.

೬. ಕನ್ನಡಸಾಹಿತ್ಯ ಚರಿತ್ರ : ಶ್ರೀ. ರಂ. ಶ್ರೀ. ಮುಗಳಿ.

೭. ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ. : ಶ್ರೀ ಅ. ನ. ಕೃಷ್ಣರಾಯರು.

೮. ಸಮಾಜೋದ್ಧಾರಕ ಬಸವಣ್ಣ. : ಶ್ರೀ. ಗ. ಸ. ಹಾಲಪ್ಪ.

# ಪರಾಭಕ್ತಿಯ ಸವಿನುಡಿಗಳು.

(ಬರೆದವರು:— ಶ್ರೀ. ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ)

೧. ನಿಜವಾದ ಈಶ್ವರಾನುರಾಗಿಗಳು ಭಗವದ್ಭಕ್ತಿ ಎಂಬ ಅಮೃತ ಪಾನದಿಂದ ಉನ್ಮತ್ತರಾಗಬಯಸುವರು. ಭಕ್ತರಿಗೆ ಪ್ರೀತಿಯೇ ಫಲ ಗುರಿ, ದಂಡೆಗಳು. ಈ ಪ್ರೀತಿಯೇ ಭವರೋಗವನ್ನು ನಾಶ ಮಾಡುವದು.

೨. ಭಕ್ತದ್ವೈತಿಯಂತೆ ಪ್ರಾರಂಭಿಸಿ ಅದ್ವೈತಿಯಾಗುವನು. ನಾನೇ ನೀನೂ ನೀನೆ ನಾನು ನಿನ್ನ ಪೂಜೆಯೇ ನನ್ನ ಪೂಜೆಯು, ನಿನ್ನ ಪೂಜೆ ಇದೇ ಶಕ್ತಿವಿಶಿಷ್ಟಾದ್ವೈತವೆನಿಸುವದು.

೩. ತುತ್ತತುದಿಯಲ್ಲಿ ಪ್ರೇಮುಕ, ಪ್ರೇಮದ, ಪ್ರೇಯನ। ಭಗವಂತ, ಭಕ್ತ, ಭಕ್ತಿ, ಈ ತ್ರಿಪುಟಿಗಳೊಂದಾಗುವವು. ಇದೇ ಶಕ್ತಿವಿಶಿಷ್ಟಾದ್ವೈತವು.

೪. ಗಾಢಪ್ರೇಮದಲ್ಲಿ ಸಂಪ್ರದಾಯದ ಸಂಕೋಲೆಗಳು ಕರಗಿ ಇಷ್ಟ ಮೂರ್ತಿಯು ಭಕ್ತನ ಮನದಲ್ಲಿರುವ ಬರಿಯ ಕಲ್ಪಿತಭಾವವಾಗಿರದೆ ರಕ್ತ ಮಾಂಸಗಳಿಂದ ಕೂಡಿದ ಸಜೀವ ಮೂರ್ತಿಯಂತೆ ನಲಿಯುತ್ತಾನೆ.

೫. ಭಕ್ತನು ದೇವರ ಪ್ರೇಮದಲ್ಲಿ ತಲ್ಲೀನನಾದಾಗ ಮಾತ್ರ ಮೂರ್ತಿ ಪೂಜೆಯು ಅಭಾವವಾಗುವದು. ಅಹಂಕಾರದ ವಿನಾಶದಲ್ಲಿಯೇ ಮೂರ್ತಿ ಪೂಜೆಯು ವಿನಾಶವಿರುವದು.

೬. ವೇದ, ಕುರಾನ, ಬಾಯಿಬಲ್, ಚರ್ಚ, ಮಸೀದೆ, ಗುಡಿ, ಕ್ರಿಸ್ತ ಮಹಮ್ಮದ ಶಿವ ಇವರನ್ನು ಪವಿತ್ರವೆಂದು ಗೌರವಿಸುವದೂ ಮೂರ್ತಿ ಪೂಜೆ.

೭. ಬದುಕಿರುವವರೆಗೆ ಪ್ರೇಮ ಹಾಗು ಭಕ್ತಿಗಳ ರಹಸ್ಯವನ್ನು ಯಾವಾಗಲೂ ಕಲಿಸುತ್ತಿರುವದರಿಂದ ಕಲ್ಯಾಣವೇ ಆಗುವದು.

೮. ಭಕ್ತಿಯು ಸ್ತ್ರೀ ಇದ್ದಂತೆ, ಜ್ಞಾನವು ಪುರುಷನಿದ್ದಂತೆ, ರಾಜ ಮಂದಿರಕ್ಕೆ (ದೇವರೆಡೆಗೆ) ಹೋದರೆ ಸ್ತ್ರೀ (ಭಕ್ತಿ) ಅಂತರಂಗದ ಕೋಣೆಗೆ ಪ್ರವೇಶ ಮಾಡುವಳು. ಪುರುಷನು (ಜ್ಞಾನ) ಪಡಸಾಲಿಯ ವರೆಗೆ ಪ್ರವೇಶ ಮಾಡುವನು.

೯. ಪ್ರೇಮಸೂತ್ರ ಇದ್ದ ಕಡೆಗೆ ಪರಮಾತ್ಮನು ಹೋಗುವನು. ಭಕ್ತನ ಅಂತಃಕರಣದಲ್ಲಿ ಶ್ರದ್ಧೆ-ಭಕ್ತಿಗಳು ತುಂಬಿದವೆಂದರೆ ಪರಮಾತ್ಮನು ತತ್ಕಾಲಕ್ಕೆ ಅವನ ಕಡೆಗೆ ಧಾವಿಸಿ ಬಂದು ಅವನ ಅಡಿಯಾಳಾಗುವನು.

೧೦. ಜಯಶಾಲಿ ಪಾರ್ವತಿಪತೆ ಹರಹರಮಹಾದೇವ ಎಂದು ದೊಡ್ಡ ದ್ವನಿಯಿಂದ ಕೂಗಿ ಕೈಗಳಿಂದ ತಾಳಹಾಕುತ್ತ ಕುಣಿದಾಡಿದರೆ ಭಕ್ತಿಯ ಪ್ರಚಂಡ ಸ್ವರೂಪುಗಳು.

೧೧, ನಿಸ್ಸೀಮ ಭಕ್ತನು ಭಗವಂತನನ್ನು ಒಳ್ಳೇ ಸಮೀಪದ ಆಪ್ತನಂತೆ ಭಾವಿಸಿದರೆ ಅದೇ ಪರಭಕ್ತಿ ಎನಿಸುವದು. ಅಕ್ಕಮಹಾದೇವಿ ಗೋಪಿಯರು ಇದನ್ನು ಮಾಡಿದರು.

೧೨. ಪರಮೇಶ್ವರನ ಮಹಿಮೆಲೀಲೆನಾಮಗಳನ್ನು ಸ್ಮರಿಸಿದ ಕೂಡಲೇ ಯಾವನ ಮೈಮೇಲೆ ರೋಮಾಂಚಗಳೇಳುವವೋ ಯಾವನ ಕಣ್ಣುಗಳಿಂದ ಆನಂದಾಶ್ರುಗಳು ಹರಿಯುವವೋ ಯಾವನ ಕಂಠವು ಗದ್ಗದವಾಗುವದೋ ಅವನೇ ಭಕ್ತಶ್ರೇಷ್ಠ.

೧೩. ಶಿವ, ಅವನ ನಾಮ, ಅವನ ಭಕ್ತ ಇವವೆಲ್ಲ ಒಂದೇ ಸರಿ.

೧೪. ಪೂಜಿಸುವ ಮೂರ್ತಿಗಳೆಲ್ಲ ನಿಜವಾದ ದೇವರೆಂದು ಯಾರು ತಿಳಿಯುವರೋ ಅವರು ದೇವರನ್ನು ಕಾಣುವರು.

೧೫. ದೇವರ ಭಕ್ತಿ ಪ್ರೇಮಕ್ಕಾಗಿ ಅಡ್ಡಿ ಬಂದ ತಾಯಿ ತಂದೆ ಹೆಂಡತಿ ಮಗ ಗೆಳೆಯ ಮೊದಲಾದವರನ್ನು ತೊರೆದರೆ ಪಾಪವಿಲ್ಲ.

೧೬. ಈಶ್ವರನ ಹೊರತು ಮಾನವನು ಎಂದೂ ಜೀವಿಸಲಾರನು.

೧೭. ಭಕ್ತಿ ಬೆಕ್ಕಿನ ಮರಿಯಂತೆ ಜ್ಞಾನ ಮಂಗನ ಮರಿಯಂತೆ ಬೆಕ್ಕಿನ ಮರಿ ತಾಯಿಯನ್ನು ನಂಬಿರುವದರಿಂದ ತ್ರಾಸು ಆಗುವದಿಲ್ಲ. ಇದು ನಿರಹಂಕಾರ ಸೂಚಿಸುವದು. ಮಂಗನ ಮರಿ ತನ್ನ ಶಕ್ತಿಯ ಮೇಲೆ ಅವಲಂಬಿಸಿರುವದು, ಬಲ ತ್ರಾಸ ಮಾಡಿಕೊಳ್ಳುವದು, ಅಹಂಕಾರವನ್ನು ಸೂಚಿಸುವದು.

———

# ಶಿವಶರಣೆಯರ ಚರಿತ್ರೆಗಳು.




ಸಂಪಾದಕರು.

ಡಾ॥ ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ. ( ಡಿ. ಲಿಟ್ )

ವಿ ಜಾ ಪು ರ.





( ಈ ಗ್ರಂಥದ ಸ್ವಾಮಿತ್ವವು ಕಾದಿಡಲ್ಪಟ್ಟಿದೆ. )

ಈ ಗ್ರಂಥದ ಯಾವದೇ ಭಾಗವನ್ನು ಯಾವದೇ ಭಾಷೆಯಲ್ಲಿ ಭಾಷಾಂತರಿಸುವ ಮತ್ತು ಅದರ ನಕಲು ಮಾಡಿ ಪ್ರಸಿದ್ಧಿಸುವ ಅಧಿಕಾರವು ಯಾರಿಗೂ ಇರುವದಿಲ್ಲ.


ಬೆಲೆಃ- ೨ ರೂ. ೮ ಆ.

ಇದನ್ನು ವಿಜಾಪುರದಲ್ಲಿ
ಡಾ. ರಾ|| ಬ|| ಫ. ಗು. ಹಳಕಟ್ಟಿ. ಇವರು ತಮ್ಮ
" ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿ " ಸಲ್ಲಿ ಮುದ್ರಿಸಿದರು.
ಮತ್ತು ಅವರು ವಿಜಾಪುರದಲ್ಲಿ
ವಾರ್ಡ ನಂ|| ೨. ಮನೆ ನಂ|| ೧೩೬೮ ನೇ ಮನೆಯಲ್ಲಿ
ಪ್ರಕಟಿಸಿದರು.

# ಪ್ರಸ್ತಾವನೆ.



ಈಚೆಗೆ ಹಿಂದಿನ ಕಾಲದ ಸ್ತ್ರೀಯರು ಮಾಡುತ್ತ ಬಂದ ಧರ್ಮೋದ್ಧಾರ ಮತ್ತು ಸಮಾಜ ಸುಧಾರಣೆಯ ಕಾರ್ಯಗಳನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯು ದಿನೆದಿನೆ ಹೆಚ್ಚುತ್ತ ಬರುತ್ತಿದೆ. ಇದು ಶುಭಚಿನ್ಹವಾಗಿದೆ. ನಾವು ಈಗ ಪ್ರಕಟಿಸಿದ ಗ್ರಂಥದಿಂದ ಶಿವಶರಣೆಯರ ಸಂಖ್ಯೆಯು ವೀರಶೈವರಲ್ಲಿ ಬಹಳ ದೊಡ್ಡದಾಗಿರುತ್ತದೆಂಬುದು ತಿಳಿದುಬರುತ್ತದೆ. ಆದರೆ ಅವರ ಚರಿತ್ರೆಗಳು ಈ ವರೆಗೆ ವ್ಯವಸ್ಥಿತವಾಗಿ ಸಂಗ್ರಹಿಸಲ್ಪಟ್ಟಿದ್ದಿಲ್ಲ. ಈಗ ನಾವು ವಾಚಕರೆದುರಿಗೆ ಇಟ್ಟಿರುವ ಸಂಗ್ರಹವು ಇದರಲ್ಲಿ ಪ್ರಥಮ ಪ್ರಯತ್ನವಾಗಿರುತ್ತದೆಂದು ನಾವು ತಿಳಿಯಬಹುದು.

ಈ ಶರಣೆಯರ ಸ್ಥಾನಗಳು ಮುಖ್ಯವಾಗಿ ಕರ್ನಾಟಕದಲ್ಲಿ ಇದ್ದು ಅವು ಇಲ್ಲಿ ಎಲ್ಲ ಕಡೆಗೂ ಪಸರಿಸಿರುತ್ತವೆ. ಮುಖ್ಯವಾಗಿ ಅವು ಉತ್ತರ ಕರ್ನಾಟಕದಲ್ಲಿರುವದು ಕಂಡುಬರುತ್ತದೆ. ವೀರಶೈವ ಮತದ ಬಗ್ಗೆ ಮುಖ್ಯ ಆಂದೋಲನಗಳು ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಆಗಿರುವದರಿಂದ ಹೀಗಾಗುವದು ಸ್ವಾಭಾವಿಕವಾಗಿದೆ. ಈ ಕಾಲದಲ್ಲಿ ವಚನಗಳು, ರಗಳೆಗಳು, ತ್ರಿಪದಿಗಳು, ಸಾಂಗತ್ಯಗಳು, ಇಂಥ ವಾಙ್ಮಯದಲ್ಲಿ ಹೆಚ್ಚಿಗೆ ಉಪಲಬ್ಧವಾಗಿರುತ್ತವೆ. ಹೀಗೆ ಇವುಗಳನ್ನು ಆರಿಸಿ ತೆಗೆದು ಶಕ್ಯವಿದ್ದಷ್ಟು ಇವುಗಳು ಕ್ರಮುಗೊಳಿಸಲ್ಪಟ್ಟಿರುತ್ತವೆ. ಈ ಶರಣೆಯರು ಹೆಚ್ಚಾಗಿ ಹನ್ನೆರಡನೇ, ಹದಿಮೂರನೇ ಶತಮಾನಗಳಲ್ಲಿ ಉದಯವಾಗಿರುತ್ತಾರೆ. ಆದರೆ ಈ ಕೃತಿಗಳಲ್ಲಿ ಅವರ ಚರಿತ್ರೆಗಳು ಖಂಡಶಃ ದೊರೆಯುತ್ತವೆ. ಅವುಗಳನ್ನು ನಾವು ಈಗ ಒತ್ತಟ್ಟಿಗೆ ತರಲು ಪ್ರಯತ್ನಿಸಿದ್ದರ ಪರಿಣಾಮವೇ ಈಗಿನ ಗ್ರಂಥವಾಗಿರುತ್ತದೆ.

ಈ ಶರಣೆಯರಲ್ಲಿ ರಾಜರಿಂದ ಹಿಡಿದು ಕೂಲಿಯವರ ವರೆಗೂ ಎಲ್ಲ ತರಗತಿಯ ಜನರು ಇರುತ್ತಾರೆ. ಇವರಲ್ಲಿ ಸ್ತ್ರೀಯರು ಮಾತ್ರವಲ್ಲದೆ, ಬಾಲಕರೂ ವಿದ್ವಾಂಸರೂ, ಕೂಲಿಕಾರರೂ ಸಹ ಇರುವರು. ಇವರ ಚರಿ

ತ್ರೆಗಳನ್ನು ನಾವು ನೋಡಿದಲ್ಲಿ ಒಂದು ಕಾಲದಲ್ಲಿ ಕರ್ನಾಟಕದಲ್ಲಿ ಎಂಥ ಅದ್ಭುತ ಧಾರ್ಮಿಕ ಚಟುವಟಿಕೆಗಳು ಉಂಟಾಗಿದ್ದವೆಂಬುದರ ಕಲ್ಪನೆಯು ಬರುತ್ತದೆ. ಇವುಗಳ ವಿವರಗಳು ಈ ಗ್ರಂಥದಲ್ಲಿ ಸ್ಥೂಲವಾಗಿ ಬಂದಿದ್ದು ಅವುಗಳನ್ನು ಪರಿಶೀಲಿಸುವ ಭಾರವು ವಾಚಕರ ಮೇಲಿರುತ್ತದೆ. ಈ ಚರಿತ್ರೆಗಳಲ್ಲಿ ಬೊಂತಾದೇವಿ, ಮಹಾದೇವಿಯಮ್ಮ, ಕೋಳೂರು ಕೊಡಗೂಸು, ಬಾಲಲಿಂಗಣ್ಣ, ಕೋಲಂಬೆ, ಮೈದುನ ರಾಮಯ್ಯ ಇವರು ಚಿಕ್ಕವರು. ಇಂಥವರು ಸಹ ಶಿವಶರಣರ ಚಳವಳಿಯಲ್ಲಿ ಅಂಗವಹಿಸಿದ್ದು ಕಂಡುಬರುತ್ತದೆ.

ಬಸವೇಶ್ವರ, ದೇವರದಾಸಿಮಯ್ಯ ಇಂಥ ಅನೇಕ ಉಚ್ಚತರದ ವಿದ್ವಾಂಸರು ನಾಡಿನಲ್ಲಿ ಉಂಟಾಗಿ ಕಾರ್ಯಮಾಡಿದ್ದು ಕಂಡುಬರುತ್ತದೆ. ಇಂಥವರ ಸಮೀಪದಲ್ಲಿ ಅಥವಾ ಇವರ ಆಶ್ರಯದಲ್ಲಿದ್ದ ಶಿವಮಾಯಿದೇವಿ, ರೆಮ್ಮವ್ವೆ, ವಿಮಳಾದೇವಿ, ಗೌರವ್ವೆ, ವೀರದೇವಮ್ಮ ಹೀಗೆ ಅನೇಕ ಸ್ತ್ರೀಯರು ಶಿವಾನುಭವಿಗಳಾಗಿ ಸಮಾಜವನ್ನು ಎಚ್ಚರಿಸುವ ಕಾರ್ಯದಲ್ಲಿ ನೆರವಾಗಿರುವದು ಕಂಡುಬರುತ್ತದೆ. ಇಂಥವರ ಚರಿತ್ರೆಗಳು ಇದರಲ್ಲಿ ಬಂದಿದ್ದು ಅವು ಉದ್ಬೋಧಕವಾಗಿರುತ್ತವೆ.

ಬಸವೇಶ್ವರನ ಕಾಲದಲ್ಲಿ ವರದಾನಿಯಮ್ಮ, ನೀಲಾಂಬಿಕೆ, ಗಂಗಾಂಬಿಕೆ ನಾಗಲಾಂಬಿಕೆ, ಹೀಗೆ ಅನೇಕ ಶಿವಶರಣೆಯರು ಆಗಿದ್ದು ಇವರಲ್ಲಿ ಕೆಲವರು ಪ್ರಮುಖರೆಲ್ಲರು ಸತ್ತುಹೋದಬಳಿಕ ಬಸವಾದಿ ಪ್ರಮಥರು ಹಾಕಿಕೊಟ್ಟಿರುವ ಮಾರ್ಗವನ್ನು ಪಾಲಿಸುತ್ತ ಬಂದಿದ್ದು ಕಂಡುಬರುತ್ತದೆ. ಇವರ ವಿಷಯಗಳನ್ನು ವೀರಶೈವರು ಲಕ್ಷಗೊಟ್ಟು ಅಭ್ಯಾಸ ಮಾಡುವದು ಯೋಗ್ಯವಾಗಿರುತ್ತದೆ.

ಬಸವೇಶ್ವರನ ಕಾಲದಲ್ಲಿ ಪರಧರ್ಮೀಯರ ಸಂಖ್ಯೆಯು ಬಹಳ ದೊಡ್ಡದೂ ಪ್ರಬಲವೂ ಆಗಿತ್ತು. ಅವರಿಗೆ ಶಿವಶರಣರ ಉದಾರತತ್ವಗಳು ಪ್ರಸಾರವಾಗುವದು ಬೇಡಾಗಿತ್ತು. ಆದ್ದರಿಂದ ಈ ತತ್ವಗಳ ಪ್ರಸಾರ ಮಾಡುತ್ತ ಬಂದವರನ್ನು ಅವರು ಕಠೋರವಾಗಿ ಹಿಂಸಿಸಿರುವರು. ಇಂಥ ಹಿಂಸೆಗಳನ್ನು ಶರಣಶರಣೆಯರು ಧೈರ್ಯದಿಂದ ಸಹಿಸಿಕೊಂಡಿದ್ದಾರೆ. ಇಂಥವರಲ್ಲಿ ಅನೇಕರು ತಮ್ಮ ಪ್ರಾಣಾರ್ಪಣ ಸಹ ಮಾಡಿದ್ದಾರೆ. ಇದರ ವಿವರಣೆಗಳು ಅತ್ಯಂತ ಹೃದಯದ್ರಾವಕವಾಗಿರುತ್ತವೆ. ಹೀಗೆ ಆಚರಿಸಿದ ಅಬಲೆ

ಯರು ಇಂಥ ಹಿಂಸೆಗಳನ್ನು ತಾಳಿಕೊಂಡು ಬಂದಿದ್ದರಿಂದಲೇ ವೀರಶೈವ ಧರ್ಮವು ಎಲ್ಲ ಕಡೆಗೆ ಪ್ರಸಾರಹೊಂದಿರುತ್ತದೆ. ಇಂಥ ಸಂಗತಿಗಳನ್ನು ವಾಚಕರು ಲಕ್ಷಿಸುವದು ಅವಶ್ಯವಾಗಿರುತ್ತದೆ.

ಶಿವಶರಣರ ಉದಾರ ತತ್ವಗಳನ್ನು ಒಕ್ಕಲಿಗರೂ, ಕೂಲಿಕಾರರೂ, ಚಿಕ್ಕಚಿಕ್ಕ ಉದ್ಯೋಗಸ್ಥರೂ ಮನಃಪೂರ್ವಕವಾಗಿ ಪಾಲಿಸುತ್ತ ಬಂದಿದ್ದಾರೆ. ಈ ಕಾರ್ಯದಲ್ಲಿ ಅವರಲ್ಲಿ ಅನೇಕರು ತಮ್ಮ ಮೇಲೆ ಬಂದ ಎಡರುಗಳನ್ನು ಧೈರ್ಯದಿಂದ ಎದುರಿಸುತ್ತ ಬಂದಿದ್ದರ ವಿವರಗಳು ಹೃದಯದ್ರಾವಕವಾಗಿರುತ್ತದೆ, ಕೊಟ್ಟಣದ ಸೋಮವ್ವೆ, ಪಿಟ್ಟವ್ವೆ, ವೈಜವ್ವೆ, ವರದಾನಿಯಮ್ಮ, ಗೊಗ್ಗವ್ವೆ ಹೀಗೆ ಅನೇಕರು ಇದ್ದಾರೆ. ಇವರು ಅದ್ಭುತ ಕಾರ್ಯಗಳನ್ನು ಮಾಡಿರುವರು. ಇವರ ಕಾರ್ಯಗಳನ್ನು ನಾವು ಶರಣೆಯರ ಈ ಚರಿತ್ರೆಗಳಲ್ಲಿ ಬಹಳ ಸಂಖ್ಯೆಯಿಂದ ಕಾಣಬಹುದು.

ಈ ಗ್ರಂಥವನ್ನು ಅಚ್ಚಿಗೆ ತರುವ ಕಾರ್ಯದಲ್ಲಿ ಶ್ರೀಮತಿ ಜಯದೇವಿಬಾಯಿ ಲಿಗಾಡೆ ಸೊಲ್ಲಾಪೂರ, ಶ್ರೀಯುತ ಬಿ. ಕೆ. ದಂಧರಗಿ ಮು. ವಿಜಾಪೂರ ಹೀಗೆ ಅನೇಕರು ನಮಗೆ ಬಹಳ ಸಹಾಯ ಮಾಡಿದ್ದಾರೆ. ಇವರು ಪ್ರಯತ್ನ ಮಾಡಿದ್ದರ ಫಲವಾಗಿ ಈ ಗ್ರಂಥವು ಈಗ ಪ್ರಕಾಶಕ್ಕೆ ಬಂದಿರುತ್ತದೆ. ಈ ಮಹನೀಯರೆಲ್ಲರಿಗೆ ನಾವು ಬಹಳ ಆಭಾರಿಯಾಗಿದ್ದೇವೆ. ಇವರಲ್ಲಿ ಕೆಲವು ಮಹನಿಯರು ನಮಗೆ ಧನಸಹಾಯವನ್ನು ಸಹ ಮಾಡಿದ್ದಾರೆ. ಇವರಿಗೂ ನಮ್ಮ ಅನಂತ ವಂದನೆಗಳು.

ಇಲ್ಲಿ ಇನ್ನೊಂದು ವಿಷಯವನ್ನು ಕುರಿತು ನಾವು ವಿವೇಚಿಸುವದು ಅವಶ್ಯವಿರುತ್ತದೆ. ಉಳವಿಯ ಹೋರಾಟವಾದ ಬಳಿಕ ಶಿವಶರಣರ ಪರಿಸ್ಥಿತಿಯು ತೀರ ಕುಗ್ಗಿಹೋಗಿತ್ತು. ಆಗ ನಾಗಲಾಂಬಿಕೆಯು ರುದ್ರಮುನಿಯ ಸಲಹೆಯಿಂದ ಶಿವಮೊಗ್ಗಾ ಜಿಲ್ಲೆಗೆ ಹೋಗಿ ಅಲ್ಲಿ ಎಣ್ಣೆಹೊಳೆಯ ಸಮೀಪದಲ್ಲಿ ಭದ್ರಾನದಿಯ ಮೇಲೆ ಒಂದು ಮಠವನ್ನು ನಿರ್ಮಿಸಿಕೊಂಡು ಶ್ರೀಶೈಲದಿಂದ ಸಹಾಯವು ಬರುವದನ್ನು ನಿರೀಕ್ಷಿಸುತ್ತ ಇದ್ದಳು. ಮುಂದೆ ಸ್ವಲ್ಪ ದಿವಸಗಳಲ್ಲಿ ಆಕೆಯು ಈ ಸ್ಥಳದಲ್ಲಿ ಮೃತಪಟ್ಟಳು. ಮುಂದೆ ಶ್ರೀಶೈಲ ಪರ್ವತ ಪ್ರಾಂತದಿಂದ ಅವಳಿಗೆ ಸಹಾಯವು ಬರಲಾಗಿ ಉಳಿದ ಶರಣರು ಧೈರ್ಯದಿಂದ ಹೋರಾಡಿ ಎದುರಾಳಿಗಳ ಬಲವನ್ನು ಹಿಮ್ಮೆಟ್ಟಿಸಿದರು.

ಹೀಗಾದುದು ಸಂಶೋಧಿಸತಕ್ಕ ಒಂದು ಮಹತ್ವದ ವಿಷಯವಾಗಿದೆ. ಸೈನಿಕ ಸಹಾಯವು ತಮಗೆ ಬರಲು ಅಲ್ಲಿದ್ದ ವೀರಶೈವ ಸಂಗಡಗಳೆಲ್ಲವೂ ಒಟ್ಟು ಗೂಡಿ ವೈರಿಗಳೊಡನೆ ತಮ್ಮ ಹೋರಾಟವನ್ನು ನಡೆಯಿಸಲು ವೈರಿಗಳು ಧೈರ್ಯಗುಂದಿ ಹಿಂದಿರುಗಿದರೆಂದು ತೋರುತ್ತದೆ. ಈ ಭಾಗದಲ್ಲಿ ಸಾಂತರರು ನೊಣಂಬಪಲ್ಲವರು, ಮೊದಲಾದವರಿದ್ದು ಅವರು ಒಂದುಕಾಲದಲ್ಲಿ ಜೈನರಿದ್ದರೂ ಹಿಂದುಗಡೆ ಶಿವಶರಣರ ಸಂಪರ್ಕದ ಮೂಲಕ ವೀರಶೈವ ಧರ್ಮವನ್ನು ಪಾಲಿಸಹತ್ತಿದ್ದು ಕಂಡುಬರುತ್ತದೆ. ಇತ್ತಕಡೆಗೆ ಈ ಸಂಗಡದವರ ಅನೇಕ ಶಿಲಾಶಾಸನಗಳು ಇದ್ದು ಅವುಗಳಲ್ಲಿ ಮೊದಲಿನ ಶಾಸನಗಳು ಜೈನಧರ್ಮವನ್ನು ಪ್ರತಿಪಾದಿಸುತ್ತವೆ. ಆದರೆ ಹಿಂದುಗಡೆ ಆದವುಗಳು ಶಿವಶರಣರ ತತ್ವಗಳನ್ನು ಪ್ರತಿಪಾದಿಸುತ್ತವೆ. ಈ ಭಾಗದಲ್ಲಿ ಕೋಳೀಸಾಲೆ, ತಂಬೂರು, ಹುಬ್ಬಳ್ಳಿ, ಮುದ್ದೇಬಿಹಾಳ, ಈ ಭಾಗಗಳಲ್ಲಿ ದೊರೆತಿರುವ ಶಿಲಾಲೇಖುಗಳಲ್ಲಿ ಕಪಿಲ ಸಿದ್ಧನ ಉಲ್ಲೇಖುಗಳವೆ. ಇವುಗಳಲ್ಲಿ ಸಿದ್ಧರಾಮೇಶ್ವರನ ಹೆಸರೂ ಬಂದಿದೆ. ಸಿದ್ಧರಾಮೇಶ್ವರನು ಈ ಕಾಲಕ್ಕೆ ವೀರಶೈವರಿಗೆ ಜಗದ್ಗುರುವಾಗಿದ್ದನು. ಅವನು ಬಾಳಿಹಳ್ಳಿ ಪ್ರಾಂತಕ್ಕೆ ಈ ಕಾಲಕ್ಕೆ ಬಂದು ಮರುಳಸಿದ್ಧೇಶ್ವರ ನನ್ನೊಳಗೊಂಡು ವೀರಶೈವ ಧರ್ಮವನ್ನು ಇತ್ತ ದೃಢಪಡಿಸಿದನೆಂಬ ಅನುಮಾನವು ಉಂಟಾಗುತ್ತದೆ. ಹೀಗೆ ಮಧ್ಯಕರ್ನಾಟಕದಲ್ಲಿ ಇಂಥ ಪರಿಸ್ಥಿತಿಯು ಒದಗಿದಾಗ್ಗೆ ಗುತ್ತಲದ ಗುತ್ತರಸರು, ಸಾದರು, ರಟ್ಟರು, ವೀರಶೈದ ಮಾರ್ಗವನ್ನು ಪುರಸ್ಕರಿಸಿರಬೇಕು. ಅವರೊಡನೆ ವರದಾನಿ ಗುಡ್ಡಮ್ಮ ಮೊದಲಾದ ಶಿವಶರಣೆಯರ ಪ್ರಭಾವದಿಂದ ವೀರಶೈವ ಮಾರ್ಗವು ಇತ್ತ ಉಳಿದಿರಬೇಕು. ಹೀಗೆ ಅನುಮಾನ ಮಾಡಬಹುದಾಗಿದೆ. ಈ ಸಂಗತಿಗಳು ಉಳವಿಯ ಸಂಗ್ರಾಮವು ಮುಗಿದ ಬಳಿಕ ಸ್ವಲ್ಪ ದಿವಸಗಳ ಮೇಲೆ ಉದ್ಭವಿಸಿರಬಹುದೆಂದು ನಮಗೆ ತೋರುತ್ತದೆ.

ವರದಾನಿಯಮ್ಮನ ದೇವಾಲಯದ ಬ್ಲಾಕನ್ನು ನಾವು ಅಚ್ಚುಹಾಕಿಸಿರುವದು ವಾಚಕರಿಗೆ ಕಂಡುಬರುವದು. ಈ ಬ್ಲಾಕನ್ನು ವಿಜಾಪೂರದಲ್ಲಿ ಒಂದುಕಾಲಕ್ಕೆ ಸಬ್‌ಜಡ್ಜರಾಗಿದ್ದ ಶ್ರೀ. ವೀರಭದ್ರಪ್ಪ ಬಸಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ ಇವರು ಗುಡ್ಡಾಪುರದಲ್ಲಿಯ ದಾನಮ್ಮನ ಕ್ಷೇತ್ರವನ್ನು ಸಂದರ್ಶಿಸಿ ಫೋಟೋ ತೆಗೆದುಕೊಂಡಿದ್ದು ಅವರ ಬ್ಲಾಕ್ಕಿನ ಆಧಾರ

ದಿಂದ ಈ ಚಿತ್ರವನ್ನು ಸುಮಾರು ೨೦ ವರ್ಷಗಳ ಹಿಂದೆ ತೆಗೆದಿವೆ. ಈ ಬ್ಲಾಕನ್ನು ಶ್ರೀಯುತ ವೀರಭದ್ರಪ್ಪ ಹಾಲಭಾವಿಯವರು ನಮಗೆ ಕಡವಾಗಿ ಕೊಟ್ಟಿದ್ದಕ್ಕೋಸ್ಕರ ನಾವು ಅವರಿಗೆ ತುಂಬಾ ಆಭಾರಿಯಾಗಿದ್ದೇವೆ.

ಸಂಪಾದಕ:— ಶಿವಾನುಭವ.

ವಿಜಾಪುರ.

———



ವರದಾನಿಗುಡ್ಡಮ್ಮಯ ದೇವಸ್ಥಾನ ಗುಡ್ಡಾಪುರ.

# ಈ ಚಿತ್ರದ ವಿವರಣೆ.

ಈ ಗ್ರಂಥದ ಆರಂಭದಲ್ಲಿ ವರದಾನಿ ಗುಡ್ಡವ್ವೆಯು ದೇವಾಲಯದ ಚಿತ್ರವನ್ನು ಕೊಟ್ಟಿದ್ದೇವೆ. ಆಕೆಯ ದೇವಾಲಯವು ಜತ್ತಿ ಗ್ರಾಮದಿಂದ ಪೂರ್ವಕ್ಕೆ ಸುಮಾರು ೧೨ ಮೈಲಿನ ಮೇಲೆ ಇರುತ್ತದೆ. ವಿಜಾಪುರ ಪಟ್ಟಣದ ವಾಯುವ್ಯ ದಿಕ್ಕಿಗೆ ೩೦ ಮೈಲುಗಳ ಮೇಲೆ ದಕ್ಷಿಣೋತ್ತರ ಒಂದು ಗುಡ್ಡದ ಸಾಲು ಹಬ್ಬಿರುವದು. ಈ ಸಾಲಿನ ದಕ್ಷಿಣ ಕೊನೆಯಲ್ಲಿ ಗುಡ್ಡಾಪುರ ಎಂಬ ಗ್ರಾಮವಿದ್ದು ಅದು ಒಂದು ಕ್ಷೇತ್ರಸ್ಥಾನವಾಗಿರುವದು. ಈ ಸ್ಥಾನಕ್ಕೆ ಮಹಾರಾಷ್ಟ್ರ, ಕರ್ನಾಟಕ ಪ್ರಾಂತಗಳಿಂದ ಎಲ್ಲ ಜಾತಿಯ ಅಸಂಖ್ಯ ಯಾತ್ರಿಕರು ಇಡೀ ವರ್ಷ ಬರುವದುಂಟು. ಈ ಕ್ಷೇತ್ರವು ವರದಾನಿ ಗುಡ್ಡವ್ವೆಯ ಸ್ಥಾನವಾಗಿದೆ. ಇದಕ್ಕೆ ಜನರು ವಾಡಿಕೆಯಾಗಿ ಗುಡ್ಡಾಪುರದ ದಾನಮ್ಮನೆಂದು ಕರೆಯುವದುಂಟು. ಈಕೆಯು ಒಬ್ಬ ಶೂರ ಸ್ತ್ರೀಯಳು ಮತ್ತು ವೀರಶೈವ ಶಿವಶರಣೆಯು. ಈಕೆಯ ಚರಿತ್ರೆಯನ್ನು ವೀರಶೈವರಲ್ಲಿ ಪ್ರಸಿದ್ಧ ಕವಿಯಾದ ಲಕ್ಕಣ್ಣ ದಂಡೇಶನು ತನ್ನ 'ಶಿವತತ್ವ ಚಿಂತಾಮಣಿ' ಎಂಬ ಗ್ರಂಥದಲ್ಲಿ ವಿವರಿಸಿದ್ದಾನೆ.

ಗುಡ್ಡವ್ವೆಯು ಪಾರ್ವತಿಯ ಅವತಾರವೆಂದು ತಿಳಿಯಲ್ಪಟ್ಟಿರುತ್ತಾಳೆ. ಆಕೆಯ ಗುಡಿಯು ಗುಡ್ಡಾಪುರ ಗ್ರಾಮಕ್ಕೆ ಹೊಂದಿ ಇದ್ದು, ಅದು ಸುಂದರವಾದ ಗೋಪುರಗಳಿಂದ ಅಲಂಕೃತವಾಗಿದೆ. ಆಕೆಯ ಗುಡಿಯ ಹತ್ತರ ಆಕೆಯ ಗುರುವಿನ ಪಾದುಕೆಗಳೂ, ಆವಾರದ ಪಶ್ಚಿಮ ದಿಕ್ಕಿನ ದೇವಾಲಯದಲ್ಲಿ ಶ್ರೀ. ಸೋಮೇಶ್ವರ ಲಿಂಗದ ಮೂರ್ತಿಯೂ, ಅದರಂತೆಯೇ ವೀರಭದ್ರನ ಗುಡಿಯೂ, ಮಲ್ಲಿಕಾರ್ಜುನನ ಗುಡಿಯೂ, ಇರುತ್ತವೆ. ಈಕೆಯ ಬಗ್ಗೆ ಹೆಚ್ಚಿನ ವಿವರಣೆಗಳು ಇದೇ ಗ್ರಂಥದ ಪುಟ ೬೩ ಇದರಲ್ಲಿ ಬಂದಿವೆ. ಅದನ್ನು ವಾಚಕರು ಓದತಕ್ಕದ್ದೆಂದು ನಾವು ಅವರಿಗೆ ಸೂಚಿಸುತ್ತೇವೆ.

---

# ವಿಷಯಾನುಕ್ರಮಣಿಕೆ.

ಅಖಿಲಕರ್ನಾಟಕದಲ್ಲಿ
ವಚನಶಾಸ್ತ್ರ ಪ್ರಚುರಪಡಿಸಿ,

ವಚನಶಾಸ್ತ್ರ ಪಿತಾಮಹರೆಂದು ಖ್ಯಾತಿವೆತ್ತ
ಡಾ|| ರಾ. ಬ. ಫ. ಗು. ಹಳಕಟ್ಟಿ, ಬಿ.ಎ. ಎಲ್.ಎಲ್. ಬಿ.
ಇವರ ಸಂಪಾದಕತ್ವದಲ್ಲಿ



೩೨ ವರುಷ ಸೇವೆ ಸಲ್ಲಿಸಿದ

# ಶಿವಾನುಭವ

ಮಾಸಪತ್ರಿಕೆಗೆ

## ಚಂದಾದಾರರಾಗಿರಿ

ವಾರ್ಷಿಕ ಚಂದಾ
ರೂ. ೭೫ ನಯೆ ಪೈಸೆ.

ಶಿವಾನುಭವ ಕಾರ್ಯಾಲಯ, ವಿಜಾಪೂರ.

ಇದರಲ್ಲಿ ನಾಗಲಾಂಬಿಕೆಯು ಬಸವಣ್ಣನ ಜ್ಞಾನ ಅವನ ಅನುಭಾವ ಇವುಗಳನ್ನು ನೋಡಿ ಅವನು ಹೆಚ್ಚಿನವನೆಂಬುದು ಭಾವಿಸಿ ಈ ವಚನವನ್ನು ನುಡಿದಿದ್ದಾಳೆ.

ಶಿವಶರಣರು ಸ್ತ್ರೀಪುರುಷರು ಭೇದ, ವಯಸ್ಸಿನ ಭೇದ ಇವುಗಳನ್ನು ಎಣಿಸುವದಿಲ್ಲ. ಅವುಗಳ ಮೇಲಿಂದ ಯಾರಲ್ಲಿಯೂ ಹೆಚ್ಚು ಕಡಿಮೆ ಭೇದವನ್ನು ಅವರು ಮಾಡುವದಿಲ್ಲ. ಜ್ಞಾನಿಗಳಾದವರೇ ಹೆಚ್ಚಿನವರೆಂದು ತಿಳಿದು ಅಂಥವರನ್ನು ಅವರು ಮನ್ನಿಸುತ್ತಾರೆ. ಮಹಾದೇವಿಯಕ್ಕನು ಒಬ್ಬ ಸ್ತ್ರೀಯು ಮತ್ತು ವಯಸ್ಸಿನಲ್ಲಿ ಕಿರಿಯಳು, ಆದರೂ ಅವಳು ಹಿರಿಯರಿಗಿಂತ ಹಿರಿಯಳೆಂದು ಶಿವಶರಣರು ಅವಳನ್ನು ಕುರಿತು ಹೇಳಿದ್ದಾರೆ. ಚನ್ನಬಸವೇಶ್ವರನು ನಾಗಲಾಂಬಿಕೆಯ ಪುತ್ರನು. ಅವಳು ಅವನಿಗೆ ಚಿಕ್ಕಂದಿನಲ್ಲಿ ವಿದ್ಯಾಬುದ್ಧಿಯನ್ನು ಕಲಿಸಿ ಜ್ಞಾನಿಯನ್ನಾಗಿ ಮಾಡಿದಳು. ಆದರೆ ಚನ್ನಬಸವನು ಮುಂದೆ ಶಿವಾನುಭವ ಮಂಟಪದಲ್ಲಿ ಅದ್ಭುತ ಜ್ಞಾನಿಯೂ, ಅನುಭಾವಿಯೂ ಎಂದೆನಿಸಿಕೊಂಡು ಉಚ್ಚಸ್ಥಿತಿಗೆ ಬಂದನು. ನಾಗಲಾಂಬಿಕೆಯು ಜ್ಞಾನಿಯೂ ಯೋಗಿಣಿಯೂ ಆಗಿದ್ದರೂ ಅವಳು ಚನ್ನಬಸವಣನನ್ನು ಮತ್ತು ತನ್ನಗಿಂತ ಚಿಕ್ಕವನಾದ ಬಸವೇಶ್ವರನನ್ನು ಹೇಗೆ ಮನ್ನಿಸಿದ್ದಾಳೆಂಬುದು ಕೆಳಗಿನ ವಚನಗಳಲ್ಲಿ ಹೇಳಿದೆ. ಇದರಿಂದ ಶಿವಶರಣರ ಧರ್ಮವು ಎಷ್ಟು ವಿಸ್ತೃತವೂ, ಉದಾರವೂ, ಜ್ಞಾನ ಮತ್ತು ಅನುಭಾವಕ್ಕೆ ಮಹತ್ವ ಕೊಡುವಂಥದೂ ಇರುತ್ತದೆಂಬುದು ತಿಳಿದು ಬರುತ್ತದೆ.

(೪) ಎನ್ನ ತನು ಚನ್ನಬಸವಣ್ಣನ ಬಯಲ ಬೆರಸಿತ್ತು. ಎನ್ನ ಮನ ಸಂಗನ ಬಸವಣ್ಣನ ನಿಜ ಪದವ ಬೆರಸಿತ್ತು. ಎನ್ನ ಪ್ರಾಣ ಅಲ್ಲಮಪ್ರಭುದೇವರ ಅರಿವ ಬೆರಸಿತ್ತು. ಇಂತೀ ಮೂವರು ಒಂದೊಂದು ಹಂಚಿಟ್ಟುಕೊಂಡಿಟ್ಟ ಕಾರಣ ಎನಗೇನೂ ಇಲ್ಲದೆ ಬಸವಣ್ಣಪ್ರಿಯ ಚನ್ನ ಸಂಗಯ್ಯನ ಹೃದಯ ಕಮಲದಲ್ಲಿ ನಿಜನಿವಾಸಿಯಾಗಿರ್ದೆನು.

(೫) ಎನ್ನ ಭವದ ಬಳ್ಳಿಯ ಬೇರು ಹರಿದಿತ್ತಯ್ಯ, ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ, ಎನ್ನ ಮನದ ಕಪಟ ಹಿಂಗಿತ್ತಯ್ಯ ಚನ್ನಬಸವಣ್ಣನ ಕರುಣವ ಪಡೆದೆನಾಗಿ. ಎನ್ನ ಅಂತರಂಗದ ಸಂದು ಸಂಶಯ ತೊಲಗಿತ್ತಿಂದು ಬಸವಣ್ಣಪ್ರಿಯ ಚನ್ನ ಸಂಗಯ್ಯನಲ್ಲಿ ಎನ್ನ ಪರಮಗುರು ಅಲ್ಲಮ ಪ್ರಭುದೇವರ ಶ್ರೀ ಚರಣವ ಕಂಡೆನಾಗಿ.

ಮೇಲೆ ನಾಲ್ಕನೆಯ ವಚನದಲ್ಲಿ ನಾಗಲಾಂಬಿಕೆಯು ತನ್ನ ತನು ಮನ ಪ್ರಾಣಗಳು ಅನುಕ್ರಮವಾಗಿ ಚನ್ನಬಸವ, ಬಸವ, ಅಲ್ಲಮಪ್ರಭು, ಇವರಲ್ಲಿ ತನ್ಮಯವಾಗಿವೆ. ಅವರ ಅರಿವನ್ನು ನಾನು ಒಳಕೊಂಡಿದ್ದೇನೆ. ನನ್ನದೇನು ಇಲ್ಲವೆಂದು ಹೇಳಿದ್ದಾಳೆ. ಇದರ ಮುಂದಿನ ವಚನದಲ್ಲಿ ಇದೇ ಭಾವವನ್ನು ಬೇರೊಂದು ರೀತಿಯಿಂದ ಅವಳು ಹೇಳಿದ್ದಾಳೆ.

ಈ ವಚನಗಳಿಂದ ಹಿಂದಿನಕಾಲದ ಶಿವಶರಣರು ತಮ್ಮ ತಮ್ಮಲ್ಲಿ ಭಿನ್ನಭಾವಗಳನ್ನು ಅಳಿದು ಪರಸ್ಪರವಾಗಿ ಹೀಗೆ ನಡೆದರು. ಮತ್ತು ಅವರು ಪರಮಾರ್ಥವನ್ನು ಹೇಗೆ ಸಾಧಿಸಿದರೆಂಬುದು ತಿಳಿದು ಬರುತ್ತಿದೆ. ಅನು ಭವವುಳ್ಳವರು ಚಿಕ್ಕವರಿರಲಿ, ದೊಡ್ಡವರಿರಲಿ ಅವರ ಸಹಾಯದಿಂದ ಪಾರ ಮಾರ್ಥವನ್ನು ಸಾಧಿಸಬೇಕೆಂಬ ಭಾವ ಇವುಗಳಲ್ಲಿ ವ್ಯಕ್ತವಾಗುತ್ತದೆ.

## ಬಸವೇಶ್ವರನು ಕಲ್ಯಾಣ ಬಿಟ್ಟದ್ದು

ಈ ಸಮಯದಲ್ಲಿ ಹರಳಯ್ಯ ಮಧುವರಸರ ಪ್ರಶ್ನೆಯು ಓಲಗದಲ್ಲಿ ಉಪಸ್ಥಿತವಾಯಿತು. ಅವರು ತಮ್ಮ ಮನೆತನಗಳಲ್ಲಿ ಪರಸ್ಪರ ಲಗ್ನಮಾಡಿ ಕೊಂಡ ವಿಷಯವು ಬಿಜ್ಜಳನಿಗೆ ಒಂದು ಘೋರ ಪಾತಕವೆಂದು ತೋರಿತು. ಮತ್ತು ಅವರಿಗೆ ಎಳಹೂಟೆಯಿಂದ ದೇಹಾಂತ ಶಿಕ್ಷೆಯಾಗಬೇಕೆಂದು ವಿಧಿ ಸಿದನು. ಅವನು ನಿರ್ಣಯಿಸಿದಂತೆ ಶಿಕ್ಷೆಯೂ ಪಾಲಿಸಲ್ಪಟ್ಟಿತು. ಕೂಡಲೇ ಕಲ್ಯಾಣದಲ್ಲಿ ಭಯಂಕರ ಕ್ಷೋಭೆಯುಂಟಾಯಿತು. ಇನ್ನು ಮೇಲೆ ಇಂಥ ಪಟ್ಟಣದಲ್ಲಿರಬಾರದೆಂದು ಅತ್ಯಂತ ಕೋಮಲ ಹೃದಯನಾದ ಬಸವೇಶ್ವರನಿಗೆ ತೋರಿ ಅವನು ಕೂಡಲೇ ಪಟ್ಟಣವನ್ನು ಬಿಟ್ಟು ಕಪ್ಪಡಿಸಂಗಮನಾಥನೆಡೆಗೆ ಸಾಗಿದನು. ಅವನು ಪಟ್ಟಣ ಬಿಡುವ ಮೊದಲು ಚನ್ನಬಸವನು ತನ್ನ ಸ್ಥಾನ ದಲ್ಲಿ ಆಡಳಿತೆಯನ್ನು ನಡಿಸಬೇಕೆಂದು ಕಟ್ಟುಮಾಡಿ ಹೊರಟನು.

## ಶಿವಶರಣರ ದೇಶತ್ಯಾಗ

ಶಿವಶರಣರ ನಡೆಗೆ ಭಂಗಬಂದಲ್ಲಿ ಅದಕ್ಕೆ ತಕ್ಕ ಪ್ರತಿಕಾರ ಮಾಡ ಬೇಕು, ಪ್ರತಿಕಾರ ಶಕ್ಯವಿಲ್ಲದಲ್ಲಿ ಆ ನಾಡನ್ನು ತ್ಯಜಿಸಿ ಹೋಗಬೇಕು, ತ್ಯಜಿಸಿ ಹೋಗಲು ಶಕ್ಯವಿಲ್ಲದಲ್ಲಿ ತನ್ನ ಅಸುವನ್ನೇ ನೀಗಬೇಕು, ಎಂದು ಶಿವಶರಣರ ಉಕ್ತಿಗಳು ಇವೆ. ಈ ಕಾಲದಲ್ಲಿ ಶಿವಶರಣರಿಗೆ ಒಬ್ಬ ಬಲಾಢ್ಯ

ನೃಪತಿಯು ಇದಿರಾಳಾಗಿದ್ದನು. ಅವನನ್ನು ಹೋರಾಟದಲ್ಲಿ ನಿಗ್ರಹಿಸಲು ಶಕ್ಯವಿರಲಿಲ್ಲ. ಶಿವಶರಣರ ಸಂಖ್ಯೆಯು ಈ ಆರಂಭಕಾಲದಲ್ಲಿ ಅತ್ಯಲ್ಪವಾಗಿದ್ದಿತು. ಈ ಸ್ಥಿತಿಯಲ್ಲಿ ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರಯ್ಯ, ರುದ್ರಮುನಿ ಮೊದಲಾದ ಶಿವಶರಣರು ಇನ್ನು ಮೇಲೆ ದೇಶಾಂತರ ಮಾಡಬೇಕೆಂದು ನಿರ್ಧರಿಸಿದರು.

ದೇಶಾಂತರ ಮಾಡಲಿಕ್ಕೆ ಅನುಕೂಲ ಸ್ಥಳಗಳು ಒಂದು ಕಡೆಗೆ ಶ್ರೀಶೈಲ ಪ್ರಾಂತ ಮತ್ತೊಂದು ಕಡೆಗೆ ಈಗಿನ ಉತ್ತರ ಕನ್ನಡ ಜಿಲ್ಲೆಯೊಳಗಿರುವ ಸಹ್ಯಾದ್ರಿಯ ಘೋರಾರಣ್ಯ, ಇವುಗಳೇ ಇದ್ದುದು ಅವರಿಗೆ ತೋರಬಂದವು. ಆದ್ದರಿಂದ ಬಹುಜನ ಶಿವಶರಣರು ಶ್ರೀಶೈಲ ಪ್ರಾಂತದ ಕಡೆಗೆ ಹೊರಟು ಹೋಗಹತ್ತಿದರು. ಉಳಿದವರು ಉಳಿವಿಯ ಪ್ರಾಂತದ ಕಡೆಗೆ ಹೋಗಬೇಕೆಂದು ನಿರ್ಧರಿಸಿದರು ಅಲ್ಲಮಪ್ರಭು, ಮಹಾದೇವಿಯಕ್ಕಗಳು ಶ್ರೀಶೈಲದ ಕಡೆಗೆ ಮತ್ತು ಉಳಿದವರಲ್ಲಿ ಚನ್ನಬಸವ ಮಡಿವಾಳ ಮಾಚಿದೇವ ಮೊದಲಾದವರು ಕದಂಬರಾಜರು ಆಳುತ್ತಿದ್ದ ಪಶ್ಚಿಮಘಟ್ಟದ ಪ್ರಾಂತದ ಕಡೆಗೆ ಹೋಗಲು ನಿರ್ಧರಿಸಿದರು. ಹೀಗೆ ಭಾರತದಲ್ಲಿ ಅನೇಕ ಸಮಾಜಗಳು ತಮ್ಮ ಆಚರಣೆಗೆ ಭಂಗ ಬರಲಾರದೆಂದು ಇಂಥ ಸುರಕ್ಷಿತನಾದ ದೂರದೇಶಗಳಿಗೆ ಹೋದ ಉದಾಹರಣೆಗಳು ಅನೇಕ ಇರುತ್ತವೆ. ಅದೇ ಮಾರ್ಗವನ್ನು ಶಿವಶರಣರು ಈ ಕಾಲದಲ್ಲಿ ಅವಲಂಬಿಸಿದರು.

## ಯುದ್ಧಸಿದ್ಧತೆ.

ಇಷ್ಟರಲ್ಲಿ ರಾಜಧಾನಿಯಲ್ಲಿ ಕ್ರೋಧಾವೇಶಗಳು ತೀವ್ರತರವಾಗಿ ಉಪ್ಪವಿಸಿ ಎಲ್ಲೆಲ್ಲಿಯೂ ಹೊಡೆದಾಟಗಳು ನಡೆದಿದ್ದವು. ಈ ಕಠಿಣ ಪರಿಸ್ಥಿತಿಯಲ್ಲಿ ಅರಸನ ಕೂಡ ಯುದ್ಧ ಮಾಡುತ್ತ ತಮ್ಮ ರಕ್ಷಣೆ ಮಾಡುವದೊಂದೇ ಮಾರ್ಗವು ಶಿವಶರಣರಿಗೆ ಉಳಿಯಿತು. ಇದರಿಂದ ಉಭಯ ಪಕ್ಷಗಳಲ್ಲಿ ಯುದ್ಧ ಸಿದ್ಧತೆಗಳು ನಡೆದವು.

ಈ ಕಾಲದಲ್ಲಿ ಚನ್ನ ಬಸವೇಶ್ವರನು ತಾನೆಲ್ಲಿ ಹೋಗಬೇಕೆಂಬುದನ್ನು ನಿಶ್ಚೈಯಿಸಿಕೊಂಡು ಉಳಿವಿಯ ಪ್ರಾಂತದಲ್ಲಿ ನಿರಂತರವಾಗಿ ವಾಸಿಸಬೇಕೆಂದು ಗೊತ್ತುಮಾಡಿ ಕೊಂಡನು. ಆದ್ದರಿಂದ ಅವನು ಉಳವಿಗೆ ಹೋಗಲು ಸೈನಿಕರಾದ ತನ್ನ ಶಿವಶರಣರ ಸಲುವಾಗಿ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಲಿಕ್ಕೆ ಹತ್ತಿದನು.

ಈ ಸಂಗ್ರಹ ಕಾರ್ಯಗಳಲ್ಲಿ ಮುಖ್ಯ ಭಾಗವಹಿಸಿದವರು ಸ್ವಾಭಾವಿಕ ವಾಗಿ ಅವನ ತಾಯಿಯಾದ ನಾಗಲಾಂಬಿಕೆ ಮತ್ತು ಬಸವೇಶ್ವರನ ಹೆಂಡತಿ ಯಾದ ಗಂಗಾಂಬಿಕ ಇವರೇ ಇದ್ದಾರೆ. ಆಹಾರ ಪದಾರ್ಥಗಳನ್ನು ಸಂಗ್ರ ಹಿಸುವ ಉದ್ದೇಶವು ಉಳಿವಿಯ ಮಹಾಮನೆಯಲ್ಲಿ ಗಣ ಪರ್ವ ಮಾಡುವ ದಿರುತ್ತದೆಂದು ಅವರು ಮೊದಲು ಜನರಿಗೆ ಹೇಳುತ್ತ ಬಂದರು. ಹೀಗೆ ಮೂರುವರೆ ತಿಂಗಳುಗಳಾದವು. ಮುಂದೆ ಬಿಜ್ಜಳನು ಹಿಂದೆ ಹೇಳಿದ ಪ್ರಕಾರ ಶಿವಶರಣರಿಂದ ಕೊಲೆ ಮಾಡಲ್ಪಟ್ಟನು.

ಆಗ ಬಿಜ್ಜಳನ ದಂಡಾಳುಗಳು ಬಿಜ್ಜಳನ ಅಳಿಯನಾದ ಎರೆಯಂಬರಾಗೆ ಎಂದರೆ ಈಗ ಹೈದ್ರಾಬಾದ ಸಂಸ್ಥಾನದಲ್ಲಿರುವ ಗುಲಬುರ್ಗಿಯಲ್ಲಿ ಆಳು ತ್ತಿದ್ದ ಚಾವುಂಡರಾಯನ ಆಧಿಪತ್ಯದಲ್ಲಿದ್ದವು. ಬಿಜ್ಜಳದ ಕೊಲೆಯಾದ ಕೂಡಲೆ ಪಟ್ಟಣದಲ್ಲಿ ಹೋರಾಟಗಳು ಪ್ರಾರಂಭವಾದವು. ಆಗ ಶಿವಶರ ಣರು ಯುದ್ಧಮಾಡಲು ಸಿದ್ಧರಾಗಬೇಕಾಯಿತು.

## ರಣರಂಗದಲ್ಲಿ ನಾಗಲಾಂಬಿಕೆಯು

ಆಗ ನಾಗಲಾಂಬಿಕೆಯು ತನ್ನ ಮಗ ಚನ್ನಬಸವನೊಂದಿಗೆ ಕಲ್ಯಾಣ ವನ್ನು ಬಿಟ್ಟು ಧರ್ಮಯುದ್ಧದಲ್ಲಿ ತೊಡಗಿದಳು. ಪರಿಸ್ಥಿತಿಯು ಮನುಷ್ಯ ನಲ್ಲಿ ಬದಲಾವಣೆಯನ್ನುಂಟುಮಾಡುತ್ತದೆ. ಈ ಕಾಲದಲ್ಲಿ ನಾಡಿನಲ್ಲಿ ಈಗಿನಂತೆ ಲಕ್ಷಾವಧಿ ವೀರಶೈವರಿರಲಿಲ್ಲ. ಅವರ ಸಂಖ್ಯೆಯು ಅತ್ಯಲ್ಪ ವಾಗಿದ್ದಿತು. ಆದುದರಿಂದ ಸ್ವಸಂರಕ್ಷಣೆಗೆ ಹೋರಾಡದೆ ಕುಳಿತಿದ್ದರೆ ಅಲ್ಲಲ್ಲಿ ವಾಸಿಸುತ್ತಿದ್ದ ವೀರಶೈವರ ಸಣ್ಣ ಸಣ್ಣ ಗುಂಪುಗಳನ್ನು ಇದಿರಾಳಿಗಳು ಸಂಹಾರಮಾಡದೆ ಬಿಡುತ್ತಿದ್ದಿಲ್ಲ. ಈ ಸ್ಥಿತಿಯೊದಗಿದ್ದರಿಂದ ನಾಗಲಾಂಬಿ ಕೆಯೂ, ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯೂ ಕಲ್ಯಾಣದಿಂದ ಹೊರಬಿದ್ದರು. ಅವರು ಈ ಮೊದಲು ಅಂಜನೇಯ ನಿರಿಯಗುಂಟೆ ಬಿಡಾರ ಬಿಟ್ಟಿದ್ದ ಶಿವಶರಣರನ್ನು ಕೂಡಿಕೊಂಡರು. ಮಡಿವಾಳ ಮಾಚಿದೇವನು ಇವರಿಗೆ ಮುಂದಾಳುವಾಗಿ ಅವರನ್ನು ಇಲ್ಲಿಗೆ ಈ ಮೊದಲಿಗೆ ಎಚ್ಚರದಿಂದ ನಡಿಸಿಕೊಂಡು ಬಂದಿದ್ದನು. ಆದರೆ ತಾನಿಲ್ಲದಾಗ ರಾಜಧಾನಿಯಲ್ಲಿ ಅನಾಹುತಗಳು ಸಂಭವಿಸಬಹುದೆಂದು ಎಣಿಸಿ ತಿರುಗಿ ಅವನು ಕಲ್ಯಾಣಕ್ಕೆ ಬಂದಿದ್ದನು. ಬಿಜ್ಜಳನ ಕೊಲೆಯಾದ ಬಳಿಕ ಬಿಜ್ಜಳನ ದಂಡಾಳುಗಳು ಶಿವಶರಣರನ್ನು ಬೆನ್ನಟ್ಟಿ ಅವರನ್ನು ಮುಂದುವರಿಸುತ್ತಾ ಬಂದವು. ಆದ್ದ

ರಿಂದ ಚನ್ನಬಸವನೂ, ಮಡಿವಾಳ ಮಾಚಿದೇವನೂ, ನಾಗಲಾಂಬಿಕೆ ಗಂಗಾಂಬಿಕೆಯರೂ ತೊರಗಲ್ಲು ನಾಡಿನಲ್ಲಿರುವ ಮುರಗೋಡ ಮತ್ತು ಅದರ ಸುತ್ತಲಿನ ಅರಣ್ಯಮಯವಾದ ಬಿಕ್ಕಟ್ಟಿನ ಪ್ರದೇಶಗಳಲ್ಲಿ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಆದರೆ ವೈರಿಗಳ ಸೈನಿಕರು ಬೆನ್ನಟ್ಟುತ್ತ ಇಲ್ಲಿಯೂ ಏರಿ ಬಂದರು. ಆಗ ಮುರಗೋಡಕ್ಕೆ ಸಮೀಪವಿರುವ ಅನೇಕ ಗ್ರಾಮಗಳಲ್ಲಿ ಕಾಳಗಗಳು ಸಂಭವಿಸಿದವು. ಈ ಕಾಳಗಗಳಲ್ಲಿ ಚನ್ನಬಸವನು ಪುನಃ ಹಿಂದಕ್ಕೆ ಸರಿದು ಕಾತರವಳ್ಳಿ ಮತ್ತು ಸಂಪಗಾವ ಈ ಭಾಗಕ್ಕೆ ಬಂದು ಅಲ್ಲಿ ಶತ್ರುಗಳ ಕೂಡ ಕಾದಾಡಲು ಸಿದ್ಧನಾಗಿ ನಿಂತನು.

## ನಾಗಲಾಪುರದಲ್ಲಿ ವಾಸ.

ಸಂಪಗಾವ ಗ್ರಾಮಕ್ಕೆ ನೈಋತ್ಯ ದಿಕ್ಕಿಗೆ ೩ ಮೈಲುಗಳ ಮೇಲೆ ನಾಗಲಾಪುರವೆಂಬ ಗ್ರಾಮವಿದೆ. ಅಲ್ಲಿ ನಾಗಲಾಂಬಿಕೆಯು ಸೈನಿಕರೊಡನೆ ತನ್ನ ವಾಸಕ್ಕೆ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡ್ಡಳು. ಇದಕ್ಕೆ ಸಮೀಪವಿರುವ ಕಾತರವಳ್ಳಿಯಲ್ಲಿ ಉಭಯ ದಂಡಾಳುಗಳಲ್ಲಿ ಕಡುತರವಾದ ಕಾಳಗವೆಸಗಿತು. ಆಗ ಅಳಿಯ ಬಿಜ್ಜಳನ ದಂಡಾಳುಗಳು ಶಿವಶರಣರನ್ನು ಸಂಹಾರ ಮಾಡಲು ಬಹಳ ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನಗಳು ನಿಷ್ಫಲವಾದವು. ಅವರು ಶಿವಶರಣರನ್ನು ಸಂಹಾರ ಮಾಡುವ ಬದಲು ಅವರ ಸೇನಾನಾಯಕನಾದ ಅಳಿಯ ಬಿಜ್ಜಳನೇ ರಣರಂಗದಲ್ಲಿ ಮೂರ್ಛೆ ಹೋಗಿ ಅವರ ಕೈಗೆ ಸಿಕ್ಕಿಬಿದ್ದನು. ಆಗ ಅವನ ತಲೆಯನ್ನು ಕೂಡಲೆ ಅವರು ಹಾರಿಸುವವರಿದ್ದರು. ಆದರೆ ಅಷ್ಟರಲ್ಲಿ ಅಲ್ಲಿದ್ದ ನಾಗಲಾಂಬಿಕೆಯು ಅವರನ್ನು ತಡೆದು ಅಳಿಯ ಬಿಜ್ಜಳನಿಗೆ ಪ್ರಾಣದಾನ ಮಾಡಿ ಅವನನ್ನು ಬಿಟ್ಟುಕೊಡುವಂತೆ ಮಾಡಿದಳು.

ನಾಗಲಾಪುರದಲ್ಲಿ ನಾಗಲಾಂಬಿಕೆಯು ಬಹಳ ದಿನಗಳ ವರೆಗೆ ಇದ್ದಳು. ಅದರಿಂದ ಅಲ್ಲಿಯ ಜನರು ಆಕೆಯ ಹೆಸರಿನಿಂದ ಅಲ್ಲಿ ಒಂದು ಮೂರ್ತಿಯನ್ನು ಸ್ಥಾಪಿಸಿ ಅದರ ಮೇಲೆ ಒಂದು ದೇವಾಲಯವನ್ನು ಕಟ್ಟಿಸಿದರು. ಈ ದೇವಾಲಯವು ಈಗಲೂ ಅಲ್ಲಿ ಅಸ್ತಿತ್ವದಲ್ಲಿದೆ. ಈ ಮೂರ್ತಿಯು ಎರಡು ಫೂಟ ಎತ್ತರವಿದೆ. ಅದಕ್ಕೆ ತಳಿಬಿಟ್ಟ ಕೂದಲುಗಳಿವೆ. ಅವು ಭುಜದ ಮೇಲೆ ಪಸರಿಸಿರುತ್ತವೆ. ಕೊರಳಲ್ಲಿ ರುದ್ರಾಕ್ಷಿ ಮಣಿಗಳ ಸರವಿದೆ. ಕಯ್ಯಲ್ಲಿ ಜಪಮಾಲೆ ಇದೆ. ಹೀಗೆ ನಾಗಲಾಂಬಿಕೆಯ ಮೂರ್ತಿಯು ಇದ್ದು ಇದು ಒಬ್ಬ ಯೋಗಿಣಿಯದಾಗಿದೆ.

ಅದರ ನೆರೆಯಲ್ಲಿ ಬಸವ ಮೂರ್ತಿಯೂ ಇದೆ. ಜನರು ಇದು ಬಸವನದೆಂದು ಹೇಳುತ್ತಿದ್ದರೂ ಅದು ಚನ್ನಬಸವನದಿರುತ್ತದೆಂದು ತೋರುತ್ತದೆ. ಈ ಗ್ರಾಮದಲ್ಲಿ ಈ ದೇವಾಲಯವಲ್ಲದೆ, ರುದ್ರಮುನಿಯ ದೇವಾಲಯವೂ ಇದೆ. ರುದ್ರಮುನಿಯು ಹಿಂದುಗಡೆ ಉಳಿವಿಗೆ ಹೋಗುವಾಗ್ಗೆ ಶಿವಶರಣರ ಹೋರಾಟದ ಸ್ಥಳಗಳನ್ನು ಸಂದರ್ಶಿಸುತ್ತ ಹೋಗಿದ್ದಾನೆ. ಆಗ ಅವನು ನಾಗಳಾಪುರದಲ್ಲಿಯೂ ಕೆಲದಿನ ನಿಂತು ಹೋಗಿರಬಹುದು. ಅದರ ನೆನಪಿನ ಗೋಸ್ಕರ ಜನರು ರುದ್ರಮುನಿಯ ಗುಡಿಯನ್ನು ಸಹ ಇಲ್ಲಿ ಕಟ್ಟಿಸಿದ್ದಾರೆ.

ಈ ಎಲ್ಲ ದೃಶ್ಯಗಳು ಇದಿರಾಳಿಗಳ ಕೂಡ ಶಿವಶರಣರು ಕಡುತರವಾಗಿ ಹೋರಾಡಿದ್ದನ್ನು ತೋರಿಸುತ್ತವೆ. ಕಡೆಗೆ ಶಿವಶರಣರಿಗೆ ತಮ್ಮ ಮೇಲೇರಿ ಬರುತ್ತಿದ್ದ ಬಿಜ್ಜಳನ ದಂಡಾಳುಗಳನ್ನು ಹಿಂದಕ್ಕಟ್ಟುವದು ಅಸಾಧ್ಯವಾಯಿತು. ಯಾಕಂದರೆ ಇದಿರಾಳಿಗಳ ಸಂಖ್ಯಾಬಲವು ಬಹಳ ಹೆಚ್ಚಾದ್ದರಿಂದ ಅವರನ್ನು ಶಿವಶರಣಯರು ತಡೆಯುವದು ಕಷ್ಟವಾಯಿತೆಂದು ನಾವು ಅನುಮಾನ ಮಾಡಬೇಕಾಗುತ್ತದೆ.

## ಅರಣ್ಯ ಮಧ್ಯಪ್ರವೇಶ.

ತೊರಗಲ್ಲ ನಾಡಿನಲ್ಲಿ ಕಾತರವಳ್ಳಿಯ ಕಾಳಗವೇ ಕಡೆಯದಾಗಿರುತ್ತದೆ. ಇದರ ತರುವಾಯ ಶಿವಶರಣರ ದಂಡಿನಲ್ಲಿ ಎರಡು ವಿಭಾಗಗಳು ಮಾಡಲ್ಪಟ್ಟವು. ಒಂದು ವಿಭಾಗವು ಹಲಸಿಗೆ, ಜಗಳಬೆಟ್ಟ ಸಾಂಬ್ರಾಣಿ ಈ ಗ್ರಾಮಗಳ ಮೇಲಿಂದ ಮೇಲುಗ್ಯೆಯಲ್ಲಾಪುರಕ್ಕೆ ಸಾಗಿತು. ಇನ್ನೊಂದು ವಿಭಾಗವು ಕಿತ್ತೂರ, ನರೇಂದ್ರ, ಧಾರವಾಡ, ಸತ್ತೂರ, ಉಣಕಲ್ಲ, ಮಾರ್ಗವಾಗಿ ಹೋಗಿ ಮುಂವೆ ಕಲಘಟಗಿ ತಾಲೂಕಿನಲ್ಲಿರುವ ತಂಬೂರ ಈ ಗ್ರಾಮದ ಮೇಲಿಂದ ಹಾಯ್ದು ಮೇಲುಗ್ಯೆ ಯಲ್ಲಾಪುರಕ್ಕೆ ಹೋಗಿರುತ್ತದೆ. ಹೀಗೆ ಮಾರ್ಗಕ್ರಮಣ ಮಾಡಿದ್ದರ ಬಗ್ಗೆ ಅಲ್ಲಲ್ಲಿ ಶಿವಶರಣರ ಕುರುಹುಗಳು ಈ ಕಡೆಗೆ ಬೇರೆ ಬೇರೆ ಸ್ಥಳಗಳಲ್ಲಿ ವಿಪುಲವಾಗಿ ಈಗಲೂ ದೊರೆಯುತ್ತವೆ.

## ಮಹಾಮನೆಯ ಕಾಳಗ

ಕಾತರವಳ್ಳಿಯ ಕಾಳಗವಾದ ತರುವಾಯ ಶಿವಶರಣರು ಉಳಿವಿಯ ವರೆಗೂ ಮಾರ್ಗಕ್ರಮಣ ಮಾಡಿ ಅಲ್ಲಿ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಲು ನಿರ್ಧರಿಸಿದರು. ಇಲ್ಲಿ ಕಿನ್ನರೀ ಬ್ರಹ್ಮಯ್ಯನ ಹೊಳೆ ಎಂಬ

ಹೊಳೆಯು ಇದ್ದು ಅದರ ಧಡದಲ್ಲಿ ದುಹಾಮನೆ ಎಂಬ ಹೆಸರಿನ ಒಂದು ಅದ್ಭುತವಾದ ಗುಹೆಯು ಇದೆ. ಶಿವಶರಣರು ಅಲ್ಲಿ ಇದ್ದು ಕೊಂಡು ತಮ್ಮ ರಕ್ಷಣೆ ಮಾಡಿ ಕೊಳ್ಳಲು ಸಿದ್ಧರಾಗಿ ನಿಂತರು. ಅದಕ್ಕೆ ಸಮೀಪವಾಗಿ ಒಂದು ದೊಡ್ಡ ಕೊಳ್ಳವು ಇದೆ. ಅದು ಕೆಲವು ಪರ್ವತ ಶ್ರೇಣಿಗಳಿಂದ ಸುತ್ತುಗಟ್ಟಲ್ಪಟ್ಟಿದೆ. ಈ ಶ್ರೇಣಿಯ ಒಂದು ಭಾಗದಲ್ಲಿ ಅನೇಕ ಸ್ವಾಭಾವಿಕ ಗುಹೆಗಳಿವೆ. ಈ ಗುಹೆಗಳಲ್ಲಿ ಶಿವಶರಣರು ಆಶ್ರಯವನ್ನು ಹೊಂದಿದರು. ಆದರೆ ಅವರ ಮುಖ್ಯ ಠಾಣ್ಯವು ಮಹಾಮನೆಯ ಗವಿಯೇ ಆಗಿತ್ತು. ಅದರಲ್ಲಿ ಅವರು ಹೊಳೆಯ ಕೆಲ ಭಾಗವನ್ನು ತಿರುವಿ ಒಂದು ಕಂದಕವನ್ನು ಮಾಡಿ ಕೊಂಡರು.

ಈ ಸಮಯದಲ್ಲಿ ನಾಗಲಾಂಬಿಕೆಯು ಚನ್ನಬಸವ, ಕಿನ್ನರೀಬ್ರಹ್ಮಯ್ಯ ಮೊದಲಾದ ಶಿವಶರಣರೊಂದಿಗೆ ಇದ್ದು, ಅವಳು ಅವರನ್ನು ಯಾವಾಗಲೂ ಪ್ರೋತ್ಸಾಹಿಸುತ್ತಲೇ ಇದ್ದಳು. ಗುಹೆಯ ಸುತ್ತಲೂ ಕಾಳಗವು ಪ್ರಾರಂಭವಾಯಿತು. ಅಂಥ ಕಠಿಣ ಕಾಳಗದಲ್ಲಿ ಒಂದು ವಿಮಾನವು ಹಾರಾಡಹತ್ತಿತು. ಆಗ ಶಿವಶರಣರು ಬಂದು ಉನ್ನತವಾದ ಪ್ರದೇಶದಲ್ಲಿ ಒಂದು ಎತ್ತರವಾದ ಗಿಡವಿದ್ದು ಅದಕ್ಕೆ ಒಂದು ಉಯ್ಯಾಲೆಯನ್ನು ಕಟ್ಟಿ ತಮ್ಮನ್ನು ಸುತ್ತುಗಟ್ಟಿದ ವೈರಿಗಳ ಆಳವಿನ ಹೊರಗೆ ಹೋಗುವಂತೆ ಆ ಉಯ್ಯಾಲೆಯನ್ನು ತೂಗ ಹತ್ತಲು ಅದರಲ್ಲಿದ್ದವರು ಒಬ್ಬೊಬ್ಬರೇ ಆ ವಿಮಾನದ ಮೂಲಕ ಕೈಲಾಸಕ್ಕೆ ಹೋಗುವವರಾದರು.

ವಾಚಕರು ಇದರ ಅರ್ಥವೇನೆಂಬುದನ್ನು ಯೋಚಿಸಿದಲ್ಲಿ ಮಹಾಮನೆಯ ಗುಹೆಯಲ್ಲಿದ್ದವರೆಲ್ಲ ಶತ್ರುಗಳಿಂದ ಹತರಾದರೆಂದು ಹೇಳಿದರೆ ತಪ್ಪಾಗಲಾರದು. ಆದರೆ ಹೀಗೆ ಹೇಳಿದಲ್ಲಿ ಅವರ ಮೇಲಿದ್ದ ಬಹುಜನ ಸಮಾಜದ ಈಗಿನ ಭಕ್ತಿಯು ದೂರಾದೀತೆಂದು ಭಾವಿಸಿ ಶಿವಶರಣರು ಉಯ್ಯಾಲೆಯ ಮೂಲಕ ಪರಲೋಕಕ್ಕೆ ಹೋದರೆಂದು ಹೇಳುತ್ತ ಬಂದಿದ್ದಾರೆ.

ಈ ಕಾಲದಲ್ಲಿ ನಾಗಲಾಂಬಿಕೆಯು ಶಿವಶರಣರೊಡನೆಯೇ ಇದ್ದಿರಬೇಕು. ಆದರೆ ಅವಳನ್ನು ವೈರಿಗಳು ಎಲ್ಲಿಯೂ ನೋಯಿಸಿದಂತೆ ತೋರುವದಿಲ್ಲ. ಅಳಿಯ ಬಿಜ್ಜಳನು ಕಾತರವಳ್ಳಿಯ ಕಾಳಗದಲ್ಲಿ ರಣಾಂಗಣದಲ್ಲಿ ಮೂರ್ಛೆ

ಹೊಂದಿ ಬಿದ್ದಾಗ ನಾಗಲಾಂಬಿಕೆಯು ಅವನನ್ನು ಉಳಿಸಿದ್ದಾಳೆ ಇದನ್ನು ವೈರಿಗಳು ಲಕ್ಷಿಸಿ ಅವರು ನಾಗಲಾಂಬಿಕೆಯು ಜೀವಕ್ಕೆ ಅಪಾಯ ಮಾಡದೆ ಅವಳನ್ನು ಬಿಟ್ಟಿರಬೇಕೆಂದು ನಮ್ಮ ಊಹೆ ಇದೆ.

ಯಾವ ಸ್ಥಿತಿಯನ್ನು ಗಂಗಾಂಬಿಕೆ, ಕಕ್ಕಯ್ಯ, ಮೊದಲಾದ ಶಿವಶರಣರು ಹೊಂದಿದರೋ, ಅದು ಅವಳಿಗೆ ಪ್ರಾಪ್ತವಾಗಿಲ್ಲವೆಂದು ನಮಗೆ ತೋರುತ್ತದೆ.

## ಉಳಿವಿಯಲ್ಲಿ ನುಲಿಯಚಂದಯ್ಯ.

ಹೀಗೆ ಮಹಾಮನೆಯ ಗುಹೆಯ ಹೋರಾಟವಿದೆ. ಇದು ಮುಗಿದ ಬಳಿಕ ಶಿವಶರಣರಲ್ಲಿ ನಾಗಲಾಂಬಿಕೆ ಮತ್ತು ಹಡಪದ ರೇಚಯ್ಯ ಇವರಿಬ್ಬರೇ ಉಳಿದರು. ಅವರಲ್ಲಿ ಹಡಪದ ರೇಚಯ್ಯನನ್ನು ಚನ್ನಬಸವೇಶ್ವರನು ವಿಮಾನಮಾರ್ಗವಾಗಿ ಕೈಲಾಸಕ್ಕೆ ಒಯ್ಯದೆ ಕೆಲಪೊಂದು ಕಾರಣದ ಮೂಲಕ ಅವನನ್ನು ಹಿಂದುಳಿಸಿದ್ದನು. ನಾವು ಹಿಂದೆ ರೇಚಯ್ಯನ ಚರಿತ್ರೆಯಲ್ಲಿ ಈ ಬಗ್ಗೆ ಹೇಳಿದ್ದೇವೆ. ಈ ಕಾಲದಲ್ಲಿ ನುಲಿಯಚಂದಯ್ಯನೂ ಉಳಿವಿಗೆ ಬಂದಿದ್ದನೆಂದು ತಿಳಿಯುತ್ತದೆ. ಆದರೆ ಅವನು ಯಾವ ಸಂದರ್ಭದಲ್ಲಿ ಇಲ್ಲಿಗೆ ಬಂದನು ಮತ್ತು ಯಾವ ಗ್ರಾಮದಲ್ಲಿ ಅವನು ನಾಗಲಾಂಬಿಕೆಯನ್ನು ಕೂಡಿದನು, ಎಂಬುದು ನಮಗೆ ಗ್ರಂಥದಿಂದ ಗೊತ್ತಾಗುವದಿಲ್ಲ. ಆದರೆ ಚಂದಯ್ಯನು ನಾಗಲಾಂಬಿಕೆಯ ಕೂಡ ಇದ್ದು ಅವಳಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿಕೊಡುತ್ತ ಅವಳ ಕೂಡ ಬಂದಿದ್ದನೆಂಬುದು ಸ್ಥಾನಿಕ ಕುರುಹುಗಳು ಮತ್ತು ಐತಿಹ್ಯಗಳಿಂದ ತಿಳಿದುಬರುತ್ತಿವೆ.

## ಭಾವೀ ಕಾರ್ಯಕ್ರಮವನ್ನು ನಿರ್ಧರಿಸಿದ್ದು.

ಮುಂದೆ ಕೆಲವು ದಿನಗಳಲ್ಲಿ ರುದ್ರಮುನಿಯು ಮತ್ತು ಮಡಿವಾಳ ಮಾಚಿದೇವನ ಗುರುವಾದ ಹಿಪ್ಪರಿಗೆಯ ಮಲ್ಲಿಕಾರ್ಜುನನು ಇವರು ಉಳಿವಿಯಲ್ಲಾದ ಘಟನೆಗಳನ್ನು ನಿರೀಕ್ಷಿಸಲಿಕ್ಕೆ ಬರುವವರಾದರು ಅವರನ್ನು ನಾಗಲಾಂಬಿಕೆ ಮತ್ತು ನುಲಿಯ ಚಂದಯ್ಯ ಇವರಿಬ್ಬರೂ ಭೆಟ್ಟಿಯಾದರು ಅವರೆಲ್ಲರೂ ಮುಂದೆ ತಾವು ಯಾವ ಮಾರ್ಗವನ್ನು ಅನುಸರಿಸಬೇಕೆಂಬುದನ್ನು ಕುರಿತು ಚರ್ಚಿಸಿ ನಿರ್ಧರಿಸಿದ್ದಾಗಿ ಕಂಡು ಬರುತ್ತದೆ. ಯಾಕಂದರೆ ಮುಂದೆ ಆದ ಘಟನೆಗಳನ್ನು ನಾವು ನಿರೀಕ್ಷಿದಲ್ಲಿ ಅವುಗಳ ಯೋಜನೆಯು ಈ ನಾಲ್ವರು ಶಿವಶರಣರಿಂದಲೇ ಆಗಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ರುದ್ರಮುನಿಯು ಚಾಲುಕ್ಯ ಮತ್ತು ಚೋಳ ರಾಜರ ಆಸ್ಥಾನಗಳಲ್ಲಿ ಬಹು ಪ್ರಸಿದ್ಧಿಗೆ ಬಂದವನಿದ್ದಾನೆ. ಆಗಿನ ಶಿವಶರಣರು ಕೇವಲ ಶಿವಪೂಜೆಯಲ್ಲಿ ನಿರತರಾದವರಲ್ಲ, ಅವರು ಲೌಕಿಕ ಜ್ಞಾನಿಗಳೂ ರಾಜಕಾರಣಿಗಳೂ ಶೂರರೂ ಇದ್ದು ಆಡಳಿತೆಯಲ್ಲಿ ನುರಿತವರಾಗಿದ್ದರೆಂಬುದನ್ನು ನಾವು ಲಕ್ಷಿಸುವದು ಅವಶ್ಯವಿದೆ. ನಾಗಲಾಂಬಿಕೆಯು ಬಸವೇಶ್ವರನ ಕೂಡ ಯಾವಾಗಲೂ ಇದ್ದು ಅವನ ವಿಚಾರಗಳನ್ನೂ ಆಗಿನ ರಾಜಕಾರಣಗಳನ್ನೂ ಚನ್ನಾಗಿ ತಿಳಿದವಳಾಗಿದ್ದಳು.

ಈ ಕಠಿಣ ಕಾಲದಲ್ಲಿ ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಕಿನ್ನರೀಬ್ರಹ್ಮಯ್ಯ ಇಂಥ ಮಹಾನುಭಾವರಾರೂ ಜೀವಿಸಿರಲಿಲ್ಲ. ವೈರಿಗಳ ತ್ರಾಸಕ್ಕೆ ಕುತ್ತಾಗಿದ್ದರು. ಈ ಸಮಯದಲ್ಲಿ ವೀರಶೈವ ಸಮಾಜವು ಉತ್ತರ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿ ಉಳಿಯುವ ಚಿನ್ಹಗಳು ಎಷ್ಟು ಮಾತ್ರವೂ ತೋರುತ್ತಿರಲಿಲ್ಲ. ಸುತ್ತಲೂ ಕತ್ತಲೆಯು ಕವಿದಿತ್ತು. ಇಂಥ ಕಠಿಣ ಪರಿಸ್ಥಿತಿಯು ಬಂದಬಳಿಕ ಎಂಥವನಿದ್ದರೂ ಕೂಡ ಅವನು ಎದೆ ಗುಂದುವದು ಸಹಜವಿದೆ. ಆದರೆ ರುದ್ರಮುನಿಯು ಮತ್ತು ನಾಗಲಾಂಬಿಕೆಯರು ಎಷ್ಟು ಮಾತ್ರವೂ ಎದೆಗುಂದಲಿಲ್ಲ. ಅವರು ವೈರಿಗಳನ್ನು ಮುರಿದಿಕ್ಕುವ ಹೊಸ ಹಂಚಿಕೆಗಳನ್ನು ಕಂಡುಹಿಡಿಯುತ್ತಿದ್ದರು.

## ಶ್ರೀಶೈಲದಲ್ಲಿ ಶಿವಶರಣರು.

ಈ ಸಮಯದಲ್ಲಿ ಅಲ್ಲಮಪ್ರಭುವು ಮಹಾದೇವಿಯಕ್ಕ ಮೊದಲಾದ ಶಿವಶರಣರು ಶ್ರೀಶೈಲ ಪ್ರಾಂತದಲ್ಲಿ ಆಶ್ರಯಹೊಂದಿದ್ದರು. ಅವರು ಅಲ್ಲಿ ಬಹಳ ದಿವಸ ಬಾಳಿದಂತೆ ಕಂಡುಬರುವದಿಲ್ಲ. ಆದರೆ ಮುಂದೆ ಮುಕ್ತಿಮುನಿಯು ಶ್ರೀಶೈಲ ಪೀಠಕ್ಕೆ ಅಧಿಪತಿಯಾಗಿ ಇದಿರಾಳಿಗಳನ್ನು ಸದೆಬಡೆಯುವ ಸಾಮರ್ಥ್ಯವನ್ನು ತಂದುಕೊಂಡಿದ್ದನು. ಅವನು ಈ ಭಾಗದಲ್ಲಿ ಅನೇಕ ಯುದ್ಧಗಳನ್ನು ಮಾಡಿ ಪರವಾದಿಗಳನ್ನು ಸೋಲಿಸಿದ್ದನು. ಈ ಸಂಗತಿಗಳು ರುದ್ರಮುನಿಗೆ ಚಾರರಾಗಿ ಸಂಚಾರ ಮಾಡುತ್ತಿದ್ದ ಜಂಗಮರ ಮುಖಾಂತರ ಅವನಿಗೆ ತಿಳಿದು ಬರುತ್ತಿದ್ದವು. ಆದ್ದರಿಂದ ರುದ್ರಮುನಿಯು ಈ ಪ್ರದೇಶಕ್ಕೆ ಹೋಗಿ ಅಲ್ಲಿಂದ ಸಹಾಯವನ್ನು ಕರ್ನಾಟಕದ ಪಶ್ಚಿಮ ಪ್ರದೇಶಗಳಿಗೆ ತಂದುಕೊಂಡು ಇಲ್ಲಿ ಅತ್ಯಂತ ಅವನತ ಸ್ಥಿತಿಗೆ ಬಂದಿದ್ದ ವೀರಶೈವ ಸಮಾಜವನ್ನು ಪುನಃ ಉದ್ಧರಿಸಬೇಕೆಂದು ನಿರ್ಧರಿಸಿದನು.

## ಎಣ್ಣೆಹೊಳೆ ತೀರದಲ್ಲಿ ನಾಗಲಾಂಬಿಕೆ.

ಶ್ರೀಶೈಲದಲ್ಲಿ ಶಿವಶರಣರು ಗೆಲ್ಲುತ್ತಿರುವಾಗ್ಗೆ ಶಿವಮೊಗ್ಗಾ ಪ್ರಾಂತದಲ್ಲಿ ತುಂಗಾ ಮತ್ತು ಭದ್ರಾ ನದಿಗಳ ತೀರಪ್ರದೇಶದಲ್ಲಿ ಪರವಾದಿಗಳು ಬಹು ಬಲಿಷ್ಠರಾಗಿ ವೀರಶೈವ ಸಮಾಜವನ್ನು ಅಳಿಸಿಬಿಡುವದರಲ್ಲಿದ್ದರು. ಈ ಪ್ರಾಂತವು ಈಗಿನ ಬಾಳೆಹುನ್ನೂರ ಅಥವಾ ಬಾಳೇಹಳ್ಳಿಯ ಪ್ರದೇಶವಾಗಿದೆ. ಈ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ವೀರಶೈವರ ಆಳಿಗಾಲವೇ ಪ್ರಾಪ್ತವಾಗಿತ್ತು. ಈ ಸ್ಥಿತಿಯಲ್ಲಿ ಶ್ರೀಶೈಲ ಪ್ರಾಂತದಿಂದ ಸಹಾಯ ಬರುವವರೆಗೆ ಶಿವಮೊಗ್ಗಾ ಜಿಲ್ಹೆಯ ಪ್ರದೇಶವನ್ನು ವೀರಶೈವರಿಗೋಸ್ಕರ ಉಳಿಸಬೇಕೆಂಬ ಯೋಜನೆಯು ಈ ಕಾಲಕ್ಕೆ ಉಳವಿಯಲ್ಲಿ ಮಾಡಲ್ಪಟ್ಟಿತು. ಈ ಕಾರ್ಯಕ್ಕೋಸ್ಕರ ಮೊದಲು ನಾಗಲಾಂಬಿಕೆ ಮತ್ತು ನುಲಿಯಚಂದಯ್ಯ ಇವರು ಭದ್ರಾ ಮತ್ತು ತುಂಗಾ ನದೀ ಪ್ರದೇಶಕ್ಕೆ ಹೋಗಬೇಕೆಂದು ನಿರ್ಧರಿಸಿದರು. ಯಾಕಂದರೆ ನಾಗಲಾಂಬಿಕೆಯು ಬಸವೇಶ್ವರನ ಅಕ್ಕನಾಗಿದ್ದು ಅವಳು ದೇಶದಲ್ಲೆಲ್ಲ ಬಹು ಪ್ರಸಿದ್ಧಳಾಗಿದ್ದಳು. ಈ ಭಾಗದಲ್ಲಿದ್ದ ಜನರು ಅವಳಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡಬಹುದೆಂಬ ತಿಳಿವಳಿಕೆಯು ಅವರಲ್ಲಿ ಉಂಟಾಗಿತ್ತು. ಇಂಥ ಸ್ಥಿತಿಯಲ್ಲಿ ಅತ್ಯಂತ ಧೈರ್ಯಸ್ಥಳಾದ ನಾಗಲಾಂಬಿಕೆಯು ಹೀಗೆ ಕಾರ್ಯಮಾಡಲು ಒಪ್ಪಿ ಅವಳು ಭದ್ರಾ ನದೀ ತೀರ ಪ್ರದೇಶಕ್ಕೆ ಬಂದಳು. ಅವಳು ತರೀಕೆರೆ ಹತ್ತರ ಎಣ್ಣೆಹೊಳೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನದೀಭಾಗಕ್ಕೆ ಬರಲು ಅಲ್ಲಿಯೇ ಅವಳು ತನ್ನ ಬಿಡಾರವನ್ನು ಬಿಟ್ಟಳು. (ಇಲ್ಲಿಂದ ಬಾಳೇಹಳ್ಳಿಯ ಸ್ಥಾನವು ೩೫-೪೦ ಮೈಲುಗಳ ಮೇಲೆ ಇರುತ್ತಿದೆ.) ಇಲ್ಲಿ ಅವಳು ಇದ್ದುಕೊಂಡು ಶ್ರೀಶೈಲ ಪ್ರಾಂತದಿಂದ ಸಹಾಯವು ಬರುವವರೆಗೆ ಕಾದುಕೊಂಡಿರಬೇಕೆಂದು ನಿಶ್ಚಯಿಸಿದ್ದಳು.

## ನಂದಿಯಲ್ಲಿ ನುಲಿಯ ಚಂದಯ್ಯ.

ಅವಳ ಕೂಡ ನುಲಿಯ ಚಂದಯ್ಯನೂ ಇದ್ದನು. ಆದರೆ ಅವನು ಎಣ್ಣೆಹೊಳೆಯ ಸ್ಥಾನದಲ್ಲಿ ಇರದೆ ಈ ಸ್ಥಳದಿಂದ ದಕ್ಷಿಣಕ್ಕೆ ೮-೧೦ ಮೈಲುಗಳ ಮೇಲಿರುವ ನಂದೀ ಎಂಬ ಗ್ರಾಮಕ್ಕೆ ಬಂದು ನೆಲಿಸಿದನು. ಇಲ್ಲಿಯೇ ಅವನು ನುಲಿಯನ್ನು ಹೊಸೆಯುವ ಕಾಯಕವನ್ನು ಮಾಡುತ್ತ ಬಂದನು.

## ನಾಗಲಾಂಬಿಕೆಯ ಅವಸಾನ.

ನಾಗಲಾಂಬಿಕೆಯು ಎಣ್ಣೆಹೊಳೆಯ ಧಡದಲ್ಲಿ ಇದ್ದಾಗ್ಗೆ ಸಿದ್ಧವೀರ-ಸ್ವಾಮಿಗಳೆಂಬವರು ಅಲ್ಲಿಗೆ ಬಂದು ಮಠವನ್ನು ಕಟ್ಟಿಸಿದರು. ಆದರೆ ಮುಂದೆ ನಾಗಲಾಂಬಿಕೆಯು ಬಹಳ ದಿವಸ ಇಲ್ಲಿ ಜೀವಿಸಿರಲಿಲ್ಲ. ಅವಳು ಅಲ್ಲಿಯೇ ಸಮಾಧಿಸ್ಥಳಾಗಿ ಇಹಲೋಕವನ್ನು ತ್ಯಜಿಸಿದಳು. ಅವಳ ಸಮಾಧಿಯು ಇಗಲೂ ಇದೇ ಸ್ಥಳದಲ್ಲಿದೆ. ಹೀಗೆ ವೀರಶೈವ ಸಮಾಜ ಮತ್ತು ಧರ್ಮಕ್ಕೋಸ್ಕರ ನಾಗಲಾಂಬಿಕೆಯು ತನ್ನ ತಮ್ಮ ಬಸವೇಶ್ವರನಂತೆ ಅದ್ಭುತ ಕಾರ್ಯಗಳನ್ನು ಮಾಡುತ್ತ ಮರಣ ಹೊಂದಿದ್ದಾಳೆ.

ಇತ್ತ ನುಲಿಯ ಚಂದಯ್ಯನೂ ಬಹಳ ದಿವಸ ನಂದೀಗ್ರಾಮದಲ್ಲಿರಲಿಲ್ಲ. ಅವನು ತಾನು "ಕಲ್ಲು ಹತ್ತಿಗಿರಿ" ಎಂಬ ಊರಿಗೆ ಹೋಗುವೆನೆಂದು ಅಲ್ಲಿಯ ಜನರಿಗೆ ಹೇಳಿ ಅದೃಶ್ಯನಾದನಂತೆ. ಅವನ ಅಂತ್ಯವನ್ನು ಹೊಂದಿದ ಸ್ಥಾನವು ಯಾವದೆಂಬುದು ನಿಶ್ಚಿತವಾಗಿ ತಿಳಿದಿರುವದಿಲ್ಲ. ಆದರೆ ನಂದೀ ಗ್ರಾಮದಲ್ಲಿ ನುಲಿಯ ಚಂದಯ್ಯನ ಜಾತ್ರೆಯು ಈಗಲೂ ನಡೆಯುತ್ತದೆ. ಇಲ್ಲಿಯೇ ಅವನ ಅಂತ್ಯವಾಗಿರಬೇಕು. ಈ ಪ್ರಕಾರ ಅಕ್ಕ ನಾಗಲಾಂಬಿಕೆ ಮತ್ತು ನುಲಿಯ ಚಂದಯ್ಯ ಇವರ ಅಂತ್ಯವು ಆಗಿರುತ್ತದೆ.

## ಶ್ರೀಶೈಲದಲ್ಲಿ ರುದ್ರಮುನಿಯು.

ಹೀಗೆ ಅಕ್ಕ ನಾಗಲಾಂಬಿಕೆಯು ಭದ್ರಾನದೀ ಪ್ರದೇಶಕ್ಕೆ ಹೋಗಲಾಗಿ ಇತ್ತ ರುದ್ರಮುನಿಯು ಶ್ರೀಶೈಲ ಪ್ರಾಂತಕ್ಕೆ ಹೋಗಲು ಸಿದ್ಧನಾಗಿ ಮೊದಲು ಅವನು ಕಲ್ಯಾಣ ಪಟ್ಟಣಕ್ಕೆ ಬಂದನು. ಅಲ್ಲಿಂದ ಅವನು ಶ್ರೀಶೈಲಕ್ಕೆ ಬಂದು ರಣರಂಗದಲ್ಲಿ ವಿಜಯ ಹೊಂದಿದ ಮುಕ್ತಿಮುನಿ ಮೊದಲಾದ ಶಿವಶರಣರನ್ನು ಕೂಡಿಕೊಂಡನು. ಆಗ ರುದ್ರಮುನಿಯು ಶ್ರೀಶೈಲ ಸಿಂಹಾಸನವನ್ನು ಅಲ್ಲಿ ಸ್ಥಿರಪಡಿಸಿ ಶಿವಮೊಗ್ಗಾ ಜಿಲ್ಲೆಯ ಕಾಡುಪ್ರದೇಶದಲ್ಲಿ ಏಕಾಕಿಯಾಗಿ ಮಾರ್ಗನಿರೀಕ್ಷಣೆ ಮಾಡುತ್ತಿದ್ದ ನಾಗಲಾಂಬಿಕೆಯ ಸಹಾಯಕ್ಕಾಗಿ ಶಿವಶರಣರ ಸೈನ್ಯ ಬಲವನ್ನು ದಿಗಂಬರ ಮುಕ್ತಿಮುನಿಯ ಆಧಿಪತ್ಯದಲ್ಲಿ ಕಳಿಸುವವನಾದನು.

## ದಿಗಂಬರ ಮುಕ್ತಿಮುನಿ.

ದಿಗಂಬರ ಮುಕ್ತಿಮುನಿಯು ಎಣ್ಣೆಹೊಳೆ ಮತ್ತು ಬಾಳೆಹೊನ್ನೂರ ಪ್ರದೇಶಕ್ಕೆ ಬಂದು ವೈರಿಗಳೊಡನೆ ಘೋರವಾದ ಕದನದಲ್ಲಿ ತೊಡಗಿದವ

ನಾದನು. ಅವುಗಳಲ್ಲಿ ಪರಖಾದಿಗಳು ಸಂಪೂರ್ಣವಾಗಿ ಸೋತು ಹೋದರು. ಇಲ್ಲಿ ಬಾಳೇಹಳ್ಳಿ ಸಿಂಹಾಸನವು ಸ್ಥಾಪಿತವಾಯಿತು. ಹೀಗೆ ಈ ಭಾಗದಲ್ಲಿ ವೀರಶೈವ ಮತವು ಬೇರೂರಿತು. ಮುಂದೆ ಅದು ವಿಸ್ತಾರವನ್ನು ಹೊಂದುತ್ತ ಇಡೀ ಕರ್ನಾಟಕವನ್ನು ಆವರಿಸಿತು.

ಈ ಪ್ರಕಾರ ನಾಗಲಾಂಬಿಕೆಯು ಕರ್ನಾಟಕದಲ್ಲಿ ಹೆಸರಾದ ಸ್ತ್ರೀಯರಲ್ಲಿ ಅಗ್ರಸ್ಥಾನವನ್ನು ಹೊಂದಿದವಳಾಗಿದ್ದಾಳೆ. ಅವಳು ಮಾಡಿದ ಸಾಹಸದ ಕಾರ್ಯಗಳು ಅನಂತವಾಗಿವೆ. ಅವಳು ಬಸವೇಶ್ವರನಿಗೆ ಯಾವಾಗಲೂ ಅನುವರ್ತಿಯಾಗಿ ಸಹಾಯ ಮಾಡುತ್ತ ಬಂದಳು. ತಾಯಿ ತಂದೆಗಳು ಮತ್ತು ಬಂಧು ಬಳಗದವರು ಬಸವೇಶ್ವರನನ್ನು ಮನೆಯಿಂದ ಹೊರಡಿಸಿದ ಬಳಿಕ ಅವಳೊಬ್ಬಳೇ ಅವನೊಡನೆ ಹೋಗಲು ಸಿದ್ಧಳಾದಳು. ಇದು ಅವಳ ಮನೋ ಧೈರ್ಯವನ್ನು ತೋರಿಸುತ್ತದೆ. ಆಗ ಆಕೆಯು ಬಹು ಚಿಕ್ಕ ವಯಸ್ಸಿನವಳಾಗಿದ್ದಳು. ಆದರೂ ಶಿವಾನುಭವದ ಮೇಲಿದ್ದ ಅವಳ ಪ್ರೀತಿಯು ಅವಳನ್ನು ಹೀಗೆ ಕಷ್ಟ ಸಹಿಲು ಪ್ರೇರಣೆಗೊಳಿಸಿತು. ಅವಳು ಶಿವಾನುಭವಿಯೂ ಉಚ್ಚ ಯೋಗಿನಿಯೂ ಎಂದು ಪ್ರಸಿದ್ಧಿಯನ್ನು ಹೊಂದಿದಳು. ಅವಳು ಚಿಕ್ಕ ವಯಸ್ಸಿನಲ್ಲಿಯೇ ತನ್ನ ಮಗ ಚನ್ನಬಸವೇಶ್ವರನಿಗೆ ಶಿವಾನುಭವದ ಜ್ಞಾನವನ್ನುಂಟು ಮಾಡಿ ಅವನು ಶಿವಾನುಭವಿಗಳಲ್ಲಿ ಅಗ್ರಸ್ಥಾನವನ್ನ ವಹಿಸುವಂತೆ ಮಾಡಿದಳು. ಬಸವೇಶ್ವರನು ಕಲ್ಯಾಣದಲ್ಲಿ ನೆಲಸಿದ ಬಳಿಕ ಅವನ ಕಾರ್ಯಗಳಲ್ಲಿ ಅವನಿಗೆ ಯಾವಾಗಲೂ ಸಹಾಯಕಳಾಗಿ ಕಾರ್ಯ ಮಾಡುವವಳಾದಳು. ಅವನ ಮನೆತನದ ಕಾರ್ಯಗಳು ಸುಲಭವಾಗಿ ನಡೆಯುವಂತೆ ಅವಳು ಏರ್ಪಾಡು ಮಾಡಿದಳು. ಮುಂದೆ ಶಿವಶರಣರು ಯುದ್ಧರಂಗಕ್ಕೆ ತೆರಳಲು ಅವಳು ಅವರಿಗೆ ಮುಂದಾಳುವಾಗಿ ನಿಂತಿದ್ದಾಳೆ. ಶಸ್ತ್ರವನ್ನು ಹಿಡಿದು ವೈರಿಗಳೊಡನೆ ಹೋರಾಡಿದ್ದಾಳೆ. ಶಿವಶರಣರಿಗೆ ಈ ಕಾಲದಲ್ಲಿ ಕಠಿಣ ಕಾಲವು ಪ್ರಾಪ್ತವಾಗಿತ್ತು. ಆದರೂ ಅವರು ಎದೆಗೆಡದಂತೆ ಅವರನ್ನು ಹುರಿದುಂಬಿಸುತ್ತ ಉಳವಿಯ ವರೆಗೂ ಬಂದಿದ್ದಾಳೆ. ಮುಂದೆ ಉಳವಿಯಲ್ಲಿ ಅವರಿಗೆ ಅಂತ್ಯಕಾಲವು ಉಂಟಾಯಿತು. ಆದರೂ ಆಕೆಯು ಧೈರ್ಯಗೆಡದೆ ಭದ್ರಾ ನದೀತೀರದಲ್ಲಿ ಶಿವಶರಣರಿಗೋಸ್ಕರ ರಕ್ಷಣೆಯ ಸ್ಥಳವನ್ನು ನಿರ್ಮಿಸಿಕೊಂಡಳು. ಹೀಗೆ ನಾಗಲಾಂಬಿಕೆಯು ಮಾಡಿದ ಮಹತ್ ಕೃತ್ಯಗಳು ಅನಂತವಾಗಿವೆ,

ಅದ್ಭುತವಾಗಿವೆ. ಕರ್ನಾಟಕ ಇತಿಹಾಸದಲ್ಲಿ ಅವಳ ಹೆಸರು ಚಿರಸ್ಥಾಯಿಯಾಗಿ ಉಳಿಯಬೇಕು. ಬಸವೇಶ್ವರನಿಗೆ ಯಾವ ಸ್ಥಾನವು ಪ್ರಾಪ್ತವಾಗಿದೆಯೋ, ಅದಕ್ಕೆಲ್ಲ ಅವಳೇ ಕಾರಣೀಭೂತಳಾಗಿದ್ದಳೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.

---

## ೪೦. ಸುಂದರನಾಚಿ.

ರೇವಣಸಿದ್ಧನು ಚೋಳರಾಜನ ರಾಜಧಾನಿಯಲ್ಲಿರುವಾಗ್ಗೆ ಅವನಿಂದ ಅನೇಕ ಮಹತ್ವದ ಪವಾಡಗಳಾದವು. ಅಲ್ಲಿ ಏಕಾಮ್ರನಾಥನೆಂಬ ಪ್ರಸಿದ್ಧ ದೇವಾಲಯವಿದ್ದು ಅದು ವಿಷ್ಣುವಿನ ದೇವಾಲಯವಾಗಿತ್ತು. ಅಲ್ಲಿ ರೇವಣಸಿದ್ಧನ ಪ್ರಭಾವದಿಂದ ಶಿವಾಲಯವಾಯಿತು. ಇದರಿಂದ ಚೋಳರಾಜನು ವಿಷ್ಣುಧರ್ಮವನ್ನು ಬಿಟ್ಟು ಶೈವಧರ್ಮವನ್ನು ಸ್ವೀಕರಿಸಿದನು. ಇಷ್ಟೇ ಅಲ್ಲ, ಅವನಿಗೆ ಸುಂದರನಾಚಿ ಎಂಬ ಮಗಳಿದ್ದು ಅವಳನ್ನು ಅವನು ರೇವಣಸಿದ್ಧೇಶ್ವರನಿಗೆ ಕೊಟ್ಟು ಲಗ್ನಮಾಡಿದನು. ಬೆಂಗಳೂರಿನ ಸಮೀಪದಲ್ಲಿ ಕ್ಲೋಸಪೇಟೆ ಎಂಬ ಗ್ರಾಮವಿದ್ದು ಅಲ್ಲಿ ರೇವಣಸಿದ್ಧನು ಕೆಲವು ಕಾಲ ವಾಸಿಸಿದ್ದನು. ಅಲ್ಲಿ ರೇವಣಸಿದ್ಧನ ದೇವಾಲಯವೂ ಈಗಲೂ ಇರುತ್ತದೆ. ಅಲ್ಲಿ ರೇವಣಸಿದ್ಧನ ಕಾಲದಲ್ಲಿ ಬಹು ಜನರು ವೀರಶೈವ ಧರ್ಮದ ದೀಕ್ಷೆಯನ್ನೂ ಹೊಂದಿದರು. ರೇವಣಸಿದ್ಧನಿಗೆ ರುದ್ರಮುನಿ ಎಂಬ ಹೆಸರಿನ ಇನ್ನೊಬ್ಬ ಮಗನಿದ್ದು ಅವನೂ ಕೂಡ ಈ ಸ್ಥಳಕ್ಕೆ ಮೇಲಿಂದಮೇಲೆ ಬರುತ್ತಿದ್ದನು. ಅದ್ದರಿಂದ ಇಲ್ಲಿ ರುದ್ರಮುನಿಯ ದೇವಾಲಯವೂ ಉಂಟಾಗಿರುತ್ತದೆ. ಹೀಗೆ ಈ ಪ್ರದೇಶವು ವೀರಶೈವರ ಒಂದು ಪವಿತ್ರ ಸ್ಥಾನವಾಗಿರುತ್ತದೆ. ಆದರೆ ರೇವಣಸಿದ್ಧನು ಇಲ್ಲಿ ಬಹಳ ದಿವಸ ವಾಸಿಸಿದಂತೆ ತೋರುವದಿಲ್ಲ. ಅವನು ತೀವ್ರ ಉತ್ತರ ಪ್ರದೇಶಕ್ಕೆ ಬರುವವನಾದರು. ಮೊದಲು ಅವನು ಮಂಗಳವಾಡಕ್ಕೆ ಬಂದನು. ಇಲ್ಲಿಂದ ೧೦-೧೨ ಮೈಲಗಳ ಮೇಲೆ ಸಿದ್ಧನಕೆರೆ ಎಂಬ ಹೆಸರಿನ ಜಲಾಶಯವನ್ನು ಅವನು ನಿರ್ಮಿಸಿದನು. ಇಲ್ಲಿ ಅಸಂಖ್ಯ ಜನ ಕೂಲಿಕಾರರನ್ನು ಅವನು ನಿಯಮಿಸಿದನು. ಅವನು ತನ್ನ ಹೆಂಡಿರನ್ನು ಸಹ ಈ ಕೆರೆಯ ಕೆಲಸಕ್ಕೆ ಹಚ್ಚಿದನು. ಇದರಲ್ಲಿ ಸುಂದರ

ನಾಚಿಯೂ ಇದ್ದಳು, ಆಗ ಅವಳು ಕೆರಿಯ ಕೆಲಸವು ತನ್ನಿಂದ ಆಗದೆಂತಲೂ, ತಾನು ತನ್ನ ತವರೂರಿಗೆ ಹೋಗುವೆನೆಂತಲೂ ಅವನಿಗೆ ಹೇಳಿದಳು. ಆದರೆ ಅವಳು ಆಗ ಮೂರು ತಿಂಗಳು ಗರ್ಭಿಣಿಯಾಗಿದ್ದಳು. ರೇವಣಸಿದ್ಧನು ನೀನು ನಿನ್ನ ತವರೂರಿಗೆ ಹೋಗಲು ಇಚ್ಛಿಸಿದರೆ ನೀನು ಹೋಗಬಹುದು. ಆದರೆ ನನ್ನ ವಸ್ತುವು ನಿನ್ನಲ್ಲಿ ಇದ್ದು ಅದನ್ನು ನೀನು ನನಗೆ ತಿರುಗಿ ಕೊಡಬೇಕಾಗುವದೆಂದು ಹೇಳಿದನು. ಹೀಗೆ ನುಡಿದು ಆಕೆಯ ಗರ್ಭವನ್ನು ರೇವಣಸಿದ್ಧನು ತಡವರಿಸಲಾಗಿ, ಆ ಗರ್ಭವು ತಾನಾಗಿಯೇ ಹೊರಕ್ಕೆ ಬಂದಿತು. ಆಗ ರೇವಣಸಿದ್ಧನು ಆ ಪಿಂಡವನ್ನು ಪೃಥ್ವಿಯಲ್ಲಿ ಹುದುಗಿಸಿಟ್ಟು ಅದನ್ನು ಜೋಕೆ ಮಾಡಹತ್ತಿದನು. ಮುಂದೆ ಆರು ತಿಂಗಳುಗಳಾದ ಬಳಿಕ ಆ ಪಿಂಡದಿಂದ ಒಬ್ಬ ಬಾಲಕನು ಪೃಥ್ವಿಯೊಳಗಿಂದ ಹೊರಬಿದ್ದನು. ಅವನಿಗೆ ರೇವಣಸಿದ್ಧನು ರುದ್ರಮುನಿ ಎಂಬ ಹೆಸರನ್ನಿಟ್ಟನು. ಮುಂದೆ ರುದ್ರಮುನಿಯನ್ನು ಜೋಕೆ ಮಾಡಲಾಗಿ ಅವನು ಒಬ್ಬ ಪ್ರಸಿದ್ಧ ಪುರುಷನಾದನು. ಅವನಿಂದ ಅನೇಕ ಮಹತ್ವದ ಕೆಲಸಗಳಾದವು. (ಈ ಬಗ್ಗೆ ಅವನ ಚರಿತ್ರೆಯನ್ನು ನೋಡಿರಿ.) ಇದರಿಂದ ಸುಂದರನಾಚಿಯು ಶಿವಶರಣೆಯರಲ್ಲಿ ಪ್ರಸಿದ್ಧಳಾಗಿದ್ದಾಳೆ.

# ೪೧. ಸುಗ್ಗಲದೇವಿ (ಸುಗ್ಗಳೆ)

ಜಯಸಿಂಹ ರಾಜನು ಚಾಲುಕ್ಯ ವಂಶದಲ್ಲಿ ಅತ್ಯಂತ ಪ್ರಬಲ ಚಕ್ರವರ್ತಿಯಾಗಿದ್ದಾನೆ. ಈ ರಾಜನಿಗೆ ಸುಗ್ಗಲದೇವಿಯು ಪಟ್ಟದ ರಾಣಿಯಾಗಿದ್ದಳು. ಇವಳು ವೀರಶೈವ ಶಿವಶರಣೆಯರಲ್ಲಿ ಅತ್ಯಂತ ಪ್ರಸಿದ್ಧಳಾಗಿದ್ದಾಳೆ. ಇವಳು ದೇವರ ದಾಸಿಮಯ್ಯನಿಗೋಸ್ಕರ ಭಕ್ತಿಯನ್ನು ತಾಳಿ ಅವನು ಮಾಡುತ್ತಿದ್ದ ವೀರಶೈವ ಧರ್ಮ ಪ್ರಸಾರ ಕಾರ್ಯದಲ್ಲಿ ಅವನಿಗೆ ಬಹಳ ಸಹಾಯ ಮಾಡಿದ್ದಾಳೆ.

ಆಕೆಯ ಮಹತ್ವವು ಎಷ್ಟಿತ್ತೆಂಬುದು ಮೈಸೂರ ಪ್ರಾಂತ ಹಾಸನ ಜಿಲ್ಹಾ ಬೇಲೂರು ತಾಲೂಕಿನಲ್ಲಿರುವ ಹಳೆ ಬೀಡಿನಲ್ಲಿಯ ಒಂದು ಶಿಲಾ ಶಾಸನದಿಂದ ಗೊತ್ತಾಗುತ್ತದೆ (ಎಪಿಗ್ರಾಫಿಕಾ ಕರ್ನಾಟಿಕಾ-ಹಾಸನ ಜಿಲ್ಹಾ ಶಿಲಾ ಶಾಸನ, ನಂ॥ ೧೧೩ ನೋಡಿರಿ) ಇದರಲ್ಲಿ ಸುಗ್ಗಳೆಯ ಉಲ್ಲೇಖವಿದ್ದು ಅದರ ಸಂದರ್ಭವನ್ನು ವಾಚಕರು ಇಲ್ಲಿ ಅರಿಯುವದು ಬಹು ಅವಶ್ಯವಿದೆ.

ಈ ಶಾಸನದ ವರ್ಷವು ೧೨೨೦ ಇದ್ದು ಹೊಯಿಸಳ ದೇಶವನ್ನು ಆಳುತ್ತಿದ್ದ ವೀರ ಬಲ್ಲಾಳನು ಸಾಯಲು ಅವನ ದಂಡನಾಯಕನಾದ ಲಕ್ಷ್ಮನೂ ಅವನ ಸಾವಿರ ಜನ ಸೇವಕರೂ ಕೂಡಿಕೊಂಡು ಚಿತೆಯಲ್ಲಿ ಹಾರಿಕೊಂಡು ಪ್ರಾಣ ಕೊಟ್ಟರು! ಇದು ಆಗಿನ ಕರ್ನಾಟಕಸ್ಥರಲ್ಲಿದ್ದ ಅತುಲ ಸ್ವಾಮಿ ಭಕ್ತಿಯನ್ನು ತೋರಿಸುತ್ತದೆ. ಆ ಕಾಲದಲ್ಲಿ ಕುಮಾರ ಲಕ್ಷ್ಮನ ಹೆಂಡತಿಯಾದ ಸುಗ್ಗಲೆಯೂ ಕೂಡ ತನ್ನ ಪತಿಯೊಡನೆ ಚಿತೆಯನ್ನು ಪ್ರವೇಶಿಸಿದಳು. ಈ ಶಿಲಾಶಾಸನವನ್ನು ಬರಿಸಿದವನು ಈ ಸುಗ್ಗಲದೇವಿಯು ಜಯಸಿಂಹ ರಾಜನ ಹೆಂಡತಿಯಾದ ಸುಗ್ಗಲೆಗೆ ಸಮಾನಳೆಂದು ಬರಿಸಿದ್ದಾನೆ. ಈ ಶಾಸನದಲ್ಲಿ ಲಿಖಿಸಿರುವದು ಹೇಗೆಂದರೆ:—

ಜಯಸಿಂಹ ಕ್ಷಿತಿ ಪಾಲಕಂಗೆ ಜಗವೆಲ್ಲಂ ಬಣ್ಣಿಸಲ್ ಪೂಣ್ದು ಭಾ। ಷೆಯನೆ ಸುಗಲದೇವಿ ಕೊಟ್ಟ ತೆರದಿಂ ಬಲ್ಲಾಳ ಭೂ ಪೋತ್ತಮ ಪ್ರಿಯ ಪುತ್ರಂಗೆ ಕುಮಾರ ಲಕ್ಷ್ಮರಥಿ- ನೀ ? ನಾಥಂಗೆ ಕೊಟ್ಟಳ್ ಮನಃ ಪ್ರಿಯೆಯೀ ಸುಗ್ಗಲದೇವಿ ಭಾಷೆಯನಿಳಾ ಚಕ್ರಂ ಪೊಗಳ್ವನ್ನೆಗಂ ॥

ಇದರಲ್ಲಿ ಸುಗ್ಗಲದೇವಿಯು ಹಿಂದೆ ಜಯಸಿಂಹ ರಾಜನಿಗೆ ಭಾಷೆಯನ್ನು ಹೇಗೆ ಕೊಟ್ಟಳೋ ಹಾಗೆಯೇ ಈ ಸುಗ್ಗಲೆಯೂ ಭಾಷೆಯನ್ನು ಕೊಟ್ಟ

ಕೆಂದು ಹೇಳಿದೆ. ಈ ಭಾಷೆಯು ಯಾವುದೆಂಬುದು ಶಿಲಾಶಾಸನದಲ್ಲಿ ಸ್ಪಷ್ಟವಾಗಿರುವದಿಲ್ಲ. ಅದು ದೇವರ ದಾಸಿಮಯ್ಯನ ಕೂಡ ನಡೆದ ಕೆಲವೊಂದು ಘಟನೆಯೋ ಇರಬಹುದೆಂದು ನಮಗೆ ತೋರುತ್ತದೆ. ಅದು ಏನೇ ಇರಲಿ, ಜಯಸಿಂಹ ರಾಜನ ಹೆಂಡತಿಯಾದ ಸುಗ್ಗಲೆಯು ಗತಿಸಿದ ಬಳಿಕ ೧೦೦-೧೫೦ ವರ್ಷಗಳ ತರುವಾಯ ಸಹ ಮೈಸೂರು ಪ್ರಾಂತದ ಮಧ್ಯಭಾಗದಂಥ ದೂರ ಪ್ರದೇಶದಲ್ಲಿ ಅವಳ ಹೆಸರು ಹೀಗೆ ಉಳಿಯಬೇಕಾದರೆ ಅವಳು ಮೊದಲು ಅತ್ಯಂತ ಪ್ರಖ್ಯಾತ ಸ್ತ್ರೀಯಳಾಗಿರಬೇಕೆಂಬುದು ಸ್ಪಷ್ಟವಿದೆ. ಆದುದರಿಂದ ದಾಸಿಮಯ್ಯನ ಧರ್ಮ ಪ್ರಸಾರ ಕಾರ್ಯವು ಮುಂದೆ ಅವಳ ಸಹಾಯದಿಂದ ನಾಡಿನಲ್ಲಿ ಬಹಳ ಭರದಿಂದ ಸಾಗಿರಬೇಕೆಂದು ಊಹಿಸಲು ಯಾವ ಪ್ರತ್ಯವಾಯವೂ ಇರಲಾರದು.

———

## ೪೨. ಕಾಳವ್ವೆ

ಕಾಳವ್ವೆಯು ಉರಿಲಿಂಗ ಪೆದ್ದಿಯ ಹೆಂಡತಿಯು. ಉರಿಲಿಂಗ ಪೆದ್ದಿಯು ಮೊದಲು ಕಳವು ಮಾಡುತ್ತ ಜೀವಿಸುತ್ತಿದ್ದು ಮುಂದೆ ಉರಿಲಿಂಗ ದೇವನ ಮೇಲೆ ಭಕ್ತಿಯನ್ನು ತಾಳಿದವನಾಗಿ ಅವನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಮುಂದೆ ಅವನು ಮತ ಗ್ರಂಥಗಳನ್ನು ಆಳವಾಗಿ ಅಭ್ಯಾಸ ಮಾಡುವದಲ್ಲದೆ ಅವುಗಳ ತತ್ವದಂತೆ ಆಚರಿಸುವವನೂ ಆಗಿದ್ದನು. ಮುಂದೆ ಅವನು ಒಬ್ಬ ಶ್ರೇಷ್ಠ ಶಿವಾನುಭವಿ ಎಂದೆನಿಸಿಕೊಂಡನು. ಅವನು ನುಡಿದ ವಚನಗಳಲ್ಲಿ ಸಂಸ್ಕೃತ ಅವತರಣಗಳು ತುಂಬಿಕೊಂಡಿವೆ. ಅವುಗಳ ಮೇಲಿಂದ ಅವನು ಬಹುಶ್ರುತನಾಗಿದ್ದನೆಂದು ತಿಳಿದು ಬರುತ್ತದೆ. ಅವನು ತಾನು ವಿದ್ವಾಂಸನಾಗಿದ್ದನಲ್ಲದೆ ತನ್ನ ಹೆಂಡತಿಗೂ ಉಚ್ಚ ಶಿಕ್ಷಣವನ್ನು ಕೊಟ್ಟು ಅವಳನ್ನು ಶಿವಾನುಭವಿಯನ್ನಾಗಿ ಮಾಡಿದ್ದನು. ಬಸವೇಶ್ವರನ ಕಾಲದ ವಚನಕಾರರಲ್ಲಿ ಬಹು ಜನ ಸತಿಪತಿಗಳು ವಚನ ಗ್ರಂಥಗಳನ್ನು ರಚಿಸಿದ್ದು ಕಂಡು ಬರುತ್ತದೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ 'ಗಂಡ ಶಿವಲಿಂಗ ದೇವರ ಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ' ಎಂದು ಇಂಥವರನ್ನು ಅವಹೇಳನೆ ಮಾಡಿದ್ದಾನೆ. ದೇವರ ದಾಸಿಮಯ್ಯನು 'ಸತಿಪತಿಗಳೊಂದಾದ ಭಕ್ತಿ

ಹಿತವಾಗಿಪ್ಪುದು ಶಿವಂಗೆ ಎಂದು ಹೇಳಿದ್ದಾನೆ. ಇದರಿಂದ ಶಿವಶರಣರು ತಮ್ಮ ದಂಪತಿಗಳು ಉಚ್ಚ ಶಿವಾನುಭವಿಗಳಾಗಿರಬೇಕೆಂದು ಅವರು ಅಭಿಪ್ರಾಯ ಪಟ್ಟಿದ್ದು ಕಂಡು ಬರುತ್ತದೆ. ಒಂದು ಮನೆತನದಲ್ಲಿ ಇಂಥ ಹೆಚ್ಚಿನ ತರದ ವಿಚಾರ ಶೀಲ ಮತ್ತು ನಡೆಯುಳ್ಳ ಸ್ತ್ರೀಯರಿರಬೇಕೆಂದು ವಚನಕಾರರು ಅಭಿಪ್ರಾಯ ಪಟ್ಟಿದ್ದರ ಮೇಲಿಂದ ಅವರ ಗೃಹಕೃತ್ಯದ ಕಾರ್ಯಗಳು ಎಷ್ಟು ಉದಾತ್ತವಾಗಿರುತ್ತಿದ್ದವೆಂಬುದನ್ನು ನಾವು ಊಹಿಸ ಬಹುದಾಗಿದೆ. ಕಾಳವ್ವೆಯು ತನ್ನ ಒಂದು ವಚನದಲ್ಲಿ ಹೇಳುವದು ಏನಂದರೆ:-

'ತುಮರಿಯ ಕೊಳ್ಳಿಯಂತೆ ಉರಿವಾತ ಭಕ್ತನೇ? ಹುಸಿದು ತಂದು ಮಾಡುವಾತ ಭಕ್ತನೇ ? ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೇ ? ಸಾಕ್ಷಿ:— "ಶಿವಭಕ್ತಂ ಏನಂದ್ಯಾಶು ಕೋಟಿ ಜನ್ಮಸು ಸೂಕರಃ। ಸಪ್ತ ಜನ್ಮಭವೇತ್ ಕೊಷ್ಠಾ ದಾನೀಗರ್ಭೆ ತು ಜಾಯತೆ" ಇಂತೆಂದುದಾಗಿ ತನ್ನ ಪ್ರಾಣದ ಮೇಲೆ ಬಂದರೂ ಬರಲಿ. ಇವರ ಬಿಡಬೇಕು. ಇವರ ಬಿಡದಿರಲು ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ.

ಪರ್ವತ ಪ್ರದೇಶದಲ್ಲಿರುವವರು ಅಲ್ಲಿ ಬೆಳೆಯುವ ತುಮರಿಯ ಕಟ್ಟಿಗೆಯನ್ನು ರಾತ್ರೀ ಕಾಲದಲ್ಲಿ ಉರಿಸುತ್ತ ಪಿಲಾಲಿನಂತೆ ಉಪಯೋಗಿಸುತ್ತಾರೆ. ಅದಕ್ಕೆ ಎಣ್ಣೆಯ ಸಂಗ್ರಹವು ಬೇಡ. ಅದು ಉರಿಹಚ್ಚಿದ ಕೂಡಲೆ ಪ್ರಕಾಶಮಾನವಾಗಿ ಬೆಳಗುತ್ತ ಹೋಗುತ್ತದೆ. ಕೆಲವರು ಇದರಂತೆ ಯಾವಾಗಲೂ ಸಿಟ್ಟಿನಿಂದ ತುಂಬಿಕೊಂಡು ಉದ್ರೇಕವುಳ್ಳವರಾಗಿ ಇರುತ್ತಾರೆ. ಇಂಥವರಿಗೆ ತುಮರಿ ಕಟ್ಟಿಗೆಯ ಸಾಮ್ಯವನ್ನು ಈ ವಚನ ಕಾರ್ತಿಯು ಕೊಟ್ಟಿದ್ದು ಯೋಗ್ಯವಾಗಿದೆ. ಇಂಥವರನ್ನು ತನ್ನ ಪ್ರಾಣದ ಮೇಲೆ ಬಂದರೂ ಬರಲಿ, ಅವರನ್ನು ಬಿಟ್ಟು ಬಿಡಬೇಕೆಂದು ಕಾಳವ್ವೆಯು ಹೇಳುತ್ತಾಳೆ. ಹಾಗೆಯೇ ಯಾರೂ ಸುಳ್ಳು ಹೇಳಿ ಹೊಟ್ಟೆಹೊರೆದು ಕೊಳ್ಳಬಾರದು, ಭಕ್ತರ ಕುಲವನ್ನು ಜರಿಯಬಾರದು, ಎಂದು ಅವಳು ಹೇಳುತ್ತಾಳೆ. ಅದರಂತೆಯೇ ಎಂದೂ ತಾವು ನಿಶ್ಚಿತ ಮಾಡಿಕೊಂಡ ಕಾರ್ಯವನ್ನು ಬಿಡಕೂಡದು. ಹಾಗೆ ಮಾಡಿದಲ್ಲಿ ಅವರು ಪ್ರಾಣವಿಲ್ಲದ ದೇಹದಂತೆ ಎಂದು ಹೇಳುತ್ತಾಳೆ. ಜಂಗಮರು ಯಾವಾಗಲೂ ಉಚ್ಚ ವರ್ತನೆಯನ್ನು ಪಾಲಿಸತಕ್ಕದ್ದು. ಹಾಗಿಲ್ಲದವರು ತ್ಯಾಜ್ಯರೆಂದು ತಿಳಿಯಬೇಕೆಂದು ಹೇಳುತ್ತಾಳೆ.

ಆಕೆಯ ಆರು ವಚನಗಳು ನಮಗೆ ಉಪಲಬ್ಧವಿವೆ. ಅವುಗಳನ್ನು ನಿರೀಕ್ಷಿಸಿದಲ್ಲಿ ಕಾಳವ್ವೆಯು ಶ್ರೇಷ್ಠ ಸ್ತ್ರೀ ವಚನಕಾರರಲ್ಲಿ ಅಗ್ರಸ್ಥಾನಕ್ಕೆ ಯೋಗ್ಯಳೆಂದು ತಿಳಿಯಲು ಏನೂ ಪ್ರತ್ಯವಾಯವಿಲ್ಲ. ಅವಳು ತನ್ನ ಪತಿಯಾದ ಉರಿಲಿಂಗ ಪೆದ್ದಿಗೆ ಸಮಾನಳೆಂದು ನಾವು ಹೇಳಬಹುದು. ಆ ವಚನಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ಎತ್ತಿತೋರಿಸಿದ್ದೇವೆ.

'ವ್ರತ ವೆಂಬುದು ನಾಯಕರತ್ನ. ವ್ರತವೆಂಬುದು ಸುಪ್ಪಾಣಿಯ ಮುತ್ತು. ವ್ರತವೆಂಬುದು ಜೀವದ ಕಳೆ. ವ್ರತವೆಂಬುದು ಸುಯಿಧಾನ, ಸುಯಿಧಾನ. ವ್ರತ ತಪ್ಪಲು ಉರಿಲಿಂಗ ಪೆದ್ದಿಗಳರಸ ನೊಲ್ಲನವ್ವಾ'

(೨) ಅರ್ಥ ಪ್ರಾಣ ಅಭಿಮಾನದ ಮೇಲೆ ಬಂದರೂ ಬರಲಿ, ವ್ರತಹೀನನ ನೆರೆಯಲಾಗದು, ನೋಡಲು ನುಡಿಸಲಾಗದು, ಹರಹರ! ಪಾಪವಶದಿಂದ ನೋಡಿದರೆ ರುದ್ರಜಪ ಮಹೇಶ್ವರಾರಾಧನೆಯ ಮಾಳ್ಪುದು. ಇಂತಲ್ಲದವರ ಉರಿಲಿಂಗ ಪೆದ್ದಿಗಳರಸ ನಕ್ಕು ಕಳೆವನವ್ವಾ.

(೩) ನಿಂದಿಸಿಕೊಂಬ ಪ್ರಸಾದ ಕುನ್ನಿಯ ಮಾಂಸ. ಇವರು ತ್ರಿವಿಧಕ್ಕೆ ಇಚ್ಛೈಸಲು ಅಲ್ಲಿ ನಿಂದಿಸಿ ಅವರ ಬಿಟ್ಟಲ್ಲಿ ಆವರು ಹಿಂದೆ ಕೊಂಡುದು ಅವರ ಮಲ ಮೂತ್ರ. ಮುಂದೆ ಹುಳು ಗೊಂಡವಯ್ಯ ಉರಿಲಿಂಗ ಪೆದ್ದಿಗಳರಸ ನೊಲ್ಲನವ್ವಾ.

(೪) ಉಂಡ ಒಡೆಯರಲ್ಲಿ ಕೊಂಬ ಪ್ರಸಾದ ಕಾರಿದ ಕೂಳು. ಸಣ್ಣವರಲ್ಲಿ ಕೊಂಬ ಪ್ರಸಾದ ಸಂತೆಯ ಸೂಳೆಯ ಎಂಜಲು. ಅಳಿಯನಲ್ಲಿ ಕೊಂಡ ಪ್ರಸಾದ ಅಮೇಧ್ಯ. ಮಕ್ಕಳಲ್ಲಿ ಕೊಂಡ ಪ್ರಸಾದ ಗೋಮಾಂಸ. ತಮ್ಮನಲ್ಲಿ ಕೊಂಡ ಪ್ರಸಾದ ಸಿಂಗಿ ಕಾಳಕೂಟ. ನೆಂಟರಲ್ಲಿ ಕೊಂಡ ಪ್ರಸಾದ ನರಮಾಂಸ. ವಂದಿಸಿ ನಿಂದಿಸಿ ಕೊಂಬ ಪ್ರಸಾದವ ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ.

## ೪೩. ಮುಸಣಮ್ಮ.

ಮುಸಣಮ್ಮನು ಎಡೆ ಮಠದ ನಾಗಿದೇವನ ಹೆಂಡತಿಯು. ಇವಳು ಅತ್ಯಂತ ಜ್ಞಾನಿಯಾಗಿ ವಚನಕಾರಳೂ ಇದ್ದಾಳೆ. ನಿಜಗುಣೇಶ್ವರ 'ಲಿಂಗ' ಎಂಬುದು ಈಕೆಯ ಮುದ್ರಿಕೆಯಾಗಿದೆ. ನಾಗಿ ದೇವನು ಕಾಂಚೀ ಪಟ್ಟಣದಲ್ಲಿ ಇದ್ದಾಗ್ಗೆ ಬಿಜ್ಜಳನು ಚೋಳ ರಾಜನ ರಾಜಧಾನಿಯ ಮೇಲೆ ದಂಡೆತ್ತಿಹೋಗಿ ಯುದ್ಧ ಕಾರ್ಯದಲ್ಲಿ ತೊಡಗಿದವನಾಗಿದ್ದನು. ಅವನ ದಂಡಿನ ಕೂಡ ಬಸವೇಶ್ವರನೂ ಹೋಗಿದ್ದನು. ಕಾಂಚೀ ಪಟ್ಟಣದಲ್ಲಿ ಬಿಜ್ಜಳನ ದಂಡು ಬಿಡಾರ ಬಿಟ್ಟಾಗ್ಗೆ ಪಟ್ಟಣದ ಹೊರವಲಯದಿಂದ ಅರ್ಧ ಕೋಶ ದೂರ ಎಡೆ ಮಠದ ನಾಗಿ ದೇವನು ಏಕಾಂತದಲ್ಲಿ ವಾಸ ಮಾಡುತ್ತಿರುವದನ್ನು ಬಸವೇಶ್ವರನು ತಿಳಿದು ಅವನ ದರ್ಶನವನ್ನು ತೆಗೆದುಕೊಂಡು ಅವನಲ್ಲಿ ಏಳು ದಿನಗಳವರೆಗೆ ಭಕ್ತಿಯನ್ನು ಮಾಡಿದನು. ಮತ್ತು ತಿರುಗಿ ಬರುವಾಗ್ಗೆ ಅವನನ್ನೊಡಗೊಂಡು ಕರ್ನಾಟಕಕ್ಕೆ ಬಂದನು. ಅವನ ಕೂಡ ಅವನ ಹೆಂಡತಿ- ಮುಸಣಮ್ಮನೂ ಬಂದಿದ್ದಳು. ಅವಳನ್ನು ಕರೆದುಕೊಂಡು ಕೃಷ್ಣಾನದೀ ತೀರದಲ್ಲಿರುವ ಚಿಮ್ಮಲಿಗಿಯ ಸಮೀಪದಲ್ಲಿ ಅವಳ ವಾಸ ಸ್ಥಳವನ್ನು ಬಸವೇಶ್ವರನು ರಚಿಸಿದ್ದನು. ಇಲ್ಲಿಯೇ ಪ್ರಸಿದ್ಧ ಶಿವ ಶರಣನಾದ ನಿಜಗುಣೇಶ್ವರನೂ ಇರುತ್ತಿದ್ದನು. ಮುಸಣಮ್ಮನು ನಿಜಗುಣನನ್ನು ತನ್ನ ಗುರುವಾಗಿ ಮಾಡಿಕೊಂಡಿದ್ದಳು. ಆದ್ದರಿಂದ ಅವಳು ತನ್ನ ಮುದ್ರಿಕೆಯಲ್ಲಿ ನಿಜಗುಣೇಶ್ವರ ಎಂಬ ಹೆಸರನ್ನು ಇಟ್ಟು ತನ್ನ ವಚನಗಳನ್ನು ರಚಿಸಿದ್ದಾಳೆ. ನಾಗಿದೇವ, ಮುಸಣಮ್ಮ, ನಿಜಗುಣ, ನಿಜಗುಣನ ಶಿಷ್ಯ ಚಂದಿಮರಸು ಮತ್ತು ಭೋಗಣ್ಣ ಈ ಮಹಾನುಭಾವರೆಲ್ಲರೂ ಒಂದು ಕಾಲದಲ್ಲಿ ಚಿಮ್ಮಲಿಗೆಯ ಸಮೀಪದಲ್ಲಿ ಕೃಷ್ಣಾನದೀ ತೀರದಲ್ಲಿ ವಸಾಹತ್ತು ರಚಿಸಿ ಶಿವಾನುಭವದ ತತ್ವಗಳನ್ನು ವಚನಗಳ ಮೂಲಕ ಪ್ರಕಟ ಮಾಡುವವರಾಗಿದ್ದರು.

ಮುಸಣಮ್ಮನ ಒಂದೇ ಒಂದು ವಚನವು ನಮಗೆ ದೊರೆತಿದೆ. ಅದು ಯಾವದೆಂದರೆ:—

(೧) ಕಾಗೆಯ ನಾಯ ತಿಂದವರಿಲ್ಲ. ವ್ರತಭ್ರಷ್ಟನ ಕೂಡಿದವರಿಲ್ಲ. ನಾಯಿಂಗೆ ನಾರಂಗವಪ್ಪುದೇ ? ಲೋಕದ ನರಂಗೆ ವ್ರತವಪ್ಪುದೇ ಶಿವಬೀಜಕ್ಕಲ್ಲದೆ ನೀವೇ ಸಾಕ್ಷಿಯಾಗಿ ನಿಜಗುಣೇಶ್ವರಲಿಂಗದಲ್ಲಿ."

——....—

## ೪೪. ರಾಯಮ್ಮ

ರಾಯಮ್ಮನು ರಾಯಸದ ಮಂಚಣ್ಣನ ಪತ್ನಿಯು. ಈ ಉಭಯತರೂ ವಚನಕಾರರಿದ್ದಾರೆ. ರಾಯಮ್ಮನು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಶಿವಾನುಭವಗೋಷ್ಠಿಗಳನ್ನು ಆಲಿಸುತ್ತ ಶಿವಶರಣೆ ಎಂದು ಹೆಸರಾದಳು. ಆ ಕಾಲದಲ್ಲಿ ಅನೇಕ ಶಿವಶರಣರು ಒಟ್ಟಿಗೆ ಸೇರಿ ಆಗಿಂದಾಗ್ಗೆ ಧರ್ಮಚರ್ಚೆ ಮಾಡುವರು. ಆಗ ಒಬ್ಬಾನೊಬ್ಬ ಶರಣನು ಅಥವಾ ಶರಣೆಯು ಇನ್ನೊಬ್ಬ ಶಿವಶರಣನ ವಿಚಾರಗಳನ್ನು ಕೇಳಿ ಅವನಿಗೆ ಭಕ್ತಿಯನ್ನು ತಾಳಿ ಅವನ ಶಿಷ್ಯತ್ವವನ್ನು ವಹಿಸಿ ಅವನೇ ತನ್ನ ಗುರುವು ಎಂದು ಭಾವಿಸಿ ಅವನ ಹೆಸರನ್ನೇ ತನ್ನ ಮುದ್ರಿಕೆಯನ್ನಾಗಿ ಇಟ್ಟುಕೊಂಡು ವಚನಗಳನ್ನು ರಚಿಸಿದ್ದು ಕಂಡುಬರುತ್ತದೆ. ಎಡೆಮಠದ ನಾಗಿದೇವನ ಹೆಂಡತಿಯಾದ ಮಸಣಮ್ಮನು ನಿಜಗುಣನ ಹೆಸರಿನಿಂದ ಮತ್ತು ಕಾಳವ್ವೆಯು ತನ್ನ ಗಂಡನಾದ ಉರಿಲಿಂಗಪೆದ್ದಿಯ ಹೆಸರಿನಿಂದ ವಚನಗಳನ್ನು ರಚಿಸಿದ್ದಾರೆ. ಹಾಗೆಯೇ ರಾಯಮ್ಮನು ಅಮುಗಿದೇವನ ಹೆಸರಿನಿಂದ ವಚನಗಳನ್ನು ರಚಿಸಿದ್ದಾಳೆ. ಅವಳ ಮೂರು ವಚನಗಳು ನಮಗೆ ಉಪಲಬ್ಧವಾಗಿದ್ದು ಇವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

(೧) ವಿಶ್ವಮಯರೂಪಾಗಿ ಬಂದೆಯಯ್ಯಾ. ಭಕ್ತಿಗೆ ಎನ್ನ ಮನಕೆ ಸಲಿಸಂದ ನಿಲವು ಅಮುಗೇಶ್ವರಲಿಂಗಕ್ಕೆ ಮಾಟವಾಯಿತ್ತು.

ಟೀಪು:— ಶಿವಶರಣನಾದ ಅಮುಗಿದೇವಯ್ಯನಿಗೆ ಉದ್ದೇಶಿಸಿಯೇ ರಾಯಮ್ಮನು ನುಡಿದ ವಚನವು ಇದಾಗಿದೆ. ಭಕ್ತಿಗೆ ಎನ್ನ ಮನಕ್ಕೆ ಸಲೆಸಂದ ನಿಲವು ಮತ್ತು ಈ ನಿಲವು ಅಮುಗೇಶ್ವರಲಿಂಗಕ್ಕೆ ಮಾಟವಾಯಿತ್ತು ಎಂದು ಹೇಳಿಕೊಂಡದ್ದರಿಂದ ಅಮುಗಿದೇವನಿಂದ ಈಕೆಯು ದೀಕ್ಷೆಯನ್ನು ಹೊಂದಿರಬೇಕೆಂದು ಊಹಿಸಬಹುದಾಗಿದೆ. ದೀಕ್ಷೆ ಎಂದರೇನು, ದೀಕ್ಷಾಕಾಲದಲ್ಲಿ ಗುರು ಮತ್ತು ಶಿಷ್ಯ ಇವರಲ್ಲಿರತಕ್ಕ ನಿಕಟಸಂಬಂಧ, ಇವುಗಳನ್ನು ಅತ್ಯಂತ ಭಾವಗರ್ಭಿತವಾಗಿ ಈ ವಚನದಲ್ಲಿ ರಾಯಮ್ಮನು ವಿವರಿಸಿದ್ದಾಳೆ.

(೨) ಜ್ಞಾನವೆಂಬುದು ಬೀದಿಯ ಪಸಾರವೇ? ಬೊಕ್ಕಣ ತುಂಬುವ ಹುರುಳಿಯೇ? ಚೀಲದೊಳಗಣ ಜೀರಿಗೆಯೇ? ಗಾಣನೊಳಗಣ ಹಿಂಡಿಯೇ?

ಜ್ಞಾನವೆಂಬುದು. ಎಲ್ಲರೊಡನೆ ಬೀರದಿರಬೇಕು. ಗೆಲ್ಲ ಸೋಲಿನ ಮಾತ ಬಂದಡೆ ಗೆಲವ ನುಡಿಯದಿರಬೇಕು. ಹೀಗಿರಬಲ್ಲರೆ ಶರಣನೆಂಬೆನು ಅಮುಗೇಶ್ವರಲಿಂಗವೆಂಬೆನು.

ಭಾವ।— ಭಾವವು ಸ್ಪಷ್ಟವದೆ. ತಿಳಿದವನ ವರ್ತನೆಯು ಹೇಗಿರಬೇಕೆಂಬುದನ್ನು ಬಹು ಸ್ವಾರಸ್ಯವಾಗಿ ನುಡಿದಿದ್ದಾಳೆ.

(೩) ಅಂಗಕ್ಕಾಚಾರ, ಮನಕ್ಕೆ ಜ್ಞಾನ ಸಮರಸಾದ್ವೈತ ವಾದ ಮತ್ತೆ ಪುನರ್ದೀಕ್ಷೆ ಉಂಟೇ? ಗರುಡಿಯಲ್ಲಿ ಕೋಲಿಲ್ಲದೆ ಕಾಳಗದಲ್ಲಿ ಉಂಟೇ ಕೋಲು? ಭವಿಗೆ ಮೇಲು ವ್ರತ ಪುನರ್ದೀಕ್ಷೆಯಲ್ಲದೆ ಶರಣರಿಗುಂಟೇ? ವ್ರತತಪ್ಪಿ ಅನುಗ್ರಹವಿಡಿದ ನರಕಿಗಳಿಗೆ ಮುಕ್ತಿ ಇಲ್ಲ ಎಂದೆ ಅಮುಗೇಶ್ವರಲಿಂಗದಲ್ಲಿ.

ಟೀಪು।— ಇಲ್ಲಿ ರಾಯಮ್ಮನು ಲಿಂಗಧಾರಿಯಾದ ಬಳಿಕ ಪುನರ್ದೀಕ್ಷೆ ಇಲ್ಲವೆಂತಲೂ ಭವಿಗಳಿಗೆ ಮಾತ್ರ ಪುನರ್ದೀಕ್ಷೆಯುಂಟೆಂತಲೂ ಹೇಳಿದ್ದಾಳೆ. ದೀಕ್ಷೆ ಎಂದರೆ ಗರುಡಿಯಲ್ಲಿ ಕೋಲನ್ನು ಕೊಟ್ಟು ಅವನಿಗೆ ಯುದ್ಧಕಾಲದಲ್ಲಿ ಶಸ್ತ್ರವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ತಿಳಿಸಿಕೊಟ್ಟಂತೆ ಇರುತ್ತದೆ. ಆದ್ಧರಿಂದ ಸರಿಯಾದ ವೀರಶೈವತ್ವದ ವರ್ತನೆಯು ಇರುವವರೆಗೆ ಪುನಃ ದೀಕ್ಷೆ ಮಾಡುವದು ಅವಶ್ಯವಿಲ್ಲೆಂದು ರಾಯಮ್ಮನು ಇಲ್ಲಿ ಹೇಳಿದ್ದಾಳೆ. .

ರಾಯಮ್ಮನ ಮುದ್ರಿಕೆಯು ಅಮುಗೇಶ್ವರ ಎಂತಲೂ ಆಕೆಯ ಗಂಡನಾದ ರಾಯಸದ ಮಂಚಣ್ಣನ ಮುದ್ರಿಕೆಯು 'ಜಾಂಬೇಶ್ವರಾ' ಎಂತಲೂ ಇವೆ. ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರು ಸ್ವತಂತ್ರರಿದ್ದಾರೆ. ಆದ್ದರಿಂದ ಗಂಡನ ಇಷ್ಟದೇವತೆಯನ್ನೇ ಅವನ ಹೆಂಡತಿಯೂ ಸ್ವೀಕರಿಸಬೇಕೆಂದು ನಿಯಮವಿಲ್ಲ. ಅವರವರ ಭಕ್ತಿಯು ಮತ್ತು ವಿಶ್ವಾಸವು ಯಾರಲ್ಲಿರುತ್ತದೋ ಅವರನ್ನೇ ಅವರು ಮನ್ನಿಸಲು ಸ್ವತಂತ್ರರಿದ್ದಾರೆಂಬುದು ಈ ಮುದ್ರಿಕೆಗಳಿಂದ ತಿಳಿದುಬರುತ್ತದೆ.

————

# ೪೫. ಅಣ್ಣಲದೇವಿ.

ಅಣ್ಣಲದೇವಿಯು ಕದಿರೆ ಎಂಬ ಗ್ರಾಮದವಳು. ಈ ಗ್ರಾಮವು ಕಡಪಾ ಜಿಲ್ಲೆಯಲ್ಲಿ ಹಿಂದೂಪೂರ ತಾಲೂಕಿನಲ್ಲಿದೆ. ಈಗ ಇದು ಶುದ್ಧ ಆಂಧ್ರ ದೇಶವಾಗಿದೆ. ಮೊದಲಿನ ಕಾಲದಲ್ಲಿ ಇದು ಕರ್ನಾಟಕ ಮತ್ತು ಆಂಧ್ರ ಈ ದೇಶಗಳ ಮೇರೆಯಲ್ಲಿದ್ದು ಈ ಎರಡೂ ಭಾಷೆಗಳನ್ನು ಆಡುವವರೂ ಇಲ್ಲಿ ಅಸಂಖ್ಯ ಜನರಿದ್ದರು. ಇಲ್ಲಿಯ ಜನರು ಶಿವಾನುಭವದ ತತ್ವಗಳನ್ನು ಚೆನ್ನಾಗಿ ಬಲ್ಲವರೂ ಆಗಿದ್ದರು. ಪ್ರಸಿದ್ಧ ಆಂಧ್ರ ಕವಿಯಾದ ಪಾಲ್ಕುರಿಕೆ ಸೋಮನಾಥನ ಗ್ರಾಮವಾದರೂ ಇಲ್ಲಿಂದ ಬಹಳ ಸಮೀಪದಲ್ಲಿಯೇ ಇರುತ್ತದೆ.

ಅಣ್ಣಲದೇವಿಯು ಗಂಡನ ಹೆಸರು ಸೋಮನಾಥನು. ಅವನಿಗೆ ಮಲ್ಲಿನಾಥನೆಂಬ ಚಿಕ್ಕ ಮಗನು ಇದ್ದನು. ಈ ಮೂವರೂ ಪ್ರಸಿದ್ಧ ಶಿವಶರಣನಾದ ವೇಮಯ್ಯನ ಶಿಷ್ಯರು. ಇವರು ವೀರಶೈವ ಮತವನ್ನು ಪಾಲಿಸುವವರಾದ್ದರಿಂದ ಅವರು ಸತ್ತವರಿಗೋಸ್ಕರ ದುಃಖಿಸ ಕೂಡದೆಂಬ ವಿಚಾರವು ದೃಢಪಟ್ಟಿತ್ತು. ಶಿವಾನುಭವದ ತತ್ವವನ್ನು ಪಾಲಿಸುವವರು ಸತ್ತವರಿಗೋಸ್ಕರ ದುಃಖಮಾಡಬಾರದು. ಶಿವಶರಣರು ಸತ್ತರು ಎಂದೆನ್ನದೆ, ಅವರು ಶಿವಾಧೀನರಾದರು, ಲಿಂಗೈಕ್ಯರಾದರು, ಲಿಂಗದೊಳಗಾದರು, ಎಂದು ಅವರಲ್ಲಿ ಹೇಳುವ ಸಾಂಪ್ರದಾಯವಿದೆ. ಆದರೆ ಹೀಗೆ ಹೇಳುವ ರೂಢಿಯು ನಮ್ಮ ನಾಡಿನಲ್ಲಿ ಕೇವಲ ತೋರಿಕೆಗಾಗಿ ಮಾತ್ರ ಇದೆಯೇ ಹೊರ್ತು ನಿಜವಾಗಿ ಯಾರೂ ಹಾಗೆ ಆಚರಿಸುವದಿಲ್ಲ. ಆದರೆ ಬಸವೇಶ್ವರ ಕಾಲದಲ್ಲಿ ಈ ತತ್ವವನ್ನು ಅಕ್ಷರಶಃ ವೀರಶೈವರೆಲ್ಲರೂ ಪಾಲಿಸುತ್ತಿದ್ದರು. ಹೀಗೆ ಆಚರಿಸುವವರು ಕೆಲಮಟ್ಟಿಗೆ ಕ್ರಿಶ್ಚಿಯನ್, ಮತ್ತು ಇಸ್ಲಾಮಿ, ಧರ್ಮೀಯರಲ್ಲಿ ಇರುವದು ಬಹು ಮಟ್ಟಿಗೆ ಕಂಡು ಬರುತ್ತದೆ.

ಹೀಗಿರಲು ಅಣ್ಣಲದೇವಿಯು ಒಂದು ದಿವಸ ಬೆರಣಿಯನ್ನು (ಕುಳ್ಳು) ಆರಿಸುವದಕ್ಕೋಸ್ಕರ ಅರಣ್ಯಕ್ಕೆ ಹೋದಳು. ಆಗ ಆಕೆಯ ಗೂಡ ಆಕೆಯ ಚಿಕ್ಕ ಮಗುವಾದ ಮಲ್ಲಿನಾಥನೂ ಬಂದಿದ್ದನು. ಮಲ್ಲಿನಾಥನು ಕುಳ್ಳು ಆರಿಸುವಾಗ್ಗೆ ಅಲ್ಲಿ ಇದ್ದ ಒಂದು ಘಟಸರ್ಪವನ್ನು ನೋಡದೆ ಅದರ ಮೇಲೆ ಹೆಜ್ಜೆಯನ್ನು ಇಟ್ಟದ್ದರಿಂದ ಆ ಸರ್ಪವು ಅವನನ್ನು ಕಚ್ಚಿತು. ಇದರಿಂದ ಬಾಲಕನಿಗೆ ವಿಷವೇರಿ ಅಲ್ಲಿಯೇ ಗತಪ್ರಾಣನಾದನು. ಹೀಗಾದು

ದನ್ನು ತಾಯಿಯು ಕಣ್ಣಾರೆ ನೋಡಿದಳು. ಆದರೆ ಅವಳು ಶಿವಾನುಭವಿ
ಯಾದ್ದರಿಂದ ಸತ್ತ ಮಗನಿಗಾಗಿ ಅವಳು ಕಣ್ಣೀರಿಡಲಿಲ್ಲ ರೋದಿಸಲಿಲ್ಲ-
ಅವಳು ಆ ಚಿಕ್ಕ ಮಗನ ಶರೀರವನ್ನು ಹೊತ್ತುಕೊಂಡು ಕಟ್ಟಿಗೆಯ ಹೊರೆ
ಯನ್ನು ಎತ್ತಿ ಮನೆಗೆ ತಂದು ಹಾಕಿದಳು. ಮನೆಯಲ್ಲಿದ್ದ ಗಂಡನೂ ಕೂಡ
ಇದನ್ನು ನೋಡಿದರೂ ಶಾಂತಚಿತ್ತನಾಗಿ ಅವಳಂತೆಯೇ ಆಚರಿಸಿದನು.
ಮುಂದೆ ಸ್ವಲ್ಪ ಹೊತ್ತಿನಲ್ಲಿ ಅವರು ದೇವರ ಜಗಲಿಗೆ ಸಮೀಪವಾಗಿ ಒಂದು
ತಗ್ಗನ್ನು ಅಗಿದು ಮಗನ ಶವವನ್ನು ಅದರಲ್ಲಿ ಮಡುಗಿ ಅದರ ಮೇಲೆ ಬಿಲ್ವ ಪತ್ರಿ
ಗಳನ್ನು ಹರವಿ, ವಿಭೂತಿಯನ್ನು ಹೂಸಿ ಧೂಪವನ್ನು ಹೊತ್ತಿಸಿ, ಮಗನ
ಶವವನ್ನು ಸಮಾಧಿಗತ ಮಾಡಿದರು.

ಹೀಗಿರಲು ಮರುದಿನ ಅವರ ಗುರುವಾದ ರೆಮ್ಮಯ್ಯನು ಅವರ ಮನೆ
ಯಲ್ಲಿಯೇ ಬಂದು ಇಳಿದನು. ಅವನು ನಾಲ್ಕಾರು ದಿನಗಳ ಹಿಂದೆ ಅಲ್ಲಿ
ಇದ್ದಾಗ್ಗೆ ಮಲ್ಲಿನಾಥನು ಅವನ ಕಣ್ಣಿಗೆ ಬಿದ್ದಿದ್ದನು. ಆದರಿಂದ ದೆಮ್ಮಯ್ಯನು
ನಿಮ್ಮ ಮಗನೆಲ್ಲಿ ಎಂದು ಅವನು ತಾಯಿ ತಂದೆಗಳಿಗೆ ಕೇಳಲಾಗಿ ಅವರು
ನಮ್ಮ ಚಿಕ್ಕ ಮಗನು ಇಲ್ಲಿಲ್ಲ, ಅವನು ಶಿವನ ಸನ್ನಿಧಿಯಲ್ಲಿದ್ದಾನೆ, ಎಂದು
ನುಡಿಯಲು ಅವನಿಗೆ ತತ್‌ಕ್ಷಣ ಸಂಶಯ ಬಂದು ದೇವರ ಜಗಲಿಯ ಸಮೀ
ಪದಲ್ಲಿದ್ದ ಮಣ್ಣಿನ ಗುಂಪೆಯನ್ನು ಕಂಡು ಅಲ್ಲಿಯೇ ಅವನ ಸಮಾಧಿಯಾಗಿ
ರಬೇಕೆಂದು ತಿಳಿದು ಅದನ್ನು ಅಗಿಸಿ ನೋಡಲಾಗಿ ಬಾಲಕನನ್ನು ಹೂಳಿ
ಏಳೆಂಟು ದಿವಸಗಳಾದರೂ ಅವನ ಶರೀರವು ಇದ್ದಕ್ಕಿದ್ದಂತೆಯೇ ಇರುವ
ದನ್ನು ಕಂಡು ಬಾಲಕನು ಮೃತಪಟ್ಟಿಲ್ಲ, ಅವನ ಜೀವವು ಅವನ ಶರೀರ
ದಲ್ಲಿಯೇ ಈಗಲೂ ಇರಬಹುದೆಂದು ಭಾವಿಸಿ ಅವನಿಗೆ ಗುರುವು 'ಏಳೇಳು
ಕಂದಾ' ಎಂದು ಕರೆಯಲು ಅವನ ಜೀವವು ಹಿಂದಿರುಗಿ ಬರಲಾಗಿ ಅವನು
ಎದ್ದುನಿಂತನು. ಈ ಸಂಗತಿಯು ಗ್ರಾಮದಲ್ಲಿರುವ ಜನರಿಗೆ ತಿಳಿಯಲಾಗಿ
ಈ ಮೂವರು ನಿಜವಾದ ಶಿವಾನುಭವಿಗಳು, ಅವರ ಮಹಿಮೆ ಅಗಾಧ
ವಾದದ್ದು, ಅದರ ಮೂಲಕ ಬಾಲಕನ ಪ್ರಾಣವು ಹಿಂದಿರುಗಿರುತ್ತದೆ.
ಇದು ಶಿವಾನುಭವದ ಮಹಿಮೆ ಎಂದು ಭಾವಿಸುವವರಾದರು. ಈ ಮೂವರು
ಮಹಾನುಭಾವರು ಶಿವಶರಣರಲ್ಲಿ ಬಂದಿದ್ದು ಈ ಮೂವರನ್ನು ಶಿವಾನು
ಭವಿಗಳು ಈಗಲೂ ಸ್ಮರಿಸುತ್ತಾರೆ. ದೇವಿಯರ ತ್ರಿವಿದಿಯಲ್ಲಿ ಹೇಳಲ್ಪಡುವ
ದೇನಂದರೆ,

೧೯೩

ಚಿಣ್ಣ ನುರುಗನು ಕಡಿಯೆ । ಕಣ್ಣೀರ ತರದೆ ಮ॥

ಕೃಣ್ಣ ನಿರ್ಮಿತದಿ ಮಣ್ಣಿನೊಳು
ಮಡುಗಿದ ಅಣ್ಣಲಾದೇವಿ ಶರಣಾಗು ॥

ಈ ಪ್ರಕಾರ ಈ ತ್ರಿವಿಡಿಯಲ್ಲಿ ಅಣ್ಣಲಾದೇವಿಯ ಸ್ತುತಿಪರ ಪದ್ಯವು ಇರತ್ತದೆ.

---

ಸಂಚಿಕೆ ೨,೩,೪.　　　　　　　　　　ಸಂಪುಟ ೩೩

# ಶಿವಾನುಭವ

*

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.

●

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಫೆಬ್ರುವರಿ, ಮಾರ್ಚ, ಎಪ್ರೀಲ ೧೯೫೯.

# ವಿಷಯಾನುಕ್ರಮಣಿಕೆ




## ಶಿವಾನುಭವ ಮಾಸಪತ್ರಿಕೆಗೆ

### ಚಂದಾದಾರರಾಗಿರಿ.

—● ವಾರ್ಷಿಕ ಚಂದಾ ಕೇವಲ ೫ ರೂ. ೭೫ ನಯೆ ಪೈಸೆ ●—





# ನಿಜಗುಣ ಶಿವಯೋಗಿ.

(ಲೇಖಕರು:—ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು)

---

ಸುಜನವರನ ತಪದನಪದ ।
ಸುಜನ ವದನತುಳನಾದ ರಸಿಕನವಿಳಸ ।
ನಿಜಗುಣಯೋಗಿಯ ನಿರುಪಮ ।
ನಿಜಗುಣಯೋಗಿಯ ಪದಾಬ್ಜಕಾನತನಪ್ಪಂ ॥

—ಮಹಾಕವಿ ಷಡಕ್ಷರದೇವ.

ಕನ್ನಡಿಗರಿಗೆ ವೇದಾಂತದ ತಿಳಿವು ಚೆಲುವು ಕನ್ನಡದಲ್ಲಿ ಸಿಗುವುದು ದುರ್ಘಟವಾಗಿದ್ದಂತೆಯೇ ಕನ್ನಡತನದ ಸಂಪ್ರದಾಯದ ಸಂಗೀತ ಮಾರ್ಗವು ಸಹ ದೂರವಾಗಿತ್ತು. ಧರ್ಮಗ್ಲಾನಿಯು ಯಾವ ವೇಳೆಯಲ್ಲಿ ಆಗುವುದೋ

ಅಂತ್ಯೇ ವಿಭೂತಿ ಷಡಕ್ಷರ ಉಪಯುಕ್ತ ರೂಢಿ ಸಾಮಾನ್ಯವೇ ಸರಿಯು. ಈ ಕ್ರಿಯೆ ಪರಿಹಾರಕ ಪುರುಷರು ಕನ್ನಡಿಗರಿಗೆ ಲಭಿಸುವಂತಾಯಿತೋ ಏನೋ? ಸರಿ. ಸುಮಾರು ಕ್ರಿ. ಶ. ೧೫೦೦ ರ ಕಾಲ ಈ ಮಹಾಪುರುಷನೇ ನಿಜಗುಣಶಿವಯೋಗಿಯು. ಕರ್ನಾಟಕದ ವಿಶ್ವವಿದ್ಯಾನಿಲಯದ ರ್ಯಾಂಗ್ಲರ್ ಡಿ. ಸಿ. ಪಾವಟೆಯವರು ಇವರ ವಿಚಾರದಲ್ಲಿ ಇಂತು ನುಡಿದಿದ್ದಾರೆ.

"ಕನ್ನಡ ಸಾಹಿತ್ಯದಲ್ಲಿ ನಿಜಗುಣರದು ಸ್ವತಂತ್ರವಾದ ರೀತಿ ನಿಜವನರಿತ ನಿಜಗುಣರ ವ್ಯಕ್ತಿತ್ವ ಅವರ ಪ್ರತಿ ಪದ್ಯದಲ್ಲಿಯೂ ಒಡಮೂಡಿದೆ. ತಿಳಿಗನ್ನಡದಲ್ಲಿ ಸ್ಫೂರ್ತಿದಾಯಕವಾಗಿ ತತ್ವಬೋಧನೆಯನ್ನು ಮಾಡಿವೆ. ಆತ್ಮಾನಂದದಲ್ಲಿ ತನ್ಮಯಗೊಳಿಸುವ ಸಾಮರ್ಥ್ಯ ಅವರ ವಾಣಿಗಿದೆ. ತಮ್ಮ ಜ್ಞಾನ, ಯೋಗ, ಅನುಭವಗಳ ಸಾರವನ್ನೇ ಅವರು ತಮ್ಮ ಕೃತಿಗಳಲ್ಲಿ ಸವಿಯಾಗಿ ನೀಡಿದ್ದಾರೆ."

ನಿಜಗುಣನು ಅರಸುಮನೆತನದಲ್ಲಿ ಹುಟ್ಟಿ ಪ್ರಜಾಪರಿಪಾಲನೆ ಮಾಡಿ ಇಹಲೋಕದ ಸುಖಸಂತೃಪ್ತಿಯನ್ನು ಪಡೆಯುತ್ತಾನೆ. ಇಷ್ಟಾದರೂ ತೃಪ್ತಿಯು ಪರಿಪೂರ್ಣವಾಗದೆ ಯಾವುದೋ ಒಂದು ಸ್ಥಿರಸುಖಕ್ಕಾಗಿ ಮಮ್ಮಲ ಮರುಗುತ್ತಾನೆ.

ನರಜನ್ಮದಿಂದಿಹದೊಳು ಮಿಗಿಲುಂಟೆ ॥
ಪರಬೊಮ್ಮದರಿವಿಂದತಿ ಜಾಣ್ಮೆಯುಂಟೆ ।
ಕರುಣೆಯಿಂದತಿಶಯವಹ ಧರ್ಮವುಂಟೆ ।
ವಿರತಿಯಿಂದಿತರ ಸಂಪದವುಂಟೆ ।
ವರಭಕ್ತಿಯಿಂದ ಸಚ್ಚರಿತವೊಂದುಂಟೆ ।
ಗುರುಶಂಭುಲಿಂಗದಿಂ ಪರದೈವವುಂಟೆ ।

ನಿಮಿಷ ನಿಮಿಷಕ್ಕೆ ತನ್ನನ್ನು ಕಾಡಿ ಪೀಡಿಸುತ್ತಿದ್ದ ವಿಷಯವಾಸನೆಯಿಂದ ಬಿಡುಗಡೆಯಾಗಬೇಕೆಂಬುದೇ ಈತನ ಮಹಾದೀಕ್ಷೆ ಆಗಿತ್ತೋ ಏನೋ ? ಬಾರಿಬಾರಿ ಬಳಕೆಯಿಂದ ವಿಷಯವಾಸನೆಯು ಪ್ರಜ್ವಲಿಸುವುದು ರೂಢಿಯೇ ಸರಿಯು. ಅದನ್ನು ಅದುಮಿ ಅತುಳವಾಗಿ ಅಖಂಡವಾಗಿ ಬ್ರಹ್ಮಾನಂದವನ್ನು ಪಡೆಯಲು ಸತತ ಯತ್ನದ ಫಲವಾಗಿ ಸಂಕಲ್ಪವು ಸ್ಥಿರವಾಗಿ

ನಿಲ್ಲಬೇಕಾದರೆ ಹರನಾಮ ಸ್ಮರಣೆಯೇ ಮಹಾಮಾರ್ಗವೆಂದರಿತು" ಭವ ಮರಣ ಮಾಯಾ ಕರ್ಮಬಂಧ ಬಹುದುರಿತ ಸಂಸಾರ ಸಂಚಯವ ಳಿದು ಪರಭೋಗ ಮೋಕ್ಷ-ಅಭ್ಯರ್ಥಿಯಾಗಿ ಅರಸನು ಸಂಕಲ್ಪಿಸುತ್ತಾನೆ. ತನ್ನ ಬಾಳಿನ ಅರೆಕೊರೆಯನ್ನು ಅರಿತುಕೊಂಡು ದೊರೆಯಾದರೂ ದೊರೆ ತನದ ಗುರುತುಗಳನ್ನೆಲ್ಲ ತ್ಯಜಿಸಿ, ವಿರಾಗಿಯಾಗಿ ತನ್ನ ರಾಜ್ಯವನ್ನು ಬಿಟ್ಟು ಗುರುವನ್ನರಸುತ್ತ ದೊರೆಯು ಕೈಲಾಸ ಚತ್ರಿಯ ಮಹಾಸೇವಕನಾಗಿ ಕಾವೇರಿಯ ಸನಿಹದಲ್ಲಿರುವ ಶಂಭುಲಿಂಗನ ಬೆಟ್ಟಕ್ಕೆ ಬರುತ್ತಾನೆ. ಅಲ್ಲಿನ ನಿಸರ್ಗ ರಮಣೀಯತೆಯು ಈತನ ಹೃದಯವನ್ನು ಸೂರೆಗೊಳ್ಳುತ್ತದೆ. ಆತ್ಮಸೌಂದರ್ಯಮೂರ್ತಿಯಾಗಿ ಅಲ್ಲಿನ ಗವಿಯೊಂದನ್ನು ಪ್ರವೇಶಿಸಿ ಅಧ್ಯಾ ತ್ಮಿಕತೆಯ ಅಲರಪರಿಮಳವನ್ನು ಸಂತೋಷದಿಂದ ಪರಿಗ್ರಹಿಸುತ್ತಾನೆ. ಬಹು ಬಿಸಿಲ ಕಾಯ್ದು ಬರುವ ಮಳೆಯಂತೆ ದೊರೆತನವನ್ನು ತ್ಯಜಿಸಿ ಬಹು ಬಗೆಬಗೆಯಾಗಿ ಬವಣೆಗೊಂಡು ಬಿರಿದ ಅಧ್ಯಾತ್ಮ ಜ್ಞಾನಿಯಾದ ಪರಿಣಾಮವಾಗಿ ವೇದಾಂತಿ ಶ್ರೇಷ್ಠನಾಗುತ್ತಾನೆ. ಈ ಮಹಾಮಹಿಮನೇ ಇಂದು ನಿಜಗುಣಶಿವಯೋಗಿಯಾಗಿ ಬೆಳಗಿದ್ದಾನೆ. ಡಾ॥ ಫ. ಗು. ಹಳಕಟ್ಟಿ ಯವರು ಈತನನ್ನು ಈ ಬಗೆಯಾಗಿ ಪ್ರಶಂಸಿದ್ದಾರೆ.

"ನಿಜಗುಣಶಿವಯೋಗಿಯು ಹಿಂದೂಧರ್ಮದ ವಿಶ್ವಕೋಶಕಾರನಾಗಿ ದ್ದಾನೆ. ಕರ್ನಾಟಕದಲ್ಲಿ ಯಾವನಾದರೂ ಗ್ರಂಥಕಾರನು ಧಾರ್ಮಿಕ ತೇಜ ಸ್ಸನ್ನು ಸ್ಥಿರಗೊಳಿಸಲಿಕ್ಕೆ ಕಾರಣನಾಗಿದ್ದರೆ, ಅವನು ನಿಶ್ಚಯವಾಗಿ ನಿಜ ಗುಣಶಿವಯೋಗಿಯೇ ಇರುತ್ತಾನೆ. ಇವನು ರಚಿಸಿದ ಪದ್ಯಗಳು, ನಿರೂಪಿ ಸಿದ ವೇದಾಂತಗ್ರಂಥಗಳು ಎಲ್ಲ ಸಮಾಜದವರ ಕೈಯ್ಯಲ್ಲಿ ಓಡಾಡುತ್ತಿವೆ. ಸಂಸ್ಕೃತವನ್ನರಿಯದವರು ವೇದಾಂತ ತತ್ವಗಳನ್ನು ತಿಳಿಯಲಿಚ್ಛಿಸಿದರೆ ಅವರ ಆಕಾಂಕ್ಷೆಗಳು ಈತನ ಗ್ರಂಥಗಳಿಂದ ಪೂರ್ಣತೆಯನ್ನು ಹೊಂದುತ್ತವೆ. ಇವನ ಗ್ರಂಥಗಳು ಎಲ್ಲ ಧರ್ಮದವರ ಮಠಗಳಲ್ಲಿ ಪಠ್ಯಪುಸ್ತಕದಂತಿರು ವವು. ಇವನು ರಚಿಸಿದ ಭಕ್ತಿಯ, ನೀತಿಯ ಜ್ಞಾನದ ಪದಗಳು ಅಬಾಲ ವೃದ್ಧರಿಗೆ ಪ್ರಿಯಕರವಾಗಿರುತ್ತವೆ. ಇವನ ಹಾಡುಗಳು ಏಕಧಾರಿಯ ಅಯ್ಯನವರೂ, ದಾಸರೂ ಇವರ ಬಾಯಲ್ಲಿ ಸದಾ ಇರುತ್ತವೆ. ಈತನ ಕೃತಿಗಳು ಅನೇಕ ಜನರನ್ನು ಪ್ರೇರೇಪಿಸಿ ಧಾರ್ಮಿಕ ವ್ಯಾಸಂಗಕ್ಕೆ ತೊಡ ಗಿಸಿರುವವು. ಇವನ ಗ್ರಂಥಗಳು ಸಂಸ್ಕೃತದಲ್ಲಿ ಸಹ ಭಾಷಾಂತರಿಸಲ್ಪ

ಟ್ಟವೆ . ಇಂಥ ಲೋಕೋತ್ತರ ಪುರುಷನು ಕರ್ನಾಟಕದಲ್ಲಿ ಜನಿಸಿ ಧಾರ್ಮಿಕ ಸ್ಥಿತಿಗೆ ಪ್ರಾಚುರ್ಯವನ್ನು ತಂದುಕೊಟ್ಟನು.

ಶಿವಯೋಗವನ್ನಾಚರಿಸಿ, ಆ ಯೋಗಾನಂದದ ಓಘದಲ್ಲಿಯೇ ಹೊರ ಹೊಮ್ಮಿದ ಈತನ ಕೃತಿಗಳು ಈತನನ್ನು ಮಹಾಪುರುಷ, ಮಹಾ ಕವಿ, ತತ್ವಜ್ಞಾನಿ, ಹಿರಿಯಜ್ಞಾನಿ, ಘನಗುರು-ಆಗಿ ಮಾಡಿವೆ. ಈ ಕೃತಿಗಳು ಕನ್ನಡ ಸಾಹಿತ್ಯಾಕಾಶದ ಧೃವತಾರೆ; ಅಧ್ಯಾತ್ಮ ಚಕ್ರಾಧಿಪತ್ಯದಲ್ಲಿ ಪ್ರಜ್ವಲಿಸುವ ಮಾರ್ತಾಂಡ. ಇವರ ಮಹಾವ್ಯಕ್ತಿತ್ವ ಗೌರೀಶಂಕರದಂತೆ ಔನ್ನತ್ಯ ಪೂರಿತವಾಗಿವೆ. ಕೈವಲ್ಯಪದ್ಧತಿ, ವಿವೇಕ ಚಿಂತಾಮಣಿ ಅನುಭವಸಾರ, ಅನುಭವಬೋಧೆ, ಪರಮಾರ್ಥಗೀತೆ, ಪರಮಾರ್ಥ ಪ್ರಕಾಶಿಕೆ ಅಂವತ್ತು ಮೂವರ ತ್ರಿಪದಿ ಎಂಬ ಏಳು ಗ್ರಂಥಗಳು ಕನ್ನಡದಲ್ಲಿಯೂ, ಉಪಲಬ್ಧವಿಲ್ಲದ ದರ್ಶನ ಸಾರವು, ತರ್ಕಚಿಂತಾಮಣಿ ಎಂಬೆರಡು ಗ್ರಂಥಗಳು ಸಂಸ್ಕೃತದಲ್ಲಿಯೂ ಇವೆ. ಕನ್ನಡ ಕವಿ ಚರಿತೆಯಲ್ಲಿ ಈ ಮಹಾದಾರ್ಶನಿಕನ ವಿಷಯವಾಗಿ ಇಂತು ನಿರೂಪಿತವಾಗಿದೆ. " ......ಇವನು ವೀರಶೈವ ಕವಿ ಇವನಿಗೆ ನಿಜಗುಣಾರಾಧ್ಯ ಎಂಬ ಹೆಸರೂ ಉಂಟು. ಇವನ ಗ್ರಂಥಗಳಲ್ಲೆಲ್ಲ ಶಂಭುಲಿಂಗನ ಅಂಕಿತ ದೊರೆಯುತ್ತದೆ. ಈತನು ವಿವೇಕಚಿಂತಾಮಣಿಯಲ್ಲಿ ಉತ್ತರ ಮೀಮಾಂಸೆಯ ವಿಚಾರವನ್ನು ಹೇಳುವಾಗ ಸುಮಾರು ೧೨೫೦ ರಲ್ಲಿದ್ದ ಹೆಸರನ್ನು ಹೇಳುವದರಿಂದ ಕವಿ ಆ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗುತ್ತದೆ. ಇದರಿಂದ ಬಸವನ ಕಾಲ (ಸು. ೧೧೬೦) ದಲ್ಲಿದ್ದ ನಿಜಗುಣನೇ ಈತನೆಂಬುದು ನಿರಾಧಾರವಾದುದೆಂದು ತಿಳಿಯುತ್ತದೆ. ೧೬೫೫ ರಲ್ಲಿ ರಾಜಶೇಖರವಿಲಾಸವನ್ನು ಬರೆದ ಷಡಕ್ಷರದೇವನು ಈತನನ್ನು ಸ್ತುತಿಸಿರುವುದರಿಂದ ಇವನು ಆ ಕಾಲಕ್ಕೆ ಹಿಂದೆ ಇದ್ದಿರಬೇಕು. ಎಷ್ಟು ಹಿಂದೆ ಇದ್ದಿರಬಹುದೋ ತಿಳಿಯದು. ಇವನು ಚೆನ್ನಸದಾಶಿವ ಯೋಗಿಯ ಶಿವಯೋಗ ಪ್ರದೀಪಿಕೆಗೆ (ಸಂಸ್ಕೃತ) ಕನ್ನಡದಲ್ಲಿ ಪರಮಾರ್ಥ ಪ್ರಕಾಶಿಕೆ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ಚೆನ್ನಸದಾಶಿವಯೋಗಿಯ ಕಾಲವಾವುದೋ ತಿಳಿಯದು. ಇದು ತಿಳಿದಿದ್ದರೆ ಕವಿಯ ಕಾಲವನ್ನು ನಿರ್ಧರಿಸುವುದಕ್ಕೆ ಸ್ವಲ್ಪಮಟ್ಟಿಗೆ ಸಹಕಾರಿಯಾಗುತ್ತಿದ್ದಿತು. ಇವನ ಕಾಲವು ಸುಮಾರು ೧೫೦೦ ಆಗಿರಬಹುದೆಂದು ಊಹಿಸುತ್ತೇವೆ. ಇವನನ್ನು ಅನೇಕ ವೀರಶೈವ ಕವಿಗಳು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ."

ಕನ್ನಡ ಜನರಲ್ಲಿ ಹರಡಿರುವ ತತ್ವಜ್ಞಾನಕ್ಕೆ ಬಹಳ ಮಟ್ಟಿಗೆ ಈತನೇ ಮೂಲಕಾರಣನಾಗಿದ್ದಾನೆ. ಈತನಿಂದ ಈಚೆಗೆ ಕನ್ನಡದಲ್ಲಿ ವೇದಾಂತ ಗ್ರಂಥಗಳನ್ನು ಬರೆದ ಮಹಲಿಂಗರಂಗ, ಚಿದಾನಂದ ಶಾಲ್ಯದ ಕೃಷ್ಣರಾಜ, ಸರ್ಪಭೂಷಣಸ್ವಾಮಿ ಮುಂತಾದವರ ಕೃತಿಗಳ ಮೇಲೆ ಈತನ ಪ್ರಭಾವವು ಪ್ರಸಾರಿತವಾಗಿದೆ. ಈ ಋಷಿ ಕವಿಯ ಘನತೆಯು ಬ್ರಹ್ಮಾನಂದ ಬೋಧೆಯಲ್ಲಿ ಇಂತು ವರ್ಣಿತವಾಗಿದೆ.

ಮಾರರಿಪು ಸಮರಾದ ನಿಜಗುಣ ।
ಸೂರಿ ಮುಖ ಯೋಗೀಂದ್ರ ವಿರಚಿತ ।
ಸಾರತರ ಶಾಸ್ತ್ರಂಗಳಿರಲಿದು ವ್ಯರ್ಥವೆನಬೇಡಿ ।
ಧಾರಣಿಪ ದರ್ಶನಕ್ಕೆ ಮೊದಲಾ ।
ದ್ವಾರಪಾಲನ ಗುರುತವಶ್ಯವು ।
ಧಾರಿಣಿಯೊಳದರಂತೆ ಇದು ತತ್ವೃತಿಗೆ ಸಾಧನವು ॥

ವೀರಶೈವ ಧರ್ಮದ ಶಾಸ್ತ್ರಗ್ರಂಥವಾದ "ಸಿದ್ಧಾಂತ ಶಿಖಾಮಣಿ"ಯ ಶ್ಲೋಕಗಳನ್ನು 'ಶೃತಿ' ಎಂದು ಪರಿಗಣಿಸಿ ಪೂಜ್ಯಭಾವದಿಂದ ನಿದರ್ಶಿಸಿರುವದರಿಂದಲೂ, ನಿರಾಭಾರಿ ದೇಶಿಕೋತ್ತಮ ಮುಂತಾದ ವೀರಶೈವ ಪಾರಿಭಾಷಿಕ ಶಬ್ದಗಳು ಇವರ ಕೃತಿಗಳಲ್ಲಿ ಸಿಕ್ಕುವುದೇ ಮೊದಲಾದ ಹಲವು ಪ್ರಬಲವಾದ ಕಾರಣಗಳಿಂದಲೂ ಈ ಕವಿಯು ವೀರಶೈವ ಎಂಬುದು ನಿರ್ವಿವಾದವಾಗಿದೆ. ಪ್ರೊಫೆಸರ ಸ. ಸ. ಮಾಳವಾಡರು ಈ ವಿಚಾರದಲ್ಲಿ ಇಂತು ಸ್ಪಷ್ಟ ಪಡಿಸಿದ್ದಾರೆ.

"ಈ ಕವಿಯು ಒಂದು ದೃಷ್ಟಿಯಿಂದ ವೀರಶೈವ ಕವಿಗಳ ವೈವಿಧ್ಯದ ಪ್ರತೀಕದಂತಿದ್ದಾನೆಂದು ಹೇಳಬೇಕಾಗಿದೆ. ವಿವಿಧ ಜ್ಞಾನವನ್ನು ಕನ್ನಡಿಸಿದುದರ ಮೂಲಕವೂ ಕೂಡ ಈ ಕವಿ ವೀರಶೈವ ಕವಿಗಳ ಪ್ರತಿನಿಧಿಯಂತಿದ್ದಾನೆ."

'ಕೈವಲ್ಯ ಪದ್ಧತಿ' ಎಂಬ ಗ್ರಂಥದಲ್ಲಿ ವೀರಶೈವ ಧರ್ಮಾನುಸಾರವಾಗಿ ಈತನು ಶಿವಾಧಿಕ್ಯವನ್ನು ಹಲವು ಕಡೆ ಹೇಳಿದ್ದಾನೆ. "ಹರಿಯ ನಯನದ ಕುರುಹು ಹಿಡಿದಿಹುದೀಗ ಗುರು ಶಂಭುಲಿಂಗ ನಿನ್ನ ದಿವ್ಯಪಾದ ಮೃಗರೂಪದಳೆದಗಧರನರಸಲು ತನ್ನ ಬಗೆ ತೋರಿತಿಲ್ಲವಲ್ಲ ನಿನ್ನ ಪಾದ"

‘ಪರಮಾರ್ಥ ಪ್ರಕಾಶಿಕೆ’ ಗ್ರಂಥದಲ್ಲಿ “ವಿವೇಕಿಗಳಿಂ ಸಕಲ ತತ್ತ್ವ ತಾತ್ತ್ವಿಕ ವಿಲಕ್ಷಣತೆಯಿಂ ಕೈವಲ್ಯ ಸ್ವರೂಪವಾದ ಶಿವಯೋಗವೇ ಸ್ವೀಕೃತಮಕ್ಕುಂ” ಎಂದು ಹೇಳುವುದರ ಮೂಲಕ ಶಿವಯೋಗ ಪಕ್ಷಪಾತ ಪ್ರದರ್ಶನ ಮಾಡಿರುವುದು ಈತನು ವೀರಶೈವನೆಂಬುದನ್ನು ಸ್ಪಷ್ಟಪಡಿಸಿದೆ. ಷಟ್ಸ್ಥಲದ ಶ್ರೀಸ್ತುತಿ, ಪುರಾತನರ ಹಿರಿಮೆ ಇವುಗಳನ್ನು ಈತನು ನಿರೂಪಿಸಿರುವುದು ಈತನು ವೀರಶೈವನೆಂಬುದನ್ನು ಎತ್ತಿ ತೋರಿಸುತ್ತದೆ. ಕವಿ ಬೇಂದ್ರೆಯವರು ನಿಜಗುಣನ ಮತದ ವಿಚಾರದಲ್ಲಿ ಇಂತು ಹೇಳಿದ್ದಾರೆ.

“ಅದ್ವೈತ ವೇದಾಂತವು ಮೂಲತಃ ಶೈವವಾಗಿದ್ದರೂ ಷಣ್ಮತಗಳ ಸಮನ್ವಯದಿಂದುಂಟಾಗಿದೆ. ಶುದ್ಧಶೈವವು ಹಾಗಲ್ಲ. ಆದರೂ ನಿಜಗುಣರು ಉದಾರರಾದ ತತ್ತ್ವಜ್ಞರಾದ ವಿವೇಕಿಗಳಾದ ಶೈವರೆಂಬುದು ಅವರ ಪ್ರತಿಯೊಂದು ಗ್ರಂಥದಲ್ಲಿಯೂ ಕಂಡುಬರುವುದು.” ಆಗಮ ಸಮ್ಮತವಾದ ಷಟ್ಸ್ಥಲಸಿದ್ಧಾಂತವನ್ನು ತಮಗೆ ತೋರಿದ ಅದ್ವೈತಕ್ಕೆ ಕವಿಯು ಹೊಂದಿಸಿಕೊಂಡಿದ್ದಾನೆ. ಆದಕಾರಣವೇ ವೀರಶೈವೇತರರಿಗೆ ಷಟ್ಸ್ಥಲಸಿದ್ಧಾಂತದ ಸಾಂಪ್ರದಾಯಿಕ ನಿರೂಪಣೆಗಿಂತ ಅದ್ವೈತಸಿದ್ಧಾಂತದ ವಿಶಾಲ ಭೂಮಿಕೆಯು ರೂಢಿಯಂತೆ ಕಾಣಲ್ಪಟ್ಟಿದೆ. ಕವಿಯು ಜಾತಿಯಿಂದ ವೀರಶೈವನಾದರೂ ಉಪದೇಶಕರ ಪಂಕ್ತಿಯಲ್ಲಿ ವಿಶ್ವವಿಭೂತಿಯು. ಯಾಜ್ಞವಲ್ಕ್ಯಮೈತ್ರೇಯಿಯರ ಸಂಭಾಷಣೆಯನ್ನು ನೆನಪಿಗೆ ತರುವಂತಿರುವ ಪರಮಾನುಭವ ಬೋಧೆಯೇ ಇದಕ್ಕೆ ಸಾಕ್ಷಿಯಾಗಿದೆ. ಕವಿಯ ಹೃದಯವು ಯಾವುದೇ ಸಂಪ್ರದಾಯದ ಬಂಧನದಿಂದ ಬಂಧಿತವಾಗದೆ ಇರುವ ಹೃದಯ ವಿಶಾಲತೆಯು” ಅವರಿವರೆನ್ನದೆ ನಿಜಪರಿದವರಂಘ್ರಿಗವನತನಾಗಿ ಸಂತಸದಿಂದ ತವೆ ರಮ್ಯವಾದುಪೆಂಪೆನೆ ಪೇಳ್ವೆ.” ಎಂಬ ಮಾತುಗಳೇ ಎತ್ತಿ ಸಾರುತ್ತಿವೆ.

ಸ್ವಾದಿದೇಶದಲ್ಲಿ ಬೂದಿಕೇರಿ ಪಟ್ಟಣದಲ್ಲಿದ್ದ ಭುಜಲಿಂಗಸ್ವಾಮಿ ಎಂಬುವರಿಂದ ಇವರಿಗೆ ಅನುಗ್ರಹವಾಯಿತೆಂಬ ಪ್ರತೀತಿಯು ಸಂಸ್ಕೃತ ಶಿವಯೋಗ ಪ್ರದೀಪಿಕಾಕರ್ತರಾದ ಶ್ರೀ ಚೆನ್ನಸದಾಶಿವಯೋಗಿಯೇ ಈತನ ಗುರುವೆಂದು ಕೆಲವರು ಹೇಳುತ್ತಾರೆ. ಆದರೆ ಪರಮಾರ್ಥ ಪ್ರಕಾಶಿಕೆಯ ಪೀಠಿಕೆಯಲ್ಲಿ “ಚೆನ್ನ ಸದಾಶಿವಯೋಗೀಶ್ವರನೆನಿಪುವಾಚಾರ್ಯನು ಮುಮುಕ್ಷುಗಳ ಹೃದಯಗುಹಾಂತರಾಳಮಂ ಬೆಳಗಲೆಂದು ಶಿವಯೋಗ ಪ್ರದೀಪಿಕೆಯೆಂಬ ಯೋಗಶಾಸ್ತ್ರಮಂ ಮಾಡಲುದ್ಯೋಗಿಸಿ” ಎಂದು ಹೇಳಿಕೆಯಿರು

ವುದು ಇದನ್ನು ಸಮರ್ಥಿಸಲಾರದು. ಅಂತು ಕವಿಯ ಗುರುವು ಮಹಾ ಪಂಡಿತನೂ, ಹಿರಿಯ ತಪಸ್ವಿಯೂ ಆಗಿರಬೇಕು. ಈತನ ಕೃತಿಗಳಲ್ಲಿ ಗುರುಮಹಿಮೆಯ ವಿಚಾರವು ಬಾರಿಬಾರಿಗೂ ಬರುತ್ತದೆ. ಶ್ರೀ ಗುರುವಚನೋಪದೇಶ ಪಡೆವೆನೆಂಬಳಿಯಾಸೆದೋರದೆನ್ನೊಳು ಗುರುವಿನೊಲುಮೆ ದೊರೆಕೊಳ್ಳಲು, ಶ್ರೀ ಗುರುವೆ ನೀನೆ ಶರಣಾಗೆನಗೆ ನಿಜಸುಖದ ಸಾಗರವೆ ಸಕಲ ವಿದ್ಯಾಗುಣ ನಿವಾಸಾ. ಗುರುವೆ ನಿಮ್ಮಯ ಕರುಣದೊಳೆನ್ನ ತತ್ತ್ವದಿರವನರಿದು ನಿತ್ಯ ಸುಖಿಯಾದೆ. ನಿಜಗುರುವನ್ನಾಗಿ ಪರಮೇಶ್ವರನನ್ನೇ ಅಭಿಮುಖಿಕರಣವನ್ನಾಗಿ ಮಾಡಿಕೊಂಡಿರುವಂತೆ ವಿವೇಕಚಿಂತಾಮಣಿಯಿಂದ ವ್ಯಕ್ತವಾಗುತ್ತದೆ. ಆದರ್ಶ ಗುರುವಿನ ಲಕ್ಷಣಗಳನ್ನೆಲ್ಲವನ್ನೂ ಈತನು ಉದಹರಿಸಿದ್ದಾನೆ.

"ಕೈವಲ್ಯ ಪದ್ಧತಿ"ಯು ಬಗೆ ಬಗೆಯ ರಾಗಗಳಿಂದ ಹೊರ ಹೊಮ್ಮಿದ ಹಾಡುಗಳ ಸಮುಚ್ಚಯ. ಪ್ರತಿಯೊಂದು ಹಾಡಿನ ಅಂತ್ಯದಲ್ಲಿಯೂ ಕವಿಯ ಇಷ್ಟ ದೈವವಾದ ಶಂಭುಲಿಂಗನ ಅಂಕಿತವಿದೆ. ಗಹನವಾದ ತತ್ತ್ವ ಭೋದೆಯನ್ನು ಮಧುರವಾದ ಸಂಗೀತ ಸುಧೆಯ ಸಂಗಡ ಬೆರೆಸಿ ಅದರ ಇನಿದಾದ ಫಲಗಳನ್ನು ಸಾಹಿತ್ಯ ರಸದಲ್ಲಿ ಅದ್ದಿ, ಮುಮುಕ್ಷುಗಳಿಗೆ ತಿನ್ನಲು ತಿಂಡಿಯನ್ನು ನೀಡಿದ್ದಾರೆ. ಮುಮುಕ್ಷುಗಳಿಗೆ ಇದೊಂದು ಕೈಪಿಡಿ. ತಾತ್ತ್ವಿಕ ಬೋಧನೆಯಲ್ಲಿ ಈ ಸಂಗೀತ ಮಾರ್ಗವು ಮುಂದಿನವರಿಗೆ ಅನುಸರಿಸುವಂತಿದೆ. " ಕೋಗಿಲೆ ಚಲ್ವ ಕೋಗಿಲೆ ಮುದ್ದು ಕೋಗಿಲೆ " ಎಂಬ ಹಾಡಿನಲ್ಲಿ ಭಾವಗೀತೆಯು ಕಾವು ಏರಿ, ಗುರುಭಕ್ತಿಯ ಪ್ರವಾಹವು ಪ್ರವಹಿಸಿದೆ. ಶಿವ ಕಾರುಣ್ಯ ಜೀವ ಸಂಬೋಧನ, ನೀತಿ ಕ್ರಿಯಾರ್ಜನ, ಯೋಗ ಪ್ರತಿ ಪಾದನ ಮತ್ತು ಜ್ಞಾನ ಪ್ರತಿ ಪಾದನ, ಎಂಬ ಪಂಚ ಸ್ಥಲಗಳು ಈ ಗ್ರಂಥದಲ್ಲಿ ಇವೆ. ವಚನಗಳ ಜೋಡು ೧೭೪, ಪದಗಳು ೬೪, ರಾಗಗಳು ೨೪. ದುರಿತ ಕರ್ಮವನೊಲ್ಲದಿರು ಎಂಬುದರಲ್ಲಿ ಅತ್ಯುನ್ನತ ಬೋಧೆಯಿದೆ. ಪ್ರಾಯ, ಮುಪ್ಪು, ಸುಖ, ವಿದ್ಯೆ, ದಾರಿದ್ರ್ಯ, ಸಿರಿ ಜಿಪುಣತನ, ಸಂತೋಷ ಧನದಳಿಯಾಸೆ, ನೀರೆಯರ ವಿಲಾಸ, ಅಹಂಕಾರಾದಿಗಳ ಪರಸ್ಪರ ವೈರೋಧ್ಯವನ್ನು ಬಣ್ಣಿಸುವದರಲ್ಲಿ ಕವಿಯ ವೀಕ್ಷಣ ಚತುರತೆಯೂ, ವ್ಯವಹಾರಜ್ಞಾನ ವಿಶಾಲತೆಯೂ, ಕಾಣಬರುತ್ತದೆ. ಜೀವ ಸಂಬೋಧನ ಸ್ಥಳದಲ್ಲಿ ನಿದ್ರೆಯ ವಿವರಣೆಯು ಇಂದಿನ ಮನ ಶಾಸ್ತ್ರಜ್ಞರು ಸಮ್ಮತಿಸುವಂತಿದೆ. ಮಾಯೆಯ

ಕೈವಾಡವನ್ನು ಹೃದಯಂಗಮವಾಗಿ ಬಣ್ಣಿಸಿದ್ದಾರೆ.

ಬೇಡ ಬೇಡ ಭೋಗದೊಡನಾಟ
ನೋಡು ನಂಜುವೆರಸಿದ ಸವಿಯೂಟ
ಕೇಡು ಕಡೆಯೊಳಿಹುದು ಮಾಯೆಯ ಕೈವಾಡ

ಜ್ಞಾನವೊಂದಿದ್ದರೆ ಸಾಲದು, ಸದಾಚಾರ ನಿಷ್ಠೆಯು ನಮಗೆ ಅವಶ್ಯಕ ಎಂಬುದನ್ನು ರಮ್ಯವಾಗಿ ಬೋಧಿಸುತ್ತಾರೆ. ಯೋಗಿಯ ಅವಸ್ಥೆಗಳನ್ನು ಕ್ಲಿಷ್ಟವಿಲ್ಲದೆ ಹೇಳಿದ್ದಾರೆ. ಗಂಭೀರವಾಗಿ ತುಂಬಿ ಪ್ರವಹಿಸುವ ಗಂಗಾ ಜಲದಂತೆ ಇವರ ಜೀವನವು ಪರಿಪೂರ್ಣತೆಯನ್ನು ಪಡೆದಿದೆ. ಎನ್ನೊಡನೆ ಸಮರಸವನ್ನು ಬೇಡಿಲೆ ತನುವೆ ನೀನನ್ಯವೆನಗೆ ಎಂದು ತಮ್ಮ ದೇಹವನ್ನೇ ಬೇರೆ ಸಲ್ಲಿಸುವ ಶಕ್ತಿಯನ್ನು ಹೊಂದಿದ್ದಾರೆ.

"ವಿವೇಕ ಚಿಂತಾಮಣಿ"ಯು ಮನುಷ್ಯನ ವಿವೇಕಕ್ಕೆ ಚಿಂತಾಮಣಿಯಂತಿದ್ದು ತನ್ನ ಹೆಸರನ್ನು ಸಾರ್ಥಕ ಪಡಿಸಿ ಕೊಂಡಿದೆ. ಇದು ಕನ್ನಡದ ವಿಶ್ವ ಕೋಶವು ಕವಿಯ ಕೃತಿಗಳಲ್ಲಿ ಇದೇ ದೊಡ್ಡದಾದದ್ದು. ಹತ್ತು ಪ್ರಕರಣಗಳಲ್ಲಿ ೭೬೫ ವಿಷಯಗಳನ್ನು ಅಳವಡಿಸಿಕೊಂಡಿರುವ ಈ ಕೃತಿಯಲ್ಲಿ ಆಗಿನ ಸಕಲ ತಾತ್ವಿಕ ಭೌಗೋಲಿಕ ಸಾಹಿತ್ಯಕ ವಿಚಾರಗಳ ಜ್ಞಾನವು ಸಂಕ್ಷೇಪವಾಗಿ ಕನೆಗಟ್ಟಿಕೊಂಡಿದೆ. ವಿದ್ಯಾರಣ್ಯರ 'ಸರ್ವದರ್ಶನ ಸಂಗ್ರಹ' ದಂತೆ ತತ್ವಗ್ರಂಥವಲ್ಲ. ಮತಾತೀತವಾದ ಸರ್ವ ಜ್ಞಾನಕೋಶವೆಂಬ ಸ್ವರೂಪದಲ್ಲಿ ಇದು ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯವಾದ ಗದ್ಯ ಗ್ರಂಥವಾಗಿದೆ. ಕವಿಯ ಶೈಲಿಯು ಇಲ್ಲಿ ಅತ್ಯುನ್ನತ ಮಟ್ಟಕ್ಕೇರಿದೆ. ವಿಚಾರದಿಂದ ಆಸ್ತಿಕ್ಯವೂ ಮೌಢ್ಯದಿಂದ ನಾಸ್ತಿಕ್ಯವೂ ಉಂಟಾಗುತ್ತದೆ ಎಂಬುದೇ ಕವಿಯ ಸ್ಥಿರನಂಬಿಕೆಯು. ಶಿವಜ್ಞಾನಸಾರ, ಶಿವಯೋಗಲಕ್ಷಣ, ಶಿವಭಕ್ತಿ ಪ್ರಾಶಸ್ತ್ಯ, ವೀರಶೈವ ಭೇದ, ವೀರಶೈವ ಲಕ್ಷಣ, ಸಾಮಾನ್ಯ ಶೈವ ಲಕ್ಷಣಾದಿ ವಿಚಾರಗಳು ವಿಶಿಷ್ಟ ಸ್ಥಾನವನ್ನು ಇದರಲ್ಲಿ ಹೊಂದಿರುತ್ತವೆ. ಈಶ್ವರನ ಗುಣಾವಳಿ, ಮೋಕ್ಷ ಪ್ರತಿಪಾದನೆ, ವಿರತಿ, ಧ್ಯಾನ, ನಾಕ, ನರಕ, ಪಾಪ, ಪುಣ್ಯ, ನರಕ ನಿವೃತ್ತಿ ಮಾರ್ಗಾದಿ ವಿಚಾರಗಳು ಸಾಮಾನ್ಯ ಧಾರ್ಮಿಕ ವಿಚಾರಗಳಿಗೆ ಅನಯಿಸುವದಾಗಿದೆ. ನೈತಿಕ ಹಾಗೂ ಸದಾಚಾರ ದೃಷ್ಟಿಯಿಂದಲೂ, ಸಾಮಾನ್ಯ ವಿಜ್ಞಾನ ದೃಷ್ಟಿಯಿಂದಲೂ ಇದರ ಬೆಲೆಯು ವಿಶೇಷವಾಗಿದೆ. ಪ್ರೊಫೆಸರ್ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಈ ಕೃತಿಯ ವಿಚಾರವಾಗಿ

ಇಂತು ಅಭಿಪ್ರಾಯ ಪಟ್ಟಿದ್ದಾರೆ. ಇವರ ಅಭ್ಯಾಸ ಅವಲೋಕನ ಸಂಗ್ರಹ ಚಾತುರ್ಯ ಮೊದಲಾದವುಗಳ ಅನುಭವವೂ ಇದರಲ್ಲಿ ಬರುವದು. ತತ್ವ ಜ್ಞಾನಿಯ ನಿಃಪಕ್ಷಪಾತವೃತ್ತಿಯೂ ಮಧ್ಯ ಮಾರ್ಗದೊಡನೆ ಹೊಂದಿಸಿ ಕೊಂಡು ಹೋಗುವ ಜಾಣ್ಮೆಯೂ ಇಲ್ಲಿ ಕಂಡುಬರುವದು. ತತ್ವ ಪ್ರತಿ ಪಾದಕರಲ್ಲಿ ನಿಜಗುಣಿಗಳ ಸ್ಥಾನವು ಮಹತ್ವದ್ದಾಗಿದೆ.

ಗುರು ಶಿಷ್ಯರ ಸಂವಾದ ರೂಪದ ಗ್ರಂಥವು "ಅನುಭವಸಾರ" ಹೆಸರೇ ಹೇಳುವಂತೆ ಇಲ್ಲಿ ಅನುಭವಸಾರವೇ ಭಟ್ಟಿ ಇಳಿದಿದೆ. ಇದು ೫೩೫ ತ್ರಿಪದಿ ಗಳನ್ನೊಳಗೊಂಡು ಎಂಟು ಸಂಧಿಗಳಾಗಿ ವಿಭಾಗಿಸಲ್ಪಟ್ಟಿದೆ. ಇವರ ಜೀವ ನದ ಪರಿಪಕ್ವಾವಸ್ಥೆಯಲ್ಲಿ ರಚಿತವಾಗಿ ಪದ ಬಂಧವು ಶೈಥಿಲ್ಯವಿಲ್ಲದ ಶೈಲಿ ಗಂಭೀರವಾಗಿ ಓಡುತ್ತದೆ. ಸಾಧಕರಿಗೆ ಸಕಲ ವೇದಾಂತ ಸಾರವು ಗೊತ್ತಾಗುವಂತೆ ಗಹನವಾದ ವೇದಾಂತ ತತ್ವಗಳನ್ನು ಸರಳ ಸುಂದರವಾಗಿ ಕವಿಯು ಬಣ್ಣಿಸಿದ್ದಾನೆ. ಡಾ॥ ರಂಗನಾಥ ಶ್ರೀನಿವಾಸ ಮುಗಳಿಯವರು ಈ ಕೃತಿಯ ವಿಚಾರವಾಗಿ ಇಂತು ನುಡಿದಿದ್ದಾರೆ. "ಇದರಲ್ಲಿ ಪ್ರತಿಜ್ಞೆ ಮಾಡಿದಂತೆ ತಿಳಿಯಾಗಿ ಉಚಿತ ದೃಷ್ಟಾಂತಗಳಿಂದ ಆತ್ಮಸ್ವರೂಪವನ್ನೂ, ಅದ್ವೈತ ಸಿದ್ಧಿಯನ್ನೂ ವಿವರಿಸಲಾಗಿದೆ." ಈ ಕವಿಯು 'ವೇದಾಂತದೊಳು ಗೋಪ್ಯವಾದರ್ಥಮಂ' ಶಾಸ್ತ್ರೋಕ್ತವಾಗಿ ಪ್ರತಿಪಾದಿಸಬೇಕಾಗಿದೆ. ಆದ ಕಾರಣವೇ ಇಲ್ಲಿ 'ಸಂಧಿ ಸಮಾಸ ಮೊದಲಾದವೆಲ್ಲಂ ನೋಡದಿರಿ.' ಆದರೆ 'ಮುನ್ನಿನಾ ತ್ರಿವಿಧಿ ಸೊಗಸಂ ನೀಡುತಿರೆ' ಇದೇಕೆ ಎಂದು ನೂಕಬೇಡಿ. ಏತಕ್ಕೆಂದರೆ 'ಸಂಜೆಯೊಳು ಶಶಿಯು ಬೆಳುಜೊನ್ನವಿರೆ ಸೊಡರಿಗೆಳೆಸರೆ?' ಹಾಗೆ ಹೊರಗೆ ಬೇಕಾದಷ್ಟು ಬೆಳದಿಂಗಳಂತಹ ತ್ರಿವಿಧಿ ಗ್ರಂಥಗಳಿದ್ದರೂ ನಿಮ್ಮ ಹೃದಯ ಗಹ್ವರದ ಅಂಧಕಾರವನ್ನು ಪರಿಹರಿಸಲು ಬೇಕಾದ ಜ್ಯೋತಿ ಯಿದು ಎಂದು ಗ್ರಂಥದ ಶ್ರೇಷ್ಠತೆಯನ್ನು ಮನೋಹರವಾದ ಬಗೆಯಲ್ಲಿ ಕವಿಯು ಎತ್ತಿ ಹಿಡಿದಿದ್ದಾನೆ. ಜೀವೇಶ್ವರ ಸ್ವರೂಪ ನಿರ್ಣಯ ಬಂಧಮುಕ್ತ ಲಕ್ಷಣ ಮುಂತಾದ ವಿಚಾರಗಳನ್ನು ವಿವರಿಸುವಾಗ ಕೊಡುವ ನಿದರ್ಶನ ಗಳು ಮನೋಹರವಾಗಿರುವದಲ್ಲದೆ ಫಲಕಾರಿಯಾಗಿವೆ. ಈಶ ಮತ್ತು ಜೀವರು ಹೊಂದಿಕೊಂಡಿರುವುದನ್ನು ಇಂತು ವಿವರಿಸಿದ್ದಾರೆ.

ಜಲಕುಂಭದಲ್ಲಿ ಮಾರ್ಪೊಳೆವಂಬರಂತಾನೆ ।
ನೆಲಸಿದಂಬರಮಿವೆರಡು ತೋರ್ಪಂತೊಂದ ।
ರೊಳಗೆ ಜೀವೇಶರಿಹರೊಂದಿ ॥

ಇಂತು ಶಿವಜೀವರು ಹೊಂದಿಕೊಂಡಿದ್ದರೂ ಜೀವನು ಪಡುವ ದುಃಖವು ಈಶನಿಗೆ ಹೊಂದುವುದಿಲ್ಲ.

ಸುಡುವ ಕನ್ನಡಿಯೊಳಿರ್ದೊಡೆ ನಿಜಾಸ್ಯಂ ಬೇಗೆ ।
ವಡೆಯದಂತಹಮ್ಮುವಿಡಿದ ಜೀವನವಿಕೃತಿ ।
ಯಡಸದೀಶಂಗೆ ದಿಟವಾಗಿ ॥

ಶೃತಿತತಿಗಳಾದ ಸಂಸ್ಕೃತ ಗ್ರಂಥಗಳಿಂದ ಉದ್ಧರಿಸಲ್ಪಟ್ಟ ವಾಕ್ಯಗಳು ಹೆಚ್ಚಾಗಿದ್ದರೂ ಕೊಂಚ ಬೇಜಾರಾಗುವುದು ಅನಿವಾರ್ಯವು. ಈ ರೀತಿ ಹೇಳುತ್ತಾರೆ.

ವೇದಶಿರದರ್ಥವಿದು ಇದು ಸಕಲಶಾಸ್ತ್ರೋಕ್ತ ।
ವಿದು ಪುರಾತನರ ಮತವಿದು ಗುರೂಕ್ತವು ।
ತ್ತಿದು ತತ್ವವಿದರ ನಿಜಮಾರ್ಗ ॥

ಈ ಗ್ರಂಥದ ಪ್ರಾಶಸ್ತವಿಂತಿದೆ.

ರನ್ನಗನ್ನಡಿಯುಲಿ ತನ್ನ ಮೊಗದಂದವಂ ।
ಚೆನ್ನಾಗಿ ಕಾಣ್ಬ ತೆರನಂತೆ ನಿಜವಿವರೊ ।
ಳಂ ನಾಡೆ ತೋರ್ಪುದಖಿಳರ್ಗೆ ॥

ಕವಿಯು ಹಲವಾರು ಉಪಮೆಗಳನ್ನು ಉಪಯೋಗಿಸಿ ಪ್ರಪಂಚದ ಶರೀರದ, ಅಹಂಕಾರದ ಅನಿತ್ಯತ್ವವನ್ನು ಪರಿಸ್ಫುಟಪಡಿಸಿದ್ದಾನೆ. ಯತ್ನ, ದ್ವೇಷ, ಭಾವನ, ರಾಗ, ಸುಖ, ದುಃಖ, ಮತಿ, ಧರ್ಮ, ಅಧರ್ಮ ಎಂಬ ನವಗುಣಗಳನ್ನೂ ಸಹ ಕೊನೆಗೆ ಹೇಳಿ ಮುಗಿಸುತ್ತಾನೆ. ಯೋಗಿಗೇಕೆ ಕರ್ಮದ ಬಾಧೆ ದೊರಕೊಳ್ಳದು ಎಂಬ ಪ್ರಶ್ನೆಗೆ ಪ್ರತಿಪಾದನೆ ಮಾಡದೆ, ಅನೇಕ ಉಪಮೆಗಳನ್ನು ತಂದೊಡ್ಡುವುದರ ಮೂಲಕ ಉತ್ತರವನ್ನು ಕೊಡುತ್ತಾನೆ. "ಗರುಡಮಂತ್ರ ಬಲ್ಲವನಿಂದ ಸರ್ಪವು ಓಡಿಹೋಗುವಂತೆ ಜಲಂ ಪತ್ತದಿರುವ ಕಮಲದಂತೆ ಬೆಳಕು ಕತ್ತಲೆಗಳಿಂದ ಆಕಾಶದ ನಿರ್ಮಲವಳಿಯದಂತೆ ಬೆಂಕಿಯು ಹತ್ತಿದ ಬೆಟ್ಟವನ್ನು ಮೃಗಪಕ್ಷಿಗಳು ಸೇರದಂತೆ, ವಾರಣಾಸಿಯೊಳಾದ ಕರ್ಮದ್ವಯದಂತೆ ಯೋಗಿಗವು ಜಡ ದೃಶ್ಯ ಮಿಥ್ಯೆಯುಹವಾಗಿ ಇದನ್ನು ಗುರುಮುಖದಿಂದ ಓದಿ ಕೇಳಿ ಅರಿತುಕೊಳ್ಳಬೇಕೆಂದು ಉಪದೇಶಿಸಿದ್ದಾನೆ. ಈ ರೀತಿ ನಡೆದರೆ ರವಿಯು ತನು

ವನ್ನು ಪರಿಹರಿಸುವಂತೆ ಇದು ಸರ್ವ ಸಂಶಯುಗಳನ್ನು ಹೋಗಲಾಡಿಸ್ತುತ್ತದೆ. ಈ ಬಗೆಯ ವಿರತಿಯನ್ನು ತಿಳಿಯಬೇಕೆಂಬ ಸಂಪ್ರೀತಿಯುಳ್ಳವರಿಗೆ ಮಾತ್ರವೇ ಹೊರತು ಅಜ್ಞರಾದವರಿಗೆ ಬೇಡಲೇ ಬೇಡ ಎಂದು ವಿಧಿಸಿ ಶಿಷ್ಯರಿಗೆ ಆಶೀರ್ವದಿಸಿ ಈ ಗ್ರಂಥವನ್ನು ಮುಗಿಸುತ್ತಾನೆ..

"ಅನುಭವಬೋಧೆ"ಯಲ್ಲಿ ೧೨೨ಸೂತ್ರ, ೯೮೫ಸಾಂಗತ್ಯಗಳನ್ನು ಒಳಗೊಂಡ ಆರುಸಂಧಿಗಳಿವೆ. ಅದ್ವೈತ ತತ್ವವನ್ನೇ ಬೋಧಗತಿಯಿಂದ ಯಾಜ್ಞವಲ್ಕ್ಯ ಮೈತ್ರೇಯಿಗಳ ಸಂವಾದ ರೂಪದಲ್ಲಿ ಕವಿಯು ನಿರೂಪಿಸಿರುವ ಕೃತಿಯೇ ಪರಮಾನುಭಾವ ಬೋಧೆಯು. ಬೃಹದಾರಣ್ಯಕೋಪನಿಷತ್ತಿನ ಸಾರಸಂಗ್ರಹದಂತೆ ಇದು ಇದೆ. ಪವರ್ತಕ ಕರ್ಮ, ನಿವರ್ತಕಕರ್ಮ, ಭ್ರಾಂತಿನಿರಾಕರಣ, ನಿರ್ಗುಣಯೋಗ, ಸುಗುಣಯೋಗ ಮತ್ತು ಗುರುಶಿಷ್ಯಾದಿ ಲಕ್ಷಣ ಎಂಬುವೇ ಈ ಆರು ಪ್ರಕರಣ ಇಲ್ಲಿ ಅಚ್ಚಕನ್ನಡದ ಛಂದಸ್ಸಾದ ಸಾಂಗತ್ಯವನ್ನು ತಮ್ಮ ಅನುಭವವಾಹಕವನ್ನಾಗಿ ಉಪಯೋಗಿಸಿಕೊಂಡು ಅದಕ್ಕೆ ಜೀವಕಳೆಯನ್ನು ತುಂಬಿದ್ದಾನೆ. ಗ್ರಂಥದ ಮೊದಲಲ್ಲಿ ಇಷ್ಟದೇವತಾ ಪ್ರಾರ್ಥನೆಯನ್ನು ಮಾಡಿ, ಯುಕ್ತವಾದ ಸ್ವಾಭಿಮಾನವನ್ನು ಹೊರಗೆಡಹಿದ್ದಾರೆ.

ಅನುಮಿತ್ರ ಬಾಂಧವನನುಪಮಾನಂದಾಬ್ಧಿ ।
ವಿನಯಾದಿ ಗುಣಮಣಿ ಮಂಡನ ॥
ಜನನವಿದೂರನಧಿಕ ವಿದ್ಯಾಸಂಪನ್ನ ।
ನೆನಿಸಿ ರಾಜಿಪ ನಿಜಗುಣಯೋಗಿ ॥
ಪರಮವಿವೇಕಿಗಳೊಲಿದೊಡಂಬಡುವಂತೆ ।
ಪರತತ್ವಬೋಧೆಯೆಂಬ ಮೃತದ ॥
ಸುರಿಸುರಿವಂತೆ ಕೇಳ್ವರ ಕರ್ಣದೊಳಗಿದ ।
ನೊರೆವೆ ನಾನುಪನಿಷನ್ಮತದಿಂದ ॥

ನಮ್ಮ ಮನಸ್ಸಿನಲ್ಲಿ ಜನಿಸ ಬಹುದಾದ ಸಂಶಯುಗಳನ್ನೇ ಮೈತ್ರೇಯಿಯು ಯಾಜ್ಞವಲ್ಕ್ಯರನ್ನು ಕೇಳುತ್ತಾ ನಮ್ಮ ಪ್ರತಿಧ್ವನಿಯಂತೆ ವರ್ತಿಸುತ್ತಾಳೆ. ಮೈತ್ರೇಯಿಯು ನಮ್ಮ ಸಂಶಯುಗಳು ಪ್ರತೀಕವಾದರೆ ಅವುಗಳನ್ನು ನಿವಾರಿಸಲು ಕಂಕಣಬದ್ಧನಾದ ಪರಮಯೋಗಿ ಯಾಜ್ಞವಲ್ಕ್ಯನು

ನೆರೆಕೇಳು ಕೇಳ್ದುದದನಲಿ ಅರಿದುದನೊಮ್ಮೆ ಮರೆಯದಿರು ಎಂದು ಉಪದೇಶದ ಮೂಲಸೂತ್ರಗಳನ್ನು ತಿಳಿಸಿ, ಅದ್ವೈತದ ಗಹನ ವಿಚಾರಗಳಿಗೆ ಕಾಲಿಡುತ್ತಾನೆ. "ಒಂದು ದುಃಖದೊಳು ತಾನೊಂದದೆ ಪರಿಪೂರ್ಣಾನಂದ ರೂಪಿಂದೆ ಸಂತತವಿರ್ಪ" ಬಗೆಯ ಗುಟ್ಟನ್ನು ಪ್ರಶ್ನೆ ಮಾಡಿದ ಮೈತ್ರೇಯಿಗೆ ಪಲವು ಶ್ರುತಿಗಳಿಂದೆ ಪಲವನುಭವದಿಂದ ಪಲವು ದೃಷ್ಟಾಂತ ಯುಕ್ತಿಗಳಿಂದೆ ಭೋದಿಸಿ ಆಕೆಯಿಂದೆ "ಕೃತಕೃತ್ಯಳಾದೆನಾನ ಮಳ ಚಿತ್ಸುಖದಲ್ಲಿ ಮತಿಸಿಂದುದೆನಗೆ ನಿಶ್ಚಲವಾಗಿ" ಎಂದು ಹೇಳಿದ್ದಾನೆ. ಯಥಾರ್ಥವೂ, ಅನುಭವಪೂರಿತವೂ, ಆದ ಉದ್ಗಾರಗಳೇ ಹೊರತು ಹೆಂಡತಿಯ ದಾಕ್ಷಿಣ್ಯಕ್ಕೆ ಸಿಕ್ಕಿ ಹೇಳಿದ ಗಂಡನಮಾತಿನಲ್ಲಿ ಉದರಕ್ಕೂ ಸಿಹಿಯಾದಂತೆಯೇ ಅಧರಕ್ಕೂ ಸಿಹಿಯಾಗಿದೆ. ಮೂಲ ಪ್ರಕೃತಿ, ಅಹಂಕಾರ, ಪಂಚಭೂತ, ಸಪ್ತಧಾತು, ಪಿಂಡ, ಜೀವನಸಂಚಾವಸ್ಥೆ ಪಂಚಕ್ಲೇಶ, ತಾಪತ್ರಯ ಆತ್ಮಲಕ್ಷಣ, ದೇಹಾತ್ಮದ ಪರಸ್ಪರವಿಲಕ್ಷಣ, ತತ್ವಮಸಿ– ಈ ವಿಷಯಗಳನ್ನು ಕುರಿತು ಕವಿಯು ಸರಳವಿರಳವಾಗಿ ವಿವರಿಸಿದ್ದಾನೆ. ಕನ್ನಡಿಯಲ್ಲಿ ಕಾಣಿಸುವ ತನ್ನ ಸ್ವರೂಪವು ಮಿಥ್ಯವಾಗಿ, ಆ ಮಿಥ್ಯಾರೂಪದಿಂದ ನಿಜರೂಪನ್ನು ತಿಳಿಯುವಂತೆ ಮಿಥ್ಯೆಯೆನಿಸಿಕೊಂಡಿರುವ ಜೀವಾತ್ಮನಿಂದ ನಿಜಪರಮಾತ್ಮನನ್ನು ತಿಳಿಯುವ ಸಾಧ್ಯತೆಯು ಇಲ್ಲಿ ಕರತಲಾಮಲಕವಾಗಿದೆ. ಆತ್ಮನಿಗೆ ಕುಲಗೋತ್ರಾದಿಗಳ ಭ್ರಾಂತಿ, ಜಾತಿಯ ಕಟ್ಟು, ಮೋಕ್ಷದ ವಿಧಿಯು ಇಲ್ಲೆಂದು ತೋರಿಸಿದ್ದಾನೆ. ಗುರುವಾಕ್ಯವೇ ಶ್ರುತಿ, ಸ್ಮೃತಿ, ಸರ್ವವು ಎಂಬುದರ ಮೂಲಕ ಗುರು ಮಹಿಮೆಯು ಹೊರಪಟ್ಟಿದೆ. ಶ್ರವಣ ಮನನ ನಿಧಿಧ್ಯಾಸನಗಳೆಂಬ ಸಾಧನೆಗಳನ್ನೂ, ಶಬ್ದ ಅನುಮಾನ ಅನುಭವ ಎಂಬೀ ಪ್ರಮಾಣಗಳನ್ನೂ ಕರ್ಮ ಜ್ಞಾನ ಮೋಕ್ಷವೆಂಬ ಗತಿಗಳನ್ನು ತಿಳಿದರೆ ಮಾತ್ರ ಕೈವಲ್ಯ ಪ್ರಾಪ್ತಿ ಯಾಗುವುದು ಎಂದು ಉಪದೇಶವಿದೆ. ತನ್ನನ್ನು ತಾನು ತಿಳಿದರೆ ಭವಬಂಧನವು ಹರಿದಂತೆಯೇ ತನ್ನನ್ನು ತಾನು ಮರೆತರೆ ಸಂಸ್ಕೃತಿಯ ಬಂಧನವುಂಟಾಗುತ್ತದೆ ಎಂಬುದನ್ನು ಕವಿಯು ಪರಿಸ್ಪಷ್ಟಪಡಿಸಿದ್ದಾನೆ.

ಏಕಾದಶಗತಿಗಳಾಗಿ ವಿಭಾಗಿಸಲ್ಪಟ್ಟು, ಲಲಿತರಗಳೆಯಲ್ಲಿ ರಚಿಸಲ್ಪಟ್ಟಿರುವುದೇ ಪರಮಾರ್ಥ ಗೀತೆ. ಇದು ಗುರುಶಿಷ್ಯರ ಸಂವಾದರೂಪದಲ್ಲಿದೆ. ೩೨ ಕಂದ, ೧೨೨ ನಿರೂಪಣೆ, ೧೪೯೬ ಚರಣಗಳು ಇದರಲ್ಲಿ ಇವೆ. ವಸಿಷ್ಠ

ಮಹರ್ಷಿಗಳು ಶ್ರೀರಾಮನಿಗೆ ಹೇಳಿದ ತತ್ವಾರ್ಥವನ್ನೇ ಈ ಗ್ರಂಥರೂಪದಲ್ಲಿ ಕವಿಯು ಹೇಳಿದ್ದಾನೆ. "ಇತಿಹಾಸ ಸ್ಮೃತಿ ಶೃತಿಯರ್ಥವನಿಂತು ಕನ್ನಡಿಸಿದಂ ನಿಜಗುಣ ಯತಿ" ಈ ಗ್ರಂಥದಲ್ಲಿ ಹೊರಬಂದ ಮಹಾ ಸಂದೇಶವು "ತನಗಾವುದು ಭವದುಃಖವನೆ ಕೆಡಿಸಿ, ನಿತ್ಯ ಚಿದಾನಂದದ ಘನಪದವಂ ಕಾಣಿಸುದದುವೇ" ಎಂಬುದಾಗಿದೆ. ಇಷ್ಟೇ ಅಲ್ಲದೆ ಇಂತು ಆರಂಭಿಸಿದ್ದಾನೆ.

ಪದಲಕ್ಷಣವಿಲ್ಲದೊಟಂ ।
ಶಿವ ಸೇವ್ಯಂ ಜಗದೊಳರ್ಥವುಳ್ಳದರಿಂದಂ ॥
ವಿದಿತಂ ಪೊನ್ನುಳ್ಳಂ ಗುಣ ।
ದೊದವಾವುದುಮಿಲ್ಲದಿರ್ದೊಡಂ ಗುಣಿಯಲ್ತೆ ॥

ಹರಿಹರನಲ್ಲಿ ಭಕ್ತಿಯ ಉನ್ಮಾದತೆಯಿಂದ ಆವಿರ್ಭವಿಸಿದ ರಸವಾಹಿನಿಯನ್ನು ಕಂಡರೆ, ಇಲ್ಲಿ ಜ್ಞಾನಯೋಗಿಯೋರ್ವನ ತಪೋಗರ್ಭದಿಂದ ತತ್ವಸಾಗರದ ದರ್ಶನವಾಗುತ್ತದೆ. ಶಿಷ್ಯನು ಗುರುವನ್ನು ಪ್ರಶ್ನಿಕೇಳುತ್ತಾನೆ.

ತನ್ನ ನಿಜಸ್ಥಿತಿ ತಾನೇನೆಂದು ।
ಮುನ್ನಿನ ಪರಿಭವವೆಂತಾಯ್ತೆಂದು ।
ಇನ್ನಿದು ಪರಿವದುಪಾಯವಿದೆಂದು ।
ನನ್ನಿಯನೆನಗೀಗಳೆ ಪೇಳೆಂದು ॥

ಅದು ವಚನಕ್ಕೆ ಗೋಚರವಲ್ಲ ಎಂದು ಗುರುವು ಹೇಳಿ ಇನ್ನೂ ಮುಂದೆ ಹೋಗುತ್ತಾನೆ. ನೀನೆ ಸಕಲ ಜಗನ್ಮಯನಪ್ಪೆ ಆ ನಿಜದಿಂದೆ ಮಹೇಶನೆನಿಪ್ಪೆ ಎಂದುದರ ಜೊತೆಗೆ ನಿನ್ನ ಈ ಕ್ಷಣ ಸಂಕಲ್ಪಾದಿ ಶಕ್ತಿಗಳಿಂದ ಸಂಸಾರ ಚಕ್ರದಲ್ಲಿ ವ್ಯವಹರಿಸುತ್ತ ಮಾಯಿಕ ಶರೀರಿಯಾದ ಪರಮೇಶ್ವರನನ್ನು ಭೌತಿಕ ಶರೀರಿಗಳಾದ ಜೀವರು ಭಜಿಸುತ್ತಿರುವುದೆಲ್ಲವೂ ನಿನ್ನ ಪ್ರಭಾವವೇ ಆಗಿದೆ ಎಂದು ಉಪದೇಶಿಸಿ ಅದ್ವೈತ ತತ್ವದ ಪರಾಕಾಷ್ಠತೆಯನ್ನು ವಿವರಿಸಿ, ಸೃಷ್ಟಿ ಸ್ಥಿತಿ ಲಯತ್ರಯತ್ರಯಯೆಲ್ಲವೂ ನೀನೆ ಎಂದು ಅರಿತುಕೊಳ್ಳಬೇಕೆನ್ನುತ್ತಾನೆ.

ಅದರಿಂ ನಿನ್ನಿಂ ಬೇರೊಂದಿಲ್ಲ ।
ವಿದಿತಂ ತಿಳಿ ಬಂಧಂ ನಿನಗಿಲ್ಲ ।

ಪ್ರತ್ಯಕ್ಷಾದಿಕವಮಂ ಸೆರೆಬಿಟ್ಟು ।
ನಿತ್ಯ ಸುಖದೊಳು ನಿಜವಳವಟ್ಟು ॥

ಪಂಚ ಭೂತಗಳು ಜೀವರಾಶಿಗಳ ಉಪಯೋಗಕ್ಕೇ ಹೊರತು ಲೋಕ ವ್ಯವಹಾರಕ್ಕೆ ಸಾಧನವಾಗುವುದಿಲ್ಲವೆಂಬುದನ್ನು ವ್ಯಕ್ತಪಡಿಸಿದ್ದಾನೆ. ಬೀಜದಲ್ಲಿ ಅಡಗಿದ್ದು ಗಿಡವಾಗಿ, ಕಾಯಿಯಾಗಿ, ಹಣ್ಣಾಗಿ, ಹಣ್ಣಿನೊಳಗೆ ಅನೇಕ ಕೋಟಿ ಹುಳುಗಳ ಶರೀರಗಳಾಗಿ, ಅವುಗಳೊಡನೆ ಇಂದ್ರಿಯ ಸುಖಾನುಭವ ಮಾಡುವ ಭೂತಾತ್ಮಗಳಾಗಿ ಪರಿಣಾಮವಾಗುವ ಶಕ್ತಿಯೇ ಮಾಯಾಶಬಳವಾದ ಬ್ರಹ್ಮ. ಈಶ್ವರನ ಸಗುಣಲಿಂಗ ಮೂರ್ತಿಯು ಸಕಲ ಲೀಲೆಗಳಗೂ ಇದೇ ಮೂಲವಾಗಿದೆ. ಜೀವ ಶರೀರಗಳ ತಾತ್ವಿಕ ಭೇದವನ್ನೂ, ಶರೀರೋತ್ಪನ್ನ ವಿಕಾರಗಳನ್ನೂ, ಸಂಸಾರವನ್ನೂ ಕವಿಯು ಪ್ರತಿಪಾದಿಸಿದ್ದಾನೆ. ಬ್ರಹ್ಮವಿಚಾರದ ಭೂಮಿಕೆಗಳನ್ನೂ, ಯೋಗಾಭ್ಯಾಸವನ್ನೂ ಹೇಳಿದ್ದಾನೆ. ಪುಣ್ಯಾಧಿಕ್ಯ, ಪಾಪನಿವೃತ್ತಿ, ಸುವಿವೇಕ, ಲೋಕ ಪರೀಕ್ಷೆ, ವೈರಾಗ್ಯ, ಸತ್ಪುರುಷ ಸಾಂಗತ್ಯ, ಆತ್ಮಾನಾತ್ಮ ವಿವೇಕ, ಶಮಾದಿ ಸಂಪತ್ತು, ಮೋಕ್ಷಾಭಿಲಾಷೆ, ಗುರುಸೇವೆ, ವೇದಾಂತ ಶ್ರವಣ, ವೇದಾಂತ ಮನನ, ನಿಧಿಧ್ಯಾಸನ, ಅಸಂಗಾತ್ಮಸಿದ್ಧಿ ಈ ಬಗೆಯ ಮೋಕ್ಷದ ಮೆಟ್ಟಲುಗಳು ಪ್ರತಿಪಾದಿತವಾಗಿವೆ. ಯೋಗಭ್ರಷ್ಟನ ಗತಿ, ಅದರ ಭೂಮಿ, ಈಶ್ವರನಾಮ, ಜೀವನ್ಮುಕ್ತ ಲೀಲೆಯ ವಿವರಣೆಯೂ ಈ ಕವಿಯಿಂದ ಹೊರಸೂಸಿದೆ. ಗುರು ಕೃತಜ್ಞತಾ ಸೂಚನೆಯೂ ಈ ಬಗೆಯಾಗಿದೆ.

ಗುರುವರ ನೀನಿಂತೆನಗೊಲವಿಂದ ।
ಪರಮಾರ್ಥವನರುಪಿದ ಕತದಿಂದ ।
ಭವಸಾಗರವಂ ದಾಂಟಿದೆ ನಿಂತು ।
ಶಿವಸಂಪದ ಸಮನಿಸಿತೆನಗಿಂತು ।
ಅದು ವಾಙ್ಮನಸಾತೀತವೆಯಾಗಿ ।
ಅದು ನಿನ್ನೀ ಶ್ರೀಪಾದುಕೆಯಾಗಿ ।
ಬೇರುಪಚಾರಂ ನಿನಗೊಂದಿಲ್ಲ ।
ಬೇರಿನ್ನೇನುಪುರಲಿಕಿಲ್ಲ ॥

ನಿಜಗುಣ ಶಿವಯೋಗಿಯ ಯೋಗಶಾಸ್ತ್ರ ಗ್ರಂಥವೆಂದು ಕರೆಯಲಾದ ಪರಮಾರ್ಥ ಪ್ರಕಾಶಿಕೆಯು ಗದ್ಯಗ್ರಂಥ. ಚೆನ್ನ ಸದಾಶಿವಯೋಗಿ ವಿರ

ಚಿತ ಶಿವಯೋಗ ಪ್ರದೀಪಿಕೆಗೆ ವ್ಯಾಖ್ಯಾನ ರೂಪವಾಗಿ ಬರೆಯಲ್ಪಟ್ಟ ಗ್ರಂಥ ವಿದು. ಇದರಲ್ಲಿ ಐದು ಪರಿಚ್ಛೇದಗಳಿವೆ. ಸಂಸ್ಕೃತ ಜ್ಞಾನವಿಲ್ಲದ ಮೋಕ್ಷಾಪೇಕ್ಷಿಗಳಿಗೆ ಸುಲಭವಾಗಿ ಗೊತ್ತಾಗುವಂತೆ ವ್ಯಾಖ್ಯಾನವನ್ನು ಬರೆದಿರುವುದಾಗಿ ಹೇಳಿದ್ದಾರೆ ಪಂಡಿತ ಚಕ್ರವರ್ತಿಯೂ, ಗದ್ಯ ಪದ್ಯ ಶೈಲಿಗಳ ಬಳಕೆಯಲ್ಲಿ ಬಹು ಶಕ್ತನೂ ಆದ ಈ ಪ್ರತಿಭಾಸಂಪನ್ನನ ಹೃದಯಂಗಮವಾದ ಗದ್ಯಶೈಲಿಯು ಇದರಲ್ಲಿ ಆದ್ಯಂತವಾಗಿ ಪರಿಸ್ಫುಟವಾಗಿದೆ. ಗ್ರಂಥದ ವ್ಯಾಖ್ಯಾನವಾದರೂ ಇದು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿಸಿಕೊಂಡಿರುವ ಸ್ವತಂತ್ರ ಕೃತಿಯಾಗಿದೆ. ೨೫ ವಿಷಯಗಳನ್ನೊಳಗೊಂಡ ಜ್ಯೋತಿರ್ಜ್ಞಾನ ೨೩ ವಿಷಯಗಳಿರುವ ಸ್ವಾತ್ಮಜ್ಞಾನ ೨೨ ವಿಚಾರಗಳನ್ನಳವಡಿಸಿ ಕೊಂಡಿರುವ ಅವಧೂತ, ೩೧ ವಿಷಯಗಳಿರುವ ಯೋಗಾನಂದ, ೪೩ ವಿಚಾರಗಳಿರುವ ವೇದಾಂತ ಎಂಬ ಐದು ಪ್ರಕರಣಗಳು ಈ ಕೃತಿಯಲ್ಲಿ ಇವೆ. ಮಂತ್ರ, ಹಠ, ರಾಜ, ಶಿವಯೋಗಗಳ ವಿವರಣೆಯ ಜೊತೆಗೆ ನಿರ್ಗುಣ ಹಾಗೂ ಸಗುಣಾರಾಧನೆಯನ್ನು ವಿಸ್ತರಿಸಿ ಕವಿಯು ಹೇಳಿದ್ದಾನೆ. ಯಮನಿಯಮ ಪ್ರಾಣಾಯಾಮ ಅಜಪಾಗಾಯಿತ್ರಿ ಲಯಯೋಗ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿಗಳನ್ನು ವಿವರಿಸಲಾಗಿದೆ. ಅಂತ್ಯದಲ್ಲಿಯ್ಯು ಮಾದ್ಯಾಂಗಗಳೇ ವೀರಶೈವ ಷಟ್ಸ್ಥಲಗಳೆಂದು ಸಮರ್ಥಿಸಿದ್ದಾರೆ. ಬ್ರಹ್ಮ ಸಾಕ್ಷಾತ್ಕಾರದ ಅಧಿಕಾರಿ ಹಾಗೂ ಅನಧಿಕಾರಿ, ತಾರಕ ಯೋಗ, ಲಿಂಗ ಸ್ಥಳ, ಅಂತರ್ಲಕ್ಷ್ಯ, ಮುದ್ರಾಲಕ್ಷಣ, ಬ್ರಹ್ಮಾಭ್ಯಾಸ, ಶಾಂಭವೀ ಮುದ್ರೆ, ಲಿಂಗಸ್ವರೂಪ, ಪೂಜಾವಿಕ್ರಮ, ಮನೋಜನ್ಯವಾದ ಪುಷ್ಪ ಸ್ವರೂಪಾದಿಗಳ ನಿರೂಪಣೆಯು ನಿರಂತರವಾಗಿ ಬಂದಿದೆ. ಯೋಗಶಾಸ್ತ್ರದಂತಹ ವಿಚಾರದ ಮೇಲೆ ವ್ಯಾಖ್ಯಾನರೂಪದ ಗ್ರಂಥದಲ್ಲಿಯೂ ಸಹ ಚಮತ್ಕಾರ ಪರಿಪೂರ್ಣವಾದ ಭಾಗಗಳು ಇರದೆ ಇಲ್ಲ ಎನಲು ನಿದರ್ಶನವೊಂದು. "ಅಂತಃಪುರದಲ್ಲಿರುವ ರಾಜನನ್ನು ಕಾಣುವುದಕ್ಕೆ ಹೋಗುವ ಮಂತ್ರಿಯು ತನ್ನ ಪರಿವಾರದವರನ್ನು ಅವರವರ ಉಚಿತ ಸ್ಥಾನದಲ್ಲಿ ಬಿಟ್ಟು ತಾನು ಒಬ್ಬನೇ ಅವನ ಬಳಿಗೆ ಹೇಗೆ ಹೋಗುವನೋ ಹಾಗೆ ಜೀವನು ಆಯಾಯ ಬಿಂದು ಮಾಯಾಕಾರ್ಯಗಳಿಂದ ಸಂಬಂಧಿಸಲ್ಪಟ್ಟವನಾಗಿದ್ದರೂ ಅವೆಲ್ಲವನ್ನೂ ಅಲ್ಲವೆಂದು ತ್ಯಜಿಸಿ ಕೇವಲನಾಗಿ ಆಸಕ್ತಿಯಿಂದ ಊರ್ಧ್ವಗಸ್ಥನಾಗಿ ಸ್ವಯಂ ಪ್ರಕಾಶನಾದ ಶ್ರೀ ಶಂಭುಸ್ವರೂಪನಾಗಿರುವನು.

ಅರುವತ್ತುಮೂರುಮಂದಿ ಪುರಾತನರನ್ನು ಹಾಡಿ ಹೊಗಳಿರುವ ತ್ರಿಪದಿ ಛಂದಸ್ಸಿನ ರೂಪದಲ್ಲಿರುವ ಗ್ರಂಥವೇ 'ಅರುವತ್ತುಮೂರು ಪುರಾತನರ ತ್ರಿವಿಧಿ' ಆಗಿದೆ. ಇದರಲ್ಲಿ ಎಪ್ಪತ್ತೇಳು ಪದ್ಯಗಳಿವೆ. ಇದರ ವಿಚಾರವಾಗಿ ಶ್ರೀ ಅ. ನ. ಕೃಷ್ಣರಾಯರು "ಕಿರಿದರೊಳು ಪಿರಿದರ್ಥ ಮನವಿಪ ಕೌಶಲ್ಯವನ್ನು ಈ ಕವಿತೆಯಲ್ಲಿ ಕವಿ ತೋರಿದ್ದಾನೆ. ಅರುವತ್ತು ಮೂರು ಪುರಾತನರ ಚರಿತ್ರೆಗಳನ್ನು ಎಪ್ಪತ್ತೇಳು ತ್ರಿಪದಿಗಳಲ್ಲಿ ಅಚ್ಚುಕಟ್ಟಾಗಿ ಮುಗಿಸಿದ್ದಾನೆ" ಎಂದಿದ್ದಾರೆ. ಇದರ ಆದಿಗ್ರಂಥ ಲೈಂಗ್ಯ ಪುರಾಣವೆಂದು ಕಾಣುತ್ತದೆ. ಋಗ್ವೇದ, ಪೆರಿಯ ಪುರಾಣ, ಜೈನರ ತ್ರಿಷಷ್ಟಿ ಶಲಾಕಾ ಪುರುಷ ಚರಿತೆ – ಇವುಗಳಲ್ಲಿ ಪುರಾತನರ ವಿಷಯವು ಬರುತ್ತದೆ. ಕನ್ನಡ ನಾಡಿನ ಚರಿತ್ರೆಯಲ್ಲಿ ಈ ಉಕ್ತಿಯು ಇದೆ. "ಅಪ್ಪರ್ ತಿರುಜ್ಞಾನ ಸಂಬಂಧರ್ ಸುಂದರನಂಬಿ, ಮಾಣಿಕ್ಯವಾಚಕರ ಮೊದಲಾದ ಇವರು ಭಕ್ತಿ ಮಾರ್ಗವನ್ನೇ ತಮ್ಮ ಮುಖ್ಯ ಗುರಿಯಾಗಿಟ್ಟುಕೊಂಡು ತೀರ ಸಾಮಾನ್ಯರಿಗೂ ಬೋಧವಾಗುವಂತೆ ಸುಲಭವಾದ ಹಾಡಗಳನ್ನು ರಚಿಸಿ ಅವುಗಳ ಮಾರ್ಗವಾಗಿ ಜನರಲ್ಲಿ ಶಿವಜ್ಞಾನವನ್ನು ಬೀರಿದರು".

ಶರಣರ ಮನದ ಮೊನೆಯಲ್ಲಿ ಹರನಿರುವುದನ್ನು ಅರಿತು ಶಿವ ಮಹಿಮೆಯನ್ನೂ ಶಿವಭಕ್ತಿಯಿಂದ ಆಗುವಂತಹ ಆತ್ಮ ಶುದ್ಧಿ ಮತ್ತು ಶಾಂತಿ ಇವುಗಳನ್ನು ಹರಡಿದ ಶಿವಶರಣರನ್ನೂ ತನ್ನ ಗುರುಗಳನ್ನಾಗಿ ಕವಿಯು ಸಂಪ್ರದಾಯರೀತ್ಯಾ ಅಂಗೀಕರಿಸಿದ್ದಾನೆ. ಶಂಭುಲಿಂಗನ ಬೆಟ್ಟದಲ್ಲಿ ಪುರಾತನರ ಸುರಂಗವೂ ಈಗಲೂ ಇದೆ. ದರ್ಶನದಲ್ಲಿ ಆಸಕ್ತಿ ಅಭಿಮಾನವನ್ನಿಟ್ಟಿದ್ದ ಈತನು ಪುರಾತನರನ್ನು ಸ್ತುತಿಸಿರುವುದು ಈತನ ಶರಣ ಕಿಂಕರ ಮನೋಭಾವವನ್ನು ವ್ಯಕ್ತಪಡಿಸುವುದಾಗಿದೆ. ದಾರಿದರ್ಶಕರಾದ ಹಿರಿಯರನ್ನು ಹೃದಯಾರೆ ಹಾಡಿ ಹೊಗಳಿ ಶರಣರ ಪ್ರಭೆಯನ್ನು ಪ್ರಜ್ವಲತೆಯಿಂದ ಪ್ರಸರಿಸಿದ್ದಾನೆ.

ವರಚಿಂತಾಮಣಿ ಯೆನಿಸ ಪರಿಪರಿಯ ।
ಶರಣರೆಲ್ಲರ ಮನೋರಥವನೊಲಿದಿತ್ತ ಶಂಭುನೀ ।
ನಿಂಸೆನ್ನವರ ಸಭೆ ಯೊಳಗೆ॥

ಆದಿಶಕ್ತಿಯಾದ ಪಾರ್ವತಿಗೆ ಮೀಸಲಾದ ಮಂಗಳ ಶ್ಲೋಕವು ಇಂತಿವೆ.

ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು
ಮಂಗಳೊಳು ಕಂಪು ಬೆರೆದಂತೆ ಪರಮನೊಳು।
ಪಿಂಗದಗಮತೆಗೆನಪ್ಪೆಂ ॥

ನಿಜಗುಣ ಶಿವಯೋಗಿಯ ರೀತಿನೀತಿ ನಡೆನುಡಿಯು ಇವರ ಪ್ರತಿ ಪದದಲ್ಲಿಯೂ ಎದ್ದು ಕಾಣುತ್ತದೆ. ತಮ್ಮ ಜ್ಞಾನ, ಯೋಗ, ಅನುಭವಗಳ ಸಾರವನ್ನೇ ಇವರ ಕೃತಿಯಲ್ಲಿ ಒಡಮೂಡಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಕಾರರು ಈ ವಿಷಯದಲ್ಲಿ ಇಂತು ನುಡಿದಿದ್ದಾರೆ.

"ನಿಜಗುಣ ಶಿವಯೋಗಿ ಕನ್ನಡ ನಾಡಿನ ಅದ್ಭುತ ವ್ಯಕ್ತಿಗಳಲ್ಲಿ ಅಗಾಧ ವಿದ್ವತ್ತೆಯಿಂದಲೂ, ದೀರ್ಘ ತಪಶ್ಚರ್ಯೆಯಿಂದಲೂ ಜ್ಞಾನದ ತುತ್ತ ತುದಿಯನ್ನೇರಿ ಕೆಳಗಿಳಿದು ಬಂದು ತರತರದ ಗದ್ಯ ಪದ್ಯದಲ್ಲಿ ಕನ್ನಡ ಜನಕ್ಕೆ ತನ್ನ ಅರಿವನ್ನು ಹಂಚಿಕೊಟ್ಟನು"

ಕವಿಯು ಕಾವ್ಯದ ತೆರೆಯ ಮೇಲೆ ನಿಂತು ಅಧ್ಯಾತ್ಮದ ಮೋಡವನ್ನು ಮುಟ್ಟಿದ್ದಾರೆ. ಶಬ್ದಾಡಂಬರವಿಲ್ಲದೆ ಅರ್ಥಗಾಂಭೀರ್ಯದಿಂದ ತುಂಬಿ ತುಳುಕುತ್ತಿರುವ ಓದಲು ತೊಡಕಿಲ್ಲದಂತಹ ಮಧುರವಾದ ಭಾಷಾಶೈಲಿ ಇವರ ಪದಗಳಲ್ಲಿ ಧ್ವನಿಯು ಆಳವಾಗಿದ್ದು ಅರ್ಥವು ಎದ್ದು ಕಾಣುತ್ತಾ ನೇರವಾಗಿ ಹೃದಯಕ್ಕೆ ಹೋಗುತ್ತದೆ. ಸರ್ವಭೂಷಣ ಮಠಾಧ್ಯಕ್ಷರಾದ ಶ್ರೀ ಮನ್ನಿರಂಜನ ಮಹದೇವ ಸ್ವಾಮಿಯವರು ನಿಜಗುಣರ ಮೇಲ್ಮೆಯ ವಿಚಾರದಲ್ಲಿ ಇಂತು ನುಡಿದಿದ್ದಾರೆ.

"ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿರುವ ಅದ್ವೈತಮತ ಸ್ಥಾಪಕರಾದ ಭಗವಾನ ಶಂಕರಾಚಾರ್ಯರಿಗಿಂತಲೂ ಶ್ರೀ ನಿಜಗುಣರು ಯಾವ ರೀತಿಯಿಂದಲೂ ಕಡಿಮೆಯಿಲ್ಲವೆಂದು ಹೇಳುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆಯನ್ನುಂಟುಮಾಡತಕ್ಕ ವಿಷಯವೇ ಸರಿ. ಶ್ರೀ ಶಂಕರರ ಕೃತಿಗಳು ಪಂಡಿತ ಭಾಷೆಯಾದ ಸಂಸ್ಕೃತದಲ್ಲಿದ್ದರೆ, ಶ್ರೀ ನಿಜಗುಣರ ಕೃತಿಗಳು ನಮ್ಮ ತಾಯಿನುಡಿ ತಿಳಿಗನ್ನಡದ ಸವಿಗೊರಲಿನಲ್ಲಿವೆ. ಅದು ನಮಗೆ ಮತ್ತಷ್ಟು ಪ್ರಿಯವಾಗಿವೆ. ಕನ್ನಡನಾಡಿನ ತುಂಬ ಅವರ ಅಮೋಘ ಜ್ಞಾನಭಂಡಾರದ ಸೂರೆಯಾಗಿರುವುದು. ಅವು ಕನ್ನಡದಲ್ಲಿದ್ದುದರಿಂದಲೇ ನಿಜಗುಣರಿಗೆ ಅದ್ವೈತ ಸಿದ್ಧಾಂತದಲ್ಲಿ ಪರಿಣತ ಪಾಂಡಿತ್ಯವಿತ್ತೆಂದು ಅವರ ಗ್ರಂಥಗಳಿಂದ

ತಿಳಿದು ಬಂದರೂ ಶಿವಶಕ್ತಿಗಳ ಅವಿನಾಭಾವ ಸಂಬಂಧಗಳನ್ನು ಪ್ರತಿಪಾದಿಸುವ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬಿಟ್ಟು ಅವರು ಹೊರಗೆ ಹೋಗಿಲ್ಲ. ಲಿಂಗ ಪೂಜೆ, ಜಂಗಮಾರ್ಚನೆ, ಪ್ರಸಾದ ಸೇವನೆ ಮುಂತಾದ ಅಷ್ಟಾವರಣಗಳಿಗೆ ತಡೆಯಿಲ್ಲದಂತೆ ಇವರ ಗ್ರಂಥಗಳಲ್ಲಿ ಎಡೆಯಿದೆ. ಕೈವಲ್ಯಪದ್ಧತಿಯು ಯೋಗಪ್ರತಿಪಾದನ ಸ್ಥಳವು ಕೇವಲ ಲಿಂಗಾಂಗ ಸಾಮರಸ್ಯವನ್ನೇ ಬೋಧಿಸುತ್ತದೆ. ಒಟ್ಟಿನಲ್ಲಿ ಇವರ ಕೃತಿಗಳ ಸರ್ವ ಸಾರವೂ ಚರಮ ಧ್ಯೇಯವೂ ಶಿವಾದ್ವೈತವೆಂದು ಹೇಳಬಹುದು. ಮುಮುಕ್ಷುಗಳಿಗೆ ಸುಲಭವಾಗಿ ದಾರಿತೋರಿಸಿರುವ ಭಕ್ತಿಮಾರ್ಗವನ್ನು ಹೆಚ್ಚಾಗಿ ಪ್ರತಿಪಾದಿಸಿದ್ದಾರೆ. ಇವರ ತ್ರಿಷಷ್ಟಿ ಪುರಾತನ ತ್ರಿವಿಧಿಯು ಕೇವಲ ಭಕ್ತರನ್ನು ಕುರಿತು ಹಾಡಿದ ಭಕ್ತಿಗೀತೆ. ಇವರ ಗ್ರಂಥಭಂಡಾರವು ಬರೀ ಜ್ಞಾನದಗಣಿಯುಷ್ಟೇ ಅಲ್ಲ. ಅದು ಭಕ್ತಿಯು ಮಧುರ ಮಧುವಿನ ಪಾತ್ರೆಯೂ ಆಗುವುದು. "

ಜಗುಣರ ಆತ್ಮದ ಜೀವಂತ ಪರಿಚಯವು ಇವರ ಕೃತಿಗಳಲ್ಲಿ ಮೈಗೊಂಡಿದೆ. ಆತ್ಮದ ಬಾಗಿಲನ್ನು ತೆರೆಯಿಸುವ ಶಿವಜೀವರುಗಳ ಅಂತರವನ್ನು ಅಳಿಸುವ ನಿತ್ಯ ನೂತನ ಮುದ್ರಾಕೀಲು ಕೋಶಗಳು ಇವರ ಕೃತಿಗಳು. "ಇವುಗಳಿಗೆ ಸರಿಹೋಗುವಂತಹ ಗ್ರಂಥಗಳು ಇತರ ದೇಶೀಯ ಭಾಷೆಗಳಲ್ಲಿ ಇದುವರೆಗೂ ಉದ್ಭವಿಸಿಲ್ಲವೆಂದು ಕೆಲವರ ಅಭಿಪ್ರಾಯ." ಎಂದು ಸರ್ ದಿವಾನ್‌ಬಹದ್ದೂರ ಕಂಬಳಿಯವರು ಇವರ ಕೃತಿಗಳ ವಿಚಾರದಲ್ಲಿ ನುಡಿದಿದ್ದಾರೆ. ನಿಜಗುಣರ ಅಧ್ಯಾತ್ಮ ತಪಸ್ಸಿನ ಶಕ್ತಿಯೇ ಕಾವ್ಯರೂಪವಾಗಿ ಹೊರಹೊಮ್ಮಿದೆ. ಈತನ ವಿವೇಕಚಿಂತಾಮಣಿಯು ತೆಲುಗು, ತಮಿಳು, ಮರಾಠಿ, ಸಂಸ್ಕೃತ ಭಾಷೆಗಳಿಗೆ ಭಾಷಾಂತರವಾಗಿರುವುದು ಇಡೀ ಕನ್ನಡಿಗರಿಗೆ ಹೆಮ್ಮೆ. ವೇದಾಗಮೋಪನಿಷತ್ತುಗಳಲ್ಲಿ ಅಡಕವಾಗಿರುವ ತಿರುಳ್ಹುರುಳಿನ ಅಧ್ಯಾತ್ಮಶಾಸ್ತ್ರವನ್ನು ಕನ್ನಡದಲ್ಲಿ ಪ್ರೌಢ ಗ್ರಂಥರೂಪವಾಗಿ ಪ್ರಾರಂಭಿಸಿದ ಕೀರ್ತಿಯು ಇವರಿಗೆ ಸಲ್ಲಬೇಕಾಗಿದೆ. ದಾಸ ಪಂಥಕ್ಕೆ ದಾರಿ ಹಾಕಿ ಕೊಟ್ಟಿದ್ದಾರೆ. ಸತ್ಯಾರ್ಥಗಳನ್ನು ಸಾಹಿತ್ಯರೂಪಕ್ಕೆ ಇಳಿಸುವುದರ ಮತ್ತು ಅವುಗಳನ್ನು ಜನಸಾಮಾನ್ಯರ ಮನಸ್ಸಿಗೆ ಹಿಡಿಯಿಸುವುದರ ಉದ್ದೇಶವನ್ನು ಈ ಕವಿಯು ಸಾರ್ಥಕ ಪಡಿಸಿದ್ದಾನೆ. ಈತನಿಗೆ ಸಂಗೀತದ ರಹಸ್ಯವೂ, ಛಂದಸ್ಸಿನ ಹೃದಯವೂ ಚನ್ನಾಗಿ ತಿಳಿದಿತ್ತು. ನಮಗೆ ಇಂದು ಗೊತ್ತಾಗದೇ ಇರುವ ಹಲವು ತಂತಿ ವಾದ್ಯಗಳು ಮತ್ತು ಚರ್ಮ ವಾದ್ಯ

ಗಳು ವಿವೇಕಚಿಂತಾಮಣಿಯಲ್ಲಿ ಕಂಡುಬರುತ್ತವೆ. ಶರಣಸಾಹಿತ್ಯ ಪತ್ರಿಕೆ ಸಂಪಾದಕರಾದ ಆಸ್ಥಾನ ವಿದ್ವಾನ ಬಿ. ಶಿವಮೂರ್ತಿ ಶಾಸ್ತ್ರಿಗಳು ಇಂತು ಈ ಕವಿಯ ವಿಷಯವಾಗಿ ಹೇಳಿದ್ದಾರೆ—.

" ಸಂಸ್ಕೃತ ಕವಿಗಳಲ್ಲಿ ಕಾಳಿದಾಸನಿಗೆ ಹೇಳುವಂತೆ, ಕನ್ನಡ ಸಾಹಿತ್ಯದ ' ಹಿತಮಿತವಾದ ಕವಿ ' ನಿಜಗುಣಶಿವಯೋಗಿ... ಜನಸಾಮಾನ್ಯರನ್ನು ಉದ್ಧಾರಮಾಡಬೇಕೆಂಬುದೇ ಆತನ ಮಹೋದ್ದೇಶ. ಸಂಗೀತ ಸ್ವಗಳಿಗೆ ಸಹಾಯ ಮಾಡಿದ್ದಾನೆ. "

# ಬಸವೇಶ್ವರ

( ಲೇಖಕರು:— ಮ. ಮಲ್ಲಪ್ಪಾ ಜ್ಞಾನ ಮಂದಿರ ಹಲಗೂರು.)

ಶ್ರೀ ಮದಮಲಾತ್ಮಾಭಿ ।
ರಾಮನಾನಂದಾಬ್ಧಿ ।
ಸೋಮಸದಮಲ ಭಾವ ಭರಿತ ನನ್ನ ॥
ಸ್ವಾಮಿ ಸದ್ಭಕ್ತಿಸು ।
ಪ್ರೇಮಿ ರಕ್ಷಿಸು ಮುದದೊ ।
ಳೀ ಮಹಾಭದ್ರ ಗುರುಬಸವಲಿಂಗ

—ಗುರುಬಸವ ಕವಿ.

ನಿರತ ನಿರ್ಮಳಚಿತ್ತ ವಡೆದೀಶ್ವರ ಧ್ಯಾನಿ ।
ಹರಶಾಂತನೇ ಕೈಕ ಲಿಂಗಾನು ಸಂಧಾನಿ ।
ಭರಿತ ಪರಮಾನಂದ ಮೋಕ್ಷ ಸಂಪದ್ಧಾನಿ ವೀರಶೈವಾಭಿಮಾನೀ ॥
ಅರಿವಿಕಾರಗಳಂಟದ ಸಮಾಧಾನಿ ।
ಶರಣ ಸನ್ನಿಹಿತಸ್ಥಲದ ಸಹಜ ಸುಮ್ಮಾನಿ ।
ಕರುಣಿ ಮದ್ಗುರು ಶಿವಜ್ಞಾನಿ ಬಸವೇಶ್ವರನ ಚರಣಕಭಿವಂದಿಸುವೆನು ॥

—ಗುರುಲಿಂಗವಿಭು.

ಆದಿಯೊಳು ಶಿವನ ವಾಹನವಾಗಿ ಮುನಿ ಪತಿಶಿ ।
ಲಾದ ಸಂಭವನಾಗಿ ಪರಮ ಶಿವಧರ್ಮವನು ।
ಮೇದಿನಿಯ ಮೇಲುಂಟುಮಾಡಿ ಬಳಿಕಿಳೆಯೊಳಗೆ
ಮಂಡಿಗೆಯ ಮಾದರಸ ॥
ಮಾದಲಾಂಬಿಕೆಯುರ ಪವಿತ್ರ ಗರ್ಭದೊಳುದಯ ।
ವಾದಧಿಕ ವೀರಶೈವಾಚಾರ್ಯ ಬಸವದಂ ।
ಡಾಧೀಶನೆನ್ನ ನೆನಹಿನ ಕೊನೆಯೊಳಿಂಬು ಗೊಂಡಿಗೆ
ಸತತಾನಂದವ ॥

—ಚತುರ್ಮುಖ ಬೊಮ್ಮರಸ.




ಕಾಯದೊಳು ಗುರುಲಿಂಗ ಜಂಗವು ।
ದಾಯಕವನರಿಯಲ್ಕೆ ಸುಲಭೋ ।
ಪಾಯದಿಂದಿರಿಟ್ಟು ಬಾಹ್ಯ ಸ್ಥಲಕೆ ಕುರುಹಾಗಿ ॥
ದಾಯದೋರಿ ಸಮಸ್ತ ಭಕ್ತನಿ ।
ಕಾಯವನು ಪಾವನವ ಮಾಡಿದ ।
ರಾಯಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ ॥

— ಚಾಮರಸ.

ಬಸವನಾಮಂ ದೋಷತಿಮಿರಾತುಳಾರ್ಯಮಂ ।
ಬಸವನಾಮಂದೋಷ ವನಧಿ ಬಡವಾನಳಂ ।
ಬಸವನಾಮಂ ಕಾಲಭೂಜಲಿಂಭವ ಕವಳಿ ಮತ್ತೇಭಸರತತ್ತ್ವವು ॥
ಬಸವನಾಮಂ ಕಾಮ ಕಾಂತಾರ ಪ್ರಳಯಾಗ್ನಿ ।
ಬಸವನಾಮಂ ಶರಣ ಜನದ ಮನವಭಿರಾಮ ।
ಬಸವನಾಮಂ ಮಂತ್ರ ಪಟಲದ ಲಲಾಮವೆಂದಾನು
ಬಸವನನುತಿಸುವೆಂ ॥

—ಚಿಕ್ಕ ನಂಜಾರ್ಯ.

ಬಸವನ ನೆನೆ ಮನವೆ ಬಸವನನು ನಾಲಿಗೆಯೆ ।
ಬಸವನ ಪದವ ಪೂಜೆ ಮಾಡೈ ಕರವೆ ।
ಬಸವ ಗುರುಲಿಂಗ ಚರವೆಂದು " —ಚೆನ್ನಮಲ್ಲಿದೇವ

ಬಸವ ಬಸವ ಪ್ರಮಥವರ್ಯ ಶಂಕರಪ್ರಿಯಾ ॥
ಬಸವ ಭಕ್ತಪಾಲದೇವ । ಅಸಮಶಕ್ತಿ ಯುಕ್ತನಿಯತ ।
ರಸಯ ನೀನು ಕರುಣದಿಂದೆ ಲೊಸೆದುಪಾಲಿಸೈ ॥
ಭಿನ್ನ ಭಾವಗಳನು ಮುರಿದೆ ಅನ್ಯೆಯುಗಳ ಕೊರಳಹಂದೆ ।
ಖಿನ್ನ ಜನರ ಕಷ್ಟವನ್ನು ಮುನ್ನೆಹರಿಸಿದೈ ॥

— ಜೀರಗೆ ಬಸವಲಿಂಗಪ್ಪ.

ಐರಾವಣ ಮರಾಳ ಮಾರುತಾಹಾರವರ ।
ಶಾರದಾಮರ್ತ್ಯ ಮಘ ನಾರದ ಸ್ಫಟಿಕ ಕುಂ ।
ದೋರು ಮಂದಾಕಿನೀಕ್ಷೀರವಾರಾಕರ ಪಟೀರಕಾರದನೀರದಾ ॥

ಹಾರನೀಹಾರ ಕರ್ಪೂರಡಿಂಟೀರವುಂ ।
ದಾರ ಶಶಿತಾರ ಸುಸ್ಮೇರ ನವಹೀರಸ ।
ತ್ತಾರಾದಿ ಕೌರಧಿಕಾರ ಕೀರ್ತಿ ಪ್ರಭಾಪೂರವಾಂತ್ರಾಹಿ ಬಸವಾ ॥

—ಪದ್ಮಣಾಂಕ.

ಹಸುಳೆಯು ನನ್ನ ರಕ್ಷಿಸು ವುದಾರಯು ದೆನ್ನವನೀಕನೆಂದು ವು ।
ನ್ನಿಸುವುದು ನಿಮ್ಮ ಡಿಂಗರಿಗ ನಿಮ್ಮ ಪ್ರಸಾದಿಯು ನಿಮ್ಮತೂತ್ತನೇ ।
ಕಸಿಗತಿಯುಂಟು ಭಕ್ತಿ ನಿನುಂ ಕನ್ನಡಭಾಷನುರೆಂತು ಷಡ್ಗುಣ ।
ಶ್ವಸನ ಪುರಾತನಾತ್ಮಾಬಸವಾಬಸವಾ ವೃಷಾಧಿಪಾ ॥

—ಪಾಲ್ಕುರಿಕೆ ಸೋಮನಾಥ.

ಕ್ರೂರ ಪಶು ಜನ್ಮದಿಂದಕಲ್ಪಬ್ಜಸಂಭವ ಕು ।
ಮಾರನಂ ಕಾರುಣ್ಯದಿಂ ಪೊರೆದು ವೋದದಿಂ ।
ಯೋರಂತೆ ಮುನಿಪತಿಶಿಲಾದ ನಾನಂದವಾರಾಶಿಯುಂ ಪರ್ಚಿಸುತ್ತೆ ॥
ವೀರಭದ್ರ ಪ್ರಮುಖಗಣ ಕಾಹಿನೆನಿಸಿಮುದ ।
ನಾರಿವಿಮುಖ ದ್ರೋಹಿದಕ್ಷನನುಪೇಕ್ಷಿಸಿದ ।
ಕಾರಣ ಮಹಿಗೆ ಬಂದ ಬಸವೇಶಸುಗುಣಮಣಿಗಣ ಕೋಶವಾಲಿಸೆಮ್ಮ ॥

—ಬಸವಲಿಂಗ ಕವಿ.

ಬಸವರಾಜನನಾವಗಂ ಕೀ ।
ರ್ತಿಸುವವಂ ಭವ ಬಂಧನುಂ ಛೇ ।
ದಿಸುವುದರಿಂದೇ ಬಸವನೇಂ ಜಾವಳನೇ ಭಕ್ತರೊಳು ।
ಅಸಮನೇತ್ರನೆ ಬಸವರೂಪದಿ ।
ಎಸೆವನಲ್ಲದೆ ಬಸವನಿಳೆಗುದ ।
ಯಿಸಿದ ಮಾತ್ರದೊಳವನ ನೀನರಜಾತ ನೆನಲಹುದೇ ॥

— ಭೀಮಕವಿ.

ಪರತರ ಬ್ರಹ್ಮ ಸ್ವರೂಪವೆಂದೆನಿಸ ಶಂ ।
ಕರನ ವಾಹನವಾಗಿ ಮುನಿಪತಿಶಿಲಾದನುರು ।
ತರ ಗರ್ಭದೊಳ್ ಜನಿಸಿ ಕೃತಯುಗದೆ ವರ್ತಿಸುವನಾಲ್ಕು ಪಾದದಧ
ರ್ಮವಂ ॥

ಧರೆಯುಳಿಯೆ ಕಲಿಯುಗದೊಳಾಚರಿಸಿ ಲೋಕವಂ ।
ಪೊರೆದು ವರವೀರಶೈವವನೆಲೆಗೊಳಿಸಿದ ಬಸ ।
ವರಸನೆ ಮಗನವರತಶಿವಭಕ್ತಿಯಂಕೊಟ್ಟು ರಕ್ಷಿಸುಗೆ ಕರುಣದಿಂ ॥
— ಮರಿತೋಂಟದಾರ್ಯ

ಜಯಬಸವೇಶ ಭಕ್ತಜನ ಭಾಗ್ಯಭೋದಯ ಪುರಶೈವನಿ ।
ರ್ಣಯ ಪರಮಾವತಾರ ಶರಣಾಗತ ರಕ್ಷಕಚಿದ್ಘನ ಪ್ರಭಾ ॥
ಮಯ ಜಗದಾದಿದೇಶಸ ಪುರಾತನ ಪುಂಗವಶಾಂಭವೈ ಪುರಂ ।
ಶಯಜಯಸೋಮನಾಥ ಜಯದೇವ ಜಯ ವಿರತಂಶಿವಾಧವಾ ॥
— ಮೊಗ್ಗೆಮಾಯಿದೇವ

ಪಸುವೆನಿಸದ ಮಲಸುರಧೇನು ಮರವೆಂದೆನಿಸ ।
ದಸಮ ಕಲ್ಪದ್ರುಮಂ ಕಲ್ಲೆನಿಸಿಕೊಳ್ಳದಿಹ ।
ಮಿಸುಪಚಿಂತಾರತ್ನ ಖಣಿಯೆನಿಸದಿಹ ಮಹಾಪರುಷತೃಣವೆನಿಸಿಕೊಳದ॥
ಪೊಸಮರುಜವಣಿ ವನಂ ನುಡಿ ನೋಟ ನಡೆಕೈಗ ।
ಳೆಸೆವೃತಿಹ ಪಂಚ ಪರುಷಮದಾಗಿ ರಂಜಿಸುವ ।
ಬಸವದಂಡಾಧೀಶಶರಣಮತ್ಪ್ರಾಣೇಶ ಭವನಾಶಭಕ್ತಿಕೋಶ ॥
— ವಿರೂಪಾಕ್ಷ ಪಂಡಿತ

ಮಣಿಂಪೊರ್ದದ ಮೈಮೆಯಿಂದ ಮಳಸರ್ವಜ್ಞತ್ವದಿಂದಂಗಣೇ ।
ಶ್ವರನಾಗಿಪ್ಪುದರಿಂದಯೋ ನಿಜನೆನಪ್ಪೀ ದಿವ್ಯಸಾಮರ್ಥ್ಯದಿಂ ।
ಹರನಂತಿರ್ದ ರರಿಂದ್ವಿತೀಯ ಶಿವದೆಂಬೀದಾವುದಿಂದೋಪ್ಪುವಾ ।
ವರನಂದೀಶ್ವರನೀ ವನಕ್ಕೆ ಮಗೆ ಚಿತ್ರಾನಂದ ಸಂದೋಹಮಂ ।
— ವೀರಭದ್ರಕವಿ

ಶರಣರ ಕೈಪಿಡಿಸ್ಫುರದನಾದಿಯ ಜಂಗಮ ಭಕ್ತನೀಶಭ ।
ಕ್ತರ ಸುರಧೇನುಶಂಕರನ ನಚ್ಚಿನವಾಹನ ಮನ್ಯವಾದಿ ।
ವಾರ್ಧರ ಚಯಚಂಡಮಾರುತನಿಳಾತಳ ಪಾವನರುದ್ರಮೂರ್ತಿವಿ ।
ಸ್ಫುರಿತ ಕಳಾಪ್ರಪೂರ್ತಿ ಬಸವಂಭವ ಸಾಗರ ಕುಂಭಸಂಭವಂ ॥
— ಷಡಕ್ಷರದೇವ

ಬಸವ ರಾಜನು ಪುಟ್ಟಿ ಬಸವ ತತ್ವವು ಬೀರಿ ।
ಬಸವನಾ ಮುದ್ರೆ ಮೆರೆ ದಾವುಧರೆಯವಗೆ ।
ವಶವಾಗದಿಹುದೇ ಸರ್ವಜ್ಞ ॥

—ಸರ್ವಜ್ಞ.

ಭೂತದೇಹಿಕನಲ್ಲದಿಹ ಭೂತನಾಥ ತಾ ।
ನಾತ ಜನನಂ ಮರಣವಿಲ್ಲದಿಹ ಜನಿತ ತಾ ।
ನಾತ ನಿಜನಾಮವಿಲ್ಲದ ನಾಮನಾತ ಘನಸೀಮೆಯಿಲ್ಲದಸೀಮನು॥
ಖ್ಯಾತಿಯಿಲ್ಲದ ಖ್ಯಾತ ಕುಲವಿಲ್ಲದಾ ಕುಲಜ ।
ಭೀತಿಯಿಲ್ಲದ ಭೀತರೂಪಿಲ್ಲದಿಹ ರೂಪ ।
ನಾತನಾನಂದಮಯ ಶೂನ್ಯವಿಲ್ಲದ ಶೂನ್ಯ ಪ್ರಳಯವಿಲ್ಲಪ್ರತಿಮನು

— ಸಿಂಗಿರಾಜ

ಪರಸಮಯಂ ವಿವರ್ಧಿಸಿ ಶಿವಾಗಮಧರ್ಮಮಡಂಗಿ ಪೋದುದಂ ।
ಹರನರಿದೆಯ್ದಿಸಲ್ ಧರೆಗೆ ವಂದು ಪವಾಡಮನಂದನೇಕಮಂ ।
ವಿಂಚಿಸಿ ಯಾವನುದ್ಧರಿಸಿದಂ ಶಿವಭಕ್ತಿಯನಾತ್ಮ ಮುಕ್ತಿಯಂ ।
ವರಗುರುವಾತನಾದಿ ವೃಷಭಂ ಬಸವೇಶ್ವರನೀಗೆ ಭಕ್ತಿಯಿಂ ॥

— ಸುರಂಗ ಕವಿ

ಬಸವನ ಮಾತೆ ಮಾತು, ಬಸವಣ್ಣನ ಭಕ್ತಿಯೋಜೆ ಯೋಜೆ ಕೇಳ್ ।
ಬಸವನ ರೀತಿ ರೀತೆ ಬಸವಣ್ಣನ ಕಿಂಕರ ವೃತ್ತಿ ವೃತ್ತಿಮೇಣ್ ।
ಬಸವನ ಬಟ್ಟೆ ಬಟ್ಟೆ, ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ ।
ಬಸವನ ನಿಷ್ಠೆ ನಿಷ್ಠೆ, ಬಸವಣ್ಣನ ನೇಮವೆ ನೇಮವುರ್ವಿಯೊಳ್ ।

— ಹರಿಹರ ಮಹಾಕವಿ.

ಬಸವಣ್ಣ ನೀವು ಮರ್ತ್ಯಕ್ಕೆ ಬಂದು ನಿಂತರೆ, ಭಕ್ತಿಯ ಬೆಳವಿಗೆ ದೆಸೆ ದೆಸೆಗೆಲ್ಲ ಪಸರಿಸಿತ್ತಲ್ಲಾ. ಅಯ್ಯಾ, ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲ ನಿಮ್ಮ ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರು ಅಣ್ಣಾ ? ಶಶಿಧರನಟ್ಟಿದ ಮಣಿಹ ಪೂರೈಸಿತೆಂದು ನೀವು ಲಿಂಗೈಕ್ಯನಾದೊಡೆ, ನಿಮ್ಮೊಡನೆ ಭಕ್ತಿ ಹೋಯಿತಯ್ಯ. ಸದಾಚಾರ ಹೋಯಿತ್ತಯ್ಯ. ನಿಮ್ಮೊಡನೆ ಅಸಂಖ್ಯಾತ ಮಹಾ ಗಣಂಗಳು ಹೋದರಣ್ಣ. ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತಲ್ಲ ಬಸವಣ. ಎನ್ನನೊಯ್ಯದೆ

ನಮ್ಮ ಬಸವಣ್ಣನು ಜಗಹಿತಾರ್ಥವಾಗಿ ಮರ್ತ್ಯಕ್ಕೆ ಅವತರಿಸಿ ವೀರಶೈವ ಮಾರ್ಗವನರುಪುವುದಕ್ಕೆ ಬಾವನ್ನ ವಿವರವನೊಳಕೊಂಡು ಚರಿಸಿದನದೆಂತೆಂದೊಡೆ, ಗುರುಕಾರುಣ್ಯವೇದ್ಯನು. ವಿಭೂತಿ ರುದ್ರಾಕ್ಷಧಾರಕನು. ಪಂಚಾಕ್ಷರೀ ಭಾಷಾ ಸಮೇತನು. ಲಿಂಗಾಂಗ ಸಂಬಂಧಿ. ನಿತ್ಯ ಲಿಂಗಾರ್ಚಕನು. ಅರ್ಪಿತದಲ್ಲಿ ಅವಧಾನಿ. ಪಾದೋದಕ ಪ್ರಸಾದ ಗ್ರಾಹಕನು. ಗುರುಭಕ್ತಿ ಸಂಪನ್ನನು. ಏಕಲಿಂಗ ನಿಷ್ಠಾಪರನು. ಚರಲಿಂಗ ಲೋಲುಪನು. ಶರಣ ಸಂಗಮೇಶ್ವರನು. ತ್ರಿವಿಧಕಾಯಕನು. ತ್ರಿಕರಣ ಶುದ್ಧನು. ತ್ರಿವಿಧ ಲಿಂಗಾಂಗ ಸಂಬಂಧಿ. ಅನ್ಯ ದೈವ ಸ್ಮರಣೆಯ ಹೊದ್ದ. ಭವಿಯ ಸಂಗವ ಮಾಡ. ಭವಿಪಾಕವ ಮುಟ್ಟ. ಪರಸ್ತ್ರೀಯರ ಬೆರಸ. ಪರಧನವನೊಲ್ಲ. ಪರನಿಂದೆಯನಾಡ. ಅನೃತವ ನುಡಿಯ. ತಾಮಸ ಭಕ್ತರ ಸಂಗವ ಮಾಡ. ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನ ಮುಂತಾಗಿ ಭೋಗಿಸುವ. ಜಂಗಮ ನಿಂದೆಯ ಸೈರಿಸ. ಪ್ರಸಾದ ನಿಂದೆಯ ಕೇಳ. ಅನ್ಯರನಾಸೆಗೆಯ್ಯ. ಪಾತ್ರ ಅಪಾತ್ರನರಿವ. ಚತುರ್ವಿಧ ಪದವಿಯ ಹಾರ. ಅರಿಷಡ್ವರ್ಗಕೆ ಅಳುಕ. ಕುಲಾದಿ ಮದಂಗಳ ಬಗೆಗೊಳ್ಳ. ದ್ವೈತಾದ್ವೈತವ ನುಡಿವನಲ್ಲ. ಸಂಕಲ್ಪ ವಿಕಲ್ಪವ ಮಾಡುವವನಲ್ಲ. ಕಾಲೋಚಿತವ ಬಲ್ಲ. ಕ್ರಮಯುಕ್ತನಾಗಿ ಷಟ್ಸ್ಥಲ ಭರಿತ. ಸರ್ವಾಂಗಲಿಂಗಿ. ದಾಸೋಹ ಸಂಪನ್ನ. ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚೆನ್ನಮಲ್ಲಿಕಾರ್ಜುನಾ.

— ಅಕ್ಕ ಮಹಾದೇವಿ

ಹಮ್ಮು ಬಿಮ್ಮುವಳಿದ ಅನುವರಿತ ಶಿವ ನೀನು
ಎನ್ನ ಕರಸ್ಥಳದ ಕಳೆ ನೀನು.
ಎನ್ನ ಮನೋಮಧ್ಯದ ಸ್ವಯಂ ಜ್ಯೋತಿ ನೀನು.
ಅಮಲೇಶ್ವರ ಲಿಂಗದ ಅನುವಿನ ಕಳೆ ನೀನು ಸಂಗನ ಬಸವಣ್ಣಾ.

— ಆಯ್ದಕ್ಕಿ ಮಾರಯ್ಯ

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದವರೆಲ್ಲ ಬಸವಣ್ಣನಂತಹರೇ? ।

ಇನ್ನು ಭೂಲೋಕದವರೆಲ್ಲರು ಬಸವಣ್ಣನಂತಹರೇ ? |
ದುರಿತ ನಿವಾರಣ ಕೂಡಲಚೆನ್ನಸಂಗಾ ನಿಮ್ಮ ಶರಣ ಬಸವಣ್ಣ ನಿಂಕಹೆ
ಮಹಾಮಹಿಮ ನೋಡಯ್ಯ ॥

— ಚನ್ನಬಸವೇಶ್ವರ

ಜಯ ಜಯಬಸವಣ್ಣನ ಭಕ್ತಿಗೆ
ಜಯಜಯ ಬಸವಣ್ಣನ ಶಕ್ತಿಗೆ
ಜಯಜಯ ಬಸವಣ್ಣನ ವಿರಕ್ತಿಗೆ
ಜಯಜಯ ಜಯತು ಜಯ
ಬಸವಣ್ಣನ ನೆನೆವ ಮಾನವರೆಲ್ಲರ್ಗೆ
ಬಸವಲಿಂಗಪ್ರಿಯಕಟ್ಟಿಯ ಬಸವೇಶ್ವರಾ

— ಜೀರಗೆಕಟ್ಟಿ ಬಸವಪ್ಪ

ಬಸವಣ್ಣ ನಿನ್ನ ಕಂಡು ಕಂಡು ಎನ್ನ ತನುಬಯಲಾಯಿತ್ತು
ಬಸವಣ್ಣ ನಿನ್ನ ಮುಟ್ಟಿ ನಿನ್ನ ಮುಟ್ಟಿ ಎನ್ನ ಕ್ರಿಯೆಬಯಲಾಯಿತ್ತು
ಬಸವಣ್ಣ ನಿನ್ನ ನೆನೆನೆನೆದು ಎನ್ನ ಮನ ಬಯಲಾಯಿತ್ತು
ಬಸವಣ್ಣ ನಿನ್ನ ಮಹಾನುಭಾವವ ಕೇಳಿಕೇಳಿ ಎನ್ನ ಭವನಾಸ್ತಿ
ಯಾಯಿತ್ತು
ನಮ್ಮ ಗುಹೇಶ್ವರಲಿಂಗದೊಳಗೆ ನೀನಜಾತನೆಂಬುದನೆಲೆಮಾಡಿ
ಭವಪಾಶಂಗಳ ಹರಿದಪ್ಪನಾಗಿ ನಿನ್ನ ಸನ್ನಿಧಿಯಿಂದ ಆನುಬದುಕಿದೆನು

— ಪ್ರಭುದೇವ

ಜಯ ಜಯತ್ರಾಹಿ ತ್ರಾಹಿ ! ಗರ್ಭದೊಳಗಣ ಶಿಶುವು ನವಮಾಸನವ
ಹಾರೈಸಿಕೊಂಡಿರ್ದಂತೆ ಇದ್ದೆನಯ್ಯ ! ಎನ್ನ ಜನ್ಮಸಫಲವಾಯಿತ್ತು
ಶುದ್ಧಸಿದ್ಧಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನದೇವಯ್ಯ
ಬಸವರಾಜ ದೇವರದಯದಿಂದ ಪ್ರಭುದೇವರ ಶ್ರೀ ಮೂರ್ತಿಯ ಕಂಡು
ಬದುಕಿದೆನು ನಿಮ್ಮ ಧರ್ಮ ನಿಮ್ಮ ಧರ್ಮ ಶರಣುಶರಣಾರ್ಥಿ

— ಮರುಳಶಂಕರದೇವ

ಮಾರಾರಿಯ ಬೆಸನದಿಂದ ಬಸವಣ್ಣ ಧಾರುಣಿಗೆ ಅವತರಿಸಿ ಸದಾ
ಸದ್ಭಕ್ತಿಯ ತೋರಿದನು ಶಿವಶರಣರೆಲ್ಲರಿಗೆ ಭಕ್ತಿಯಸಂಚವ

ಮುಕ್ತಿಯುಭೇದವನುಪದೇಶಿಸಿದನು ನಿತ್ಯಲಿಂಗಾರ್ಚನೆಯೊಳಗೆ
ಎನ್ನನಿರಿಸಿ ರಕ್ಷಿಸಿದಾತ ನಮ್ಮ ಬಸವಣ್ಣ ಕಾಣಾ ಕಲಿದೇವರ ದೇವಾ।
— ಮಾಚಿದೇವ

ಎನ್ನ ಅರಿವು ಮರವು ಬಸವಂಗರ್ಪಿತ
ಎನ್ನ ಆಚಾರ ವಿಚಾರ ಬಸವಂಗರ್ಪಿತ
ಎನ್ನ ಭಾವ ನಿರ್ಭಾವ ಬಸವಂಗರ್ಪಿತ
ಎನ್ನ ಅಂತರಂಗ ಬಹಿರಂಗ ಬಸವಂಗರ್ಪಿತ
ನೀನಾನೆಂಬುದು ಬಸವಂಗರ್ಪಿತ
ಇಂತು ಬಸವಣ್ಣಂಗೆ ಎನ್ನ ನಿವೇದಿಸಿದೆನಾಗಿ ಉಭಯುವೆಂಬುದು ಇಲ್ಲವಾದೆ
ನಿರಾಲಂಬದಲ್ಲಿ ನಿಜನಿವಾಸಿಯಾಗಿರ್ದೆನಯ್ಯ ನಿಃಕಳಂಕ ಮಲ್ಲಿಕಾರ್ಜುನಾ
— ಮೋಳಿಗೆ ಮಾರಯ್ಯ

ಬಸವ ಜಗದಾದಿ ಬೀಜ, ಬಸವ ಆತನ ಸುರಭೂಜ.
ಬಸವಾ, ಬಸವಾ, ಬಸವಾ ಎಂಬ ನಾಮ ಸಾಲದೇ ?
ಬಸವ ಭವರೋಗ ವೈದ್ಯ; ಬಸವ ವೇದಾಂತ ವೈದ್ಯ.
ಬಸವಾ, ಬಸವಾ, ಬಸವಾ ಎಂಬುಲಿ ಸಾಲದೇ ?
ಬಸವ ಕರುಣಾಮೃತ ಸಿಂಧು; ಬಸವ ಪರಮ ಬಂಧು.
ಬಸವ ವರದ ಸೋಮನಾಥ ನೀನೇ.
ಬಸವಾ ಬಸವಾ ಬಸವಾ ಶರಣೆಂದರೆ ಸಾಲದೇ ?
— ವಚನಕಾರ

ಭಕ್ತಿರೂಪನು ಬಸವ, ನಿತ್ಯರೂಪನು ಬಸವ, ಮತ್ತಾನಂದ ಸ್ವರೂಪನು ಬಸವ. ಸತ್‌ಸ್ವರೂಪನು ಬಸವ, ಚಿದ್ರೂಪನು ಬಸವ, ಎತ್ತೆತ್ತ ನೋಡಿದರೆ ಅತ್ತತ್ತ ಪರಿಪೂರ್ಣನಾಗಿಪ್ಪನು. ಬಸವಣ್ಣನಿಂದ ನಿತ್ಯ ಸುಖಿಯಾದೆನಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

— ಸಿದ್ಧರಾಮೇಶ್ವರ

ಎಲ್ಲ ಪುರಾತನರ ಶ್ರೀಪಾದಕ್ಕೆ ಇಲ್ಲಿದ್ದು ಶರಣೆಂದೊಡೆ ಸಾಲದೇ ? ಬಸವಾ, ಬಸವಪ್ಪ, ಬಸವಯ್ಯ ಶರಣೆಂದೊಡೆ ಸಾಲದೇ ? ಎಲ್ಲರ ಹೃದಯದಲ್ಲಿ ಜ್ಯೋತಿಯಂತೆ ಬೆಳಗುತ್ತಿಪ್ಪ ಮಹಾಮಹಿಮ ನೀನಾಗಿ ಎನಗಿದೇ ದಿವ್ಯ ಮಂತ್ರ. ಬಸವ ಪ್ರಿಯ ಕೂಡಲ ಚೆನ್ನಸಂಗಯ್ಯನಲ್ಲಿ ಬಸವ ಬಸವ ಬಸವಾ ಎಂದರೆ ಸಾಲದೇ ?

— ಹಡಪದ ಅಪ್ಪಣ್ಣ

ಬಸವಣ್ಣನವರು ಮಹಾಪುರುಷರೆಂಬುದಕ್ಕೆ ಯಾರಸಾಕ್ಷಿಯೂ ಬೇಡ. ಅವರ ಚರಿತ್ರೆಯೇ ಅದಕ್ಕೆ ಸಾಕ್ಷಿ. ಬಸವಣ್ಣನವರು ಭಾಷಾಪಂಡಿತರಲ್ಲ ಭಾಷಾಜನಕರು. ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರವತ್ತಾಗಬಹುದೆಂಬುದನ್ನು ತೋರಿಸುತ್ತವೆ. ಅವರ ಹೃದಯವು ಕರಗಿ ನೀರಾಗಿ ಅದು ವಚನಗಳ ರೂಪದಲ್ಲಿ ಹರಿದಿದೆ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ. ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ಅವರ ಆಚಾರದ ಕಚ್ಚು ಅಲ್ಲಿ ಕಾಣುತ್ತದೆ. ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ.

— ಆಲೂರು ವೆಂಕಟರಾವ.

ಬಸವಣ್ಣನವರು ಕ್ರಾಂತಿಪುರುಷರು, ಶಿವಪುರುಷರು, ಭಕ್ತಿಭಂಡಾರಿಗಳು. ಎಲ್ಲಕ್ಕೂ ಹೆಚ್ಚಾಗಿ ಉಜ್ವಲ ಸಾಧಕರು. ಅವರ ಜೀವನ ಪ್ರಗತಿಯು ಸಾಧನೆಯ ಮೂಲ ಸೂತ್ರವನ್ನೇ ಅರಸಿದೆ. ಬಸವಣ್ಣನವರದು ಅಧ್ಯಾತ್ಮಿಕ ಜಗತ್ತು. ವೇದಗಳಿಗೂ ವಾದಗಳಿಗೂ ದೂರವಾದ ಬಯಲು. ಹರಿದು ಕಿರಿದನ್ನೆಣಿಸದೆ ಸರ್ವ ಸ್ವತಂತ್ರ ಶಿವನು. ತಮ್ಮ ಅಜೇಯ ಶಕ್ತಿಯನ್ನು ಸ್ಥಾಪಿಸಿ, ಲೋಕಕ್ಕೆ ಒಂದು ಮಾದರಿಯನ್ನು ಹಾಕಿ ಕೊಟ್ಟರು.

— ಅ. ನ. ಕೃಷ್ಣರಾವ

ಭಕ್ತಿಭಾಂಡಾರಿ ಬಸವಣ್ಣನ ಬೆಳಗು ವೀರಶೈವ ಸಮಾಜವೊಂದನ್ನೇ ಅಲ್ಲ, ವಿಶ್ವವನ್ನೇ ಹರಡಿ ಹೊಂದುಳಿದಿದಾಗಿದೆ. ಆತನ ಜೀವನ ವ್ಯಕ್ತಿ ಜೀವನವಲ್ಲ! ಭಾರತದ ಸಂಜೀವನ. ಆತನ ವಚನ ಹರಟೆಯ ಮಾತಲ್ಲ.

ಅಧ್ಯಾತ್ಮದ ನಂದನವನ. ಕನ್ನಡದ ನಂದನ ವನ. ಬಸವಣ್ಣನ ದಯಾಮಯ ಜೀವನವು ಭಾರತಕ್ಕೆ ಲೌಕಿಕ ಅಧ್ಯಾತ್ಮಿಕ ಸುಖಗಳೆರಡನ್ನೂ ಸೂರೆಗೊಳಿಸಿದೆ.

—ಚೆನ್ನಬಸವರಾಜ ದೇಶಿಕೇಂದ್ರಸ್ವಾಮಿ

ರಾವಣನನ್ನು ಕೊಂದು ವಿಭೀಷಣನಿಗೆ ಪಟ್ಟಕಟ್ಟುವುದಕ್ಕಿಂತ ರಾವಣನನ್ನೇ ವಿಭೀಷಣನನ್ನಾಗಿ ಮಾರ್ಪಡಿಸುವ ಧೋರಣ ಬಸವಣ್ಣನವರದು.

— ಚಿಂತಾಮಣಿ.

ಶ್ರೀ ಬಸವಣ್ಣನವರು ಸರಿ ಸುಮಾರು ೧೨೦೮ ವಚನಗಳನ್ನು ಹಾಡಿ ೩೫೦ ಶರಣ ಶರಣೆಯರಿಂದ ಎರಡೆಂಬತ್ತು ಕೋಟಿ ವಚನಗಳನ್ನು ಹಾಡಿಸಿದ್ದಾರೆ. ಭರತಖಂಡದ ಜೀವಜ್ಯೋತಿಗಳಲ್ಲಿ ಶ್ರೀ ಬಸವಣ್ಣನವರು ತೇಜಃಪುಂಜರಾದ ಮಹಾಪುರುಷರಾಗಿದ್ದಾರೆ. ಅವರು ಅಷ್ಟಾವರಣಗಳಲ್ಲಿ ಚೈತನ್ಯವನ್ನು ಹುಟ್ಟಿಸಿ, ಷಟ್‌ಸ್ಥಳಗಳ ಪ್ರಚಾರ ಮಾಡಿಸಿ, ಪಂಚಾಚಾರಗಳನ್ನಳವಡಿಸಿ, ಅಹಿಂಸಾ ತತ್ವವನ್ನು ಪ್ರಸರಿಸಿ, ಕನ್ನಡ ಭಾಷೆಯನ್ನುದ್ಧರಿಸಿ, ಸತ್ಯ ಸಾಮ್ರಾಜ್ಯದ ಸಾರ್ವಭೌಮನೆನಿಸಿ, ನೀತಿಯ ನೆಲೆಗಟ್ಟನ್ನು ಸ್ಥಿರಗೊಳಿಸಿ, ದಕ್ಷಿಣ ಹಿಂದೂಸ್ಥಾನದಲ್ಲೂ ಧರ್ಮದ ಕಾಯಕಗಳನ್ನು ಪ್ರಸಾರಮಾಡಿಸಿ, ನುಡಿಯಂತೆ ನಡೆಯತಕ್ಕವರಲ್ಲಿ ಅಗ್ರೇಸರನೆನಿಸಿ, ರಾಜಕಾರಣ ಧರ್ಮಗಳೆರಡರಲ್ಲಿಯೂ ಪಟುತ್ವವನ್ನು ತೋರಿಸಿ, ಸಾಮಾಜಿಕ ಕ್ರಾಂತಿಯ ಅಡಿಗಲ್ಲನ್ನಿರಿಸಿ, ಸಾಮ್ಯವಾದವನ್ನು ವೀರಶೈವರಲ್ಲಿ ಧೃಡಪಡಿಸಿ, ಬೇಡಿದವಂಗೆ ಬೇಡಿದ ಪದಾರ್ಥಗಳನ್ನು ಕೊಟ್ಟು ಇಲ್ಲೆನ್ನಡ ಚಳರೆನಿಸಿ ಐತಿಹಾಸಿಕ, ರಾಜಕೀಯ, ಧಾರ್ಮಿಕ ಮಹಾಪುರುಷರೆನ್ನಿಸಿಕೊಂಡರೋ ಅಂತಹ ಬಸವಣ್ಣನವರಲ್ಲಿ ಜನಕ ಮಹಾರಾಜನ ವೈರಾಗ್ಯವನ್ನೂ, ಶ್ರೀರಾಮನ ನ್ಯಾಯನಿಷ್ಠೆಯನ್ನೂ, ಸಾಕ್ರಟೀಸನ ಸತ್ಯಪ್ರೇಮವನ್ನೂ, ಗೌತಮಬುದ್ಧನ ದಯಾಗುಣವನ್ನೂ, ಏಸುಕ್ರಿಸ್ತನ ದೀನ ವಾತ್ಸಲ್ಯವನ್ನೂ, ವರ್ಧಮಾನ ಸ್ವಾಮಿಯ ಅಹಿಂಸಾ ಗುಣವನ್ನೂ, ಶ್ರೀಕೃಷ್ಣನ ಅನಾಸಕ್ತಿ ಯೋಗವನ್ನೂ, ಶ್ರೀ ಶಂಕರಾಚಾರ್ಯರ ಆತ್ಮಜ್ಞಾನ ಸಂಪನ್ನತೆಯನ್ನೂ, ಕರ್ಣ ದಧೀಚಿ ಶಿಬಿಗಳ ದಾನ ಗುಣವನ್ನೂ ನಾವು ಕಾಣಬಹುದು.

— ಚಂದ್ರಶೇಖರಶಾಸ್ತ್ರಿ ವ್ಯಾಕರಣತೀರ್ಥ

ಶ್ರೀಬಸವೇಶ್ವರರು ಅನೇಕ ರೀತಿಯಿಂದ ದೊಡ್ಡವರಾದರು. ಹಿಂದಿನ ಆಚಾರ್ಯರು ಮುಗಿಸದೆ ಬಿಟ್ಟುದನ್ನು ಮುಗಿಸುವುದಕ್ಕಾಗಿಯೇ ಬಸವಣ್ಣನವರು ಬಂದಹಾಗಿತ್ತು.

— ಜಯರಾಮ ಎ. ಆರ್.

ಭರತಖಂಡದ ಈಗಿನ ಸಮಾಜ ಸುಧಾರಕರು ಬಸವನುಡಿಯನ್ನೇ ನುಡಿಯುತ್ತಲೂ, ಆತನ ಅಭಿಪ್ರಾಯವನ್ನೇ ಬೋಧಿಸುತ್ತಲೂ ಇದ್ದಾರೆ.

— ಜೇಮ್ಸ್ ಕ್ಯಾಂಬೆಲ್.

ಬಸವೇಶ್ವರರ ಅವತಾರ ಮಾನವನ ಉದ್ಧಾರ.

– ಜ್ಞಾನೋಪಾಸಕ

ಬಸವನು ಧರ್ಮಸ್ಥಾಪನೆಯನ್ನು ಮಾಡಿದನೆಂದರೆ ಅವನಾವ ಆಗಮಕ್ಕಾಗಲಿ, ಸೂತ್ರಕ್ಕಾಗಲಿ, ವೇದಕ್ಕಾಗಲಿ, ಭಾಷ್ಯವ ಬರೆದನೆ ? ಎಂದು ಆರೋ ಕೇಳಬಹುದು. ಆದರೆ ಬಸವನ ನಡೆನುಡಿಗಳು ಎಲ್ಲ ವೇದಾಗಮ ಸಿದ್ಧಾಂತ ರಹಸ್ಯಗಳ ತಿರುಳಾಗಿವೆ. ಬಸವನ ವಚನಗಳನ್ನು ಮಾತು ಮಾತಾದಿ ವೇದಾಗಮ ವಾಕ್ಯಗಳಿಗೆ ಹರಿಹಚ್ಚುವ ಕಾಲವಿದಲ್ಲ. ಬಸವನು ತೆರೆದ ಧರ್ಮ ಭಾಂಡಾರವು ವೇದಾಗಮ ಮೋಕ್ಷ ನಿಸತ್ತುಗಳ ರಹಸ್ಯಗಳನ್ನೆಲ್ಲ ಒಳಗೊಂಡಿದೆಯೆಂದು ಹೇಳಬಹುದು. ಬಸವನು ಪರಮವೈದಿಕನು.

— ಪಾವಟೆ ಸಿದ್ದರಾಮಪ್ಪ.

ಬಸವಣ್ಣನವರ ವಚನಗಳಲ್ಲಿ ಮಿಡಿಯುವ ಅವರವಾಣಿ ಅಮೃತವಾಣಿ; ಅಧರಕ್ಕೂ ಸಿಹಿ; ರಸಪರಿಪಾಕವೆಂದು ಅಮೃತ ಶಾಶ್ವತ ಸಾಹಿತ್ಯವೆಂದೂ ಅಮೃತ.

— ಶಿ. ಶಿ. ಬಸವನಾಳ.

ಜನಗಳ ಸಾಮಾಜಿಕ, ಧಾರ್ಮಿಕ ಸುಧಾರಣೆಗೋಸ್ಕರ ನಿರ್ದಾಕ್ಷಿಣ್ಯವಾಗಿ, ಸ್ಪಷ್ಟವಾಗಿ ನುಡಿದಿರುವ, ಬಸವೇಶ್ವರನ ಅಂತರಂಗಿಕ ಭಾವನೆಗಳಿಗೆ ಕೈಗನ್ನಡಿಯಂತಿರುವ ಆತನ ವಚನಗಳೇ ಆತನು ಮಹಾತ್ಮನೆಂಬುದನ್ನು ಜಗತ್ತಿಗೆ ಸಾರುತ್ತಿವೆ.

— ಮೈ. ಸು. ಬಸವಲಿಂಗಯ್ಯ

ನಮ್ಮ ತಾಯಿನಾಡಿನಲ್ಲಿ ಧಾರ್ಮಿಕ ಮತ್ತು ನೈತಿಕ ಉನ್ನತಿಗಾಗಿ ದುಡಿದ ಸರ್ವ ದೃಷ್ಟಿಯಿಂದಲೂ ಅಚ್ಚ ಕನ್ನಡಿಗನೆಂದರೆ ಅಂದಿನಿಂದ ಇಂದಿನ ವರೆಗೆ ಬಸವೇಶ್ವರನೊಬ್ಬನೇ. ಆತನನ್ನು ಮೀರಿಸಿದ, ಕೊನೆಗೆ ಆತನಿಗೆ ಸರಿ ಸಮಾನನಾದರೂ ಆದ. ಮಹಾ ವಿಭೂತಿಯು ಬೇರೆ ಯಾರಾದರೂ ಇರುವರೆಂದು ನಾನು ಧೈರ್ಯವಾಗಿ ಹೇಳಲಾರೆ.

—ಬೆನಗಲ್ ರಾಮರಾವ.

ಬಸವಣ್ಣನವರು ಹಿಂದೂ ಧರ್ಮದ ಏಳ್ಗೆಗಾಗಿ ಸದ್ಭಾವದ ಕಳೆಯ ಕಾಣಿಕೆಯನ್ನು ಸಲ್ಲಿಸಿರುತ್ತಾರೆ. ಶ್ರೀ ಮಹದೇವಸ್ವಾಮಿ ತತ್ವಜ್ಞಾನಕ್ಕಿಂತ ಧರ್ಮಾಚಾರದಲ್ಲಿ ಧರ್ಮಾಚಾರಕ್ಕಿಂತ ನೀತಿಮಾರ್ಗದ ಪ್ರಸ್ಥಾಪನೆಯಲ್ಲಿ, ನೀತಿಮಾರ್ಗಕ್ಕಿಂತ ಸಮಾಜ ಸುಧಾರಣೆಯಲ್ಲಿ ಬಸವಣ್ಣನು ಹೆಚ್ಚಿನ ಕರ್ತೃತ್ವ ವನ್ನೂ ಆತ್ಮವಿಶ್ವಾಸವನ್ನೂ, ದೂರ ದೃಷ್ಟಿಯನ್ನೂ ತೋರಿದನು. ಇದು ಅವನ ವ್ಯವಹಾರಿಕ ದೃಷ್ಟಿಯನ್ನೂ, ಜ್ಞಾನ ಕರ್ಮ ಭಕ್ತಿಗಳ ಸಮ್ಮೇಳನ ಮಾಡುವ ಶೈಲಿಯನ್ನೂ ವ್ಯಕ್ತಗೊಳಿಸುವುದು.

—ರಂ. ರಾ. ದಿವಾಕರ.

ಹಿಂದೂಸ್ಥಾನದ ಧಾರ್ಮಿಕ ಚರಿತ್ರೆಯಲ್ಲಿ ಮಹಾನು ಭಾವರಾದ ಶ್ರೀ ಬಸವಣ್ಣನವರು ಮಾಡಿರುವ ಮಹತ್ಕಾರ್ಯಗಳು ನನ್ನ ಮನಸ್ಸನ್ನು ಬಹಳವಾಗಿ ಸೆಳೆದುಕೊಂಡಿವೆ. ಪರಮಾತ್ಮನಲ್ಲಿ ಅತಿ ಸರಳವಾದ ಭಕ್ತಿಯನ್ನಿಡ ಬೇಕೆಂಬ ತೃಷ್ಣೆಯಿಂದ ಕೂಡಿದವರಾಗಿ ಲಿಂಗಧಾರಣೆಯೆಂಬ ಸಾರ್ವತ್ರಿಕ ಚಿಹ್ನೆಯಿಂದ ಭಗವದ್ಭಕ್ತರನೆಲ್ಲ ಪ್ರೇಮಾನು ಬಂಧಿಗಳನ್ನಾಗಿ ಮಾಡಿ, ಭೂಲೋಕದಲ್ಲಿ ಭಕ್ತಿ ಪ್ರಭುತ್ವವನ್ನು ಸ್ಥಾಪಿಸಬೇಕೆಂಬುದೇ ಅವರ ಮತವಾಗಿದ್ದಿತು.

—ವಾಡಿಯಾ. ಎ. ಆರ್.

ಭಕ್ತಿ ಭಾಂಡಾರಿ ಬಸವಣ್ಣನವರೆಂಬ ನಾಮಧೇಯದಿಂದ ಅಮರರಾದರು ಶ್ರೀ ಬಸವಣ್ಣನವರು. ವಚನಗಳ ರೂಪದ ಹೊಸ ಹೂ ಗಿಡವೊಂದನ್ನು ಕನ್ನಡ ಸಾಹಿತ್ಯದ ಉದ್ಯಾನದಲ್ಲಿ ನೆಡುವ, ಬೆಳೆಯಿಸಿದ ಪರಮೋಪಕಾರವು ಶ್ರೀ ಬಸವಣ್ಣನರದು. ಮಾನವ ಜನ್ಮವು ಸಾರ್ಥಕವಾಗಲು ಸಾಧಕವಾದ ಉದಾತ್ತ ತತ್ವಗಳನ್ನು ತಿಳಿಗನ್ನಡದಲ್ಲಿ ಜನ ಸಾಮಾನ್ಯರಿಗೂ ತಿಳಿಯುವಂತೆ ಉಪದೇಶಿಸಿದ ಪುಣ್ಯವು ಶ್ರೀ ಬಸವಣ್ಣನವರದು.

—ವೆಂಕಟರಾಮಯ್ಯ ಸಿ. ಕೆ.

ಯಾವನಿಗೆ ಪರಮಾತ್ಮನನ್ನು ಕಾಣುವ ಆಶೆಯಿದೆಯೋ, ಭಕ್ತಿಯಿದೆಯೋ ತ್ರಿಕರಣಶುದ್ಧಿಯಿದೆಯೋ ಆತನು ಯಾರೇ ಆಗಿರಲಿ, ಗಂಡಸೇ ಆಗಿರಲಿ, ಹೆಂಗಸೇ ಆಗಿರಲಿ ಜ್ಞಾನಭಿಕ್ಷ ಪಡೆಯಲು, ಶಿವದೀಕ್ಷೆಹೊಂದಲು ಆತನು ಅಧಿಕಾರಿ ಯೋಗ್ಯ. ಈ ತತ್ವದಂತೆಯೇ ಶಿವದೀಕ್ಷೆ ಪಡೆದವರೆಲ್ಲರಿಗೂ ಏಕತ್ರ ಸ್ಥಾನವನ್ನು ನೀಡುವುದರ ಮೂಲಕ ಮಹಾ ಕ್ರಾಂತಿಯನ್ನೆಬ್ಬಿಸಿದ ಮಹಾನುಭಾವಿಯು ಬಸವಣ್ಣನು.

— ತ. ಸು. ವೆಂಕಣ್ಣಯ್ಯ.

ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧಪಟ್ಟವರಲ್ಲ; ಕರ್ನಾಟಕಕ್ಕೆ ಮಾತ್ರ ಸಂಬಂಧ ಪಟ್ಟವರಲ್ಲ. ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ ಸಂಬಂಧಪಟ್ಟ ಮಹಾ ಪುರುಷರು.

— ಶ್ರೀನಿವಾಸಮೂರ್ತಿ ಎಂ. ಆರ್.

ಮತೋದ್ಧಾರಕ, ಸಮಾಜಸುಧಾರಕ, ದೀನರಕ್ಷಕ, ಮಾನವೀಸ್ವಾತಂತ್ರ್ಯರಕ್ಷಕನಾದ ಬಸವೇಶನ ಸ್ಥಾನವು ವೀರಶೈವ ಸಮಾಜದಲ್ಲಿಯೇ ಅತ್ಯಂತ ಶ್ರೇಷ್ಠವಾದುದಾಗಿದೆ.

— ಸರದಾರ್. ಎಂ. ಎಸ್.

ಬಸವಣ್ಣನವರು ಲಿಂಗಾಯತರಿಗೆ ಪರಮಪೂಜ್ಯರಾಗಿರುವ ಧಾರ್ಮಿಕಮಹಾ ವಿಭೂತಿಗಳು ಮಾತ್ರವೇ ಆಗಿರದೆ ಒಬ್ಬ ರಾಷ್ಟ್ರೀಯ ಮಹಾಪುರುಷರೂ ಆಗಿದ್ದಾರೆ. ಇವರು ಬೋಧಿಸಿರುವ ಆರ್ಥಿಕ ಮತ್ತು ಸಾಮಾಜಿಕ ದಿವ್ಯ ತತ್ವಗಳು ಈಗಿನ ಸಮಾಜಸುಧಾರಕರಿಗೆ ಮಾರ್ಗದರ್ಶಿಯಾಗಿವೆ. ಬಸವ ಮಹಾನುಭಾವರು ಹಿಂದೂ ಸಮಾಜದಲ್ಲಿ ಶ್ರೇಯಸ್ಕರವಾದ ಬಹು ಮಹತ್ವದ ಸುಧಾರಣೆಯನ್ನು ಮಾಡಿದವರು ಆಗಿದ್ದಾರೆ.

— ಹರ್ಡೇಕರ್ ಮಂಜಪ್ಪ.

## ಸುಕ್ಷೇತ್ರ ಬಂಥನಾಳದಲ್ಲಿ ಜರುಗಿದ

## ಶ್ರೀ ಶಿವಾನುಭವ ಸಮ್ಮೇಲನದ ೮ನೆಯ ವಾರ್ಷಿಕ ಸಮ್ಮೇಲನಾಧ್ಯಕ್ಷರಾದ

# ಶ್ರೀ ಶಾಂತವೀರ ಸ್ವಾಮಿಗಳು ಬಬಲೇಶ್ವರ

# ಇವರ ಭಾಷಣ

ಮಹಾ ಸ್ವಾಮಿಗಳೇ ಹಾಗೂ ಸತ್ಯಸಂಧಾನಿಗಳಾದ ಮಹಾನುಭಾವಿಗಳೇ, ಸುಕ್ಷೇತ್ರ ಈ ಬಂಥನಾಳ ಪುಣ್ಯ ಶಿವಯೋಗಾಶ್ರಮದಲ್ಲಿ ಜರಗುತ್ತಿರುವ ಎಂಟನೇ ವಾರ್ಷಿಕ ಶಿವಾನುಭವ ಸಮ್ಮೇಲನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿಕೊಂಡದ್ದು ಪೂಜ್ಯ ಶಿವಯೋಗಿಗಳ ಪ್ರೇಮವಷ್ಟೇ ಸರಿ. ನಾನು ವಯೋವೃದ್ಧನಿದ್ದು, ನೇತ್ರವಾಂದ್ಯದಿಂದ ನನ್ನ ಅಭಿಪ್ರಾಯುವನ್ನು ಓದಿ ಹೇಳಲು ಸಾಧ್ಯವಿಲ್ಲದ್ದಕ್ಕಾಗಿ ಬೇರೊಬ್ಬರ ಕಡೆಯಿಂದ ಅಧ್ಯಕ್ಷೀಯ ಭಾಷಣವು ಓದಲ್ಪಡುವದು.

ಪುರಾತನ ಕಾಲದಿಂದಲೂ ಕನ್ನಡನಾಡು ಪಾವಿತ್ರ್ಯದ ನೆಲೆವೀಡು, ಸದಭಿರುಚಿಗಳ, ಸದಾಚಾರಿಗಳ ಸತ್ಯಾನ್ವೇಷಣೆಯ ತಾಯ್ನಾಡು. ಅಧ್ಯಾತ್ಮದ ಮಹಾಮಂದಿರ, ಶುದ್ಧಿಯ ತವರುಮನೆ, ಶುಭಕಲ್ಯಾಣಗಳ ನೆಲೆವನೆ. ಇಂಥ ಕನ್ನಡನಾಡಿನ ಇತಿಹಾಸ ಪರಂಪರೆಯ ಹಿನ್ನೆಲೆಯಲ್ಲಿ ೧೨ನೇ ಶತಮಾನದ ಉಜ್ವಲವಾದ ಸಾಂಸ್ಕೃತಿಕ ಶ್ರೇಷ್ಠತೆ, ಧಾರ್ಮಿಕ ಅಭ್ಯುದಯ, ಸಾಮಾಜಿಕ ಪುನರ್ನಿರ್ಮಾಣ ಇವೆಲ್ಲವುಗಳನ್ನು ಪರಿಶೀಲಿಸಿದರೆ ಅವರು ಆ ಒಂದು ಶತಮಾನದಲ್ಲಿ ಸಾಧಿಸಿದ ಪ್ರಗತಿ ಒಂದೇ ಒಂದು ತಲೆಮಾರಿನಲ್ಲಿ ಸಾಧಿಸಿದ ಆ ತಲೆಮಾರಿನ ಶ್ರೇಷ್ಠ ಶುದ್ಧ ಸಂಪನ್ನವಾದ ನಡೆನುಡಿಗಳನ್ನು ಹೊಂದಿಸಿಕೊಂಡು ಮಹಾ ಶಿವಾನುಭವಿಗಳಾದ ಶಿವಶರಣರು ಸಾಧಿಸಿದ ಮಹಾತ್ಕಾರ್ಯಗಳನ್ನು ಸ್ಮರಿಸಿಕೊಂಡರೆ ಯಾರಿಗೆ ತಾನೇ ಹೆಮ್ಮೆಯಾಗಲಿಕ್ಕಿಲ್ಲ? ಅವರನ್ನು ನೆನೆದರೆ ನಮ್ಮ ಮನ ಪುಲುಕಿತಗೊಳ್ಳತ್ತದೆ. ಅವರ ಕಾರ್ಯಗಳನ್ನು ಸ್ಮರಿಸಿಕೊಂಡರೆ ನಮ್ಮ ಜೀವನದಲ್ಲಿ ನಾವು ಎಂದೂ ಕಾಣದ ಆಂತರಿಕ ಮಹಾಶಕ್ತಿಯು ಪುಲುಕಿತಗೊಳ್ಳುತ್ತದೆ. ಭಾವ ಗಂಗೆ ಯಾಗುತ್ತದೆ. ಬದುಕು ತುಂಗೆ

ಯಾಗುತ್ತದೆ. ಗಂಗಾ ತುಂಗೆಗಳ ಸಂಗಮದಿಂದ ಜೀವನ ರಂಗ ಭೂಮಿಯು ಬಹು ಸುರುಚಿತವಾಗುವದು. ಜೀವನಕ್ಕೆ ನಿಲುಕದ ಯಾವನೋ ಹೊಂಗನಸುಗಳ ಬೆನ್ನುಹತ್ತಿ ಬದುಕನ್ನು ಬಿಟ್ಟು ದೂರಹೋಗಿ ನಿಂತವರಲ್ಲ. ನಮ್ಮ ಶಿವಶರಣರು ಇಲ್ಲದ ಆಶೆಗಳನ್ನು ಕಟ್ಟಿ ಬಾಯ್ಮಾತಿನಲ್ಲಿ ಗೋಲಗುಮ್ಮಟವನ್ನು ನಿರ್ಮಿಸಿ ಜೀವನದಲ್ಲಿ ಅಸ್ಪಷ್ಟತೆಯು ಮಾಯಾ ಮೃಗವನ್ನು ಬೆನ್ನುಹತ್ತಿ ಬದುಕುವದನ್ನು ಬಿಟ್ಟು ದೂರ ಹೊರಟವರಲ್ಲ ಈ ಶಿವಶರಣರು ಈ ಪ್ರಪಂಚು ಕರ್ತಾರನ ಕಮ್ಮಟ, ಮೃತ್ಯ ಲೋಕ ಎಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿ ಸಲ್ಲುವರಯ್ಯ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಎಂದು ಸ್ಪಷ್ಟವಾಗಿ ಸಾರಿದ್ದಾರೆ. ಈ ಬದುಕು ಮಾನವನಿಗೆ ದೇವದತ್ತವಾದ ದೇಣಿಗೆ. ಅವರ ಶ್ರೇಷ್ಠತರವಾದ ಕರ್ತವ್ಯ ಶುದ್ಧರಾಗಿ ನಿರ್ವಂಚಕರಾಗಿ ಸದಾಚಾರಿಗಳಾಗಿ ಕಾರ್ಯನಿರತರಾಗಿ ಕರ್ತವ್ಯ ನಿಷ್ಠರಾಗಿ ಚಿತ್ತ ಶುದ್ಧಿಯುಳ್ಳವರಾಗಿ ನಿರ್ಮಲಾಂತಃಕರಣಿಗಳಾಗಿ ಜಡ ಜೀವಿಗಳಲ್ಲ. ಸತತ ದಯಾಳುಗಳಾಗಿ ಬದುಕು ಶಿವನ ಮಂಗಲ ಕಾರ್ಯ ಆ ಮಂಗಲವನ್ನೇ ೧೨ನೆಯ ಶತಮಾನದ ಜನಾಂಗ ಜೀವನದಲ್ಲಿ ರೂಪಿಸಿಕೊಟ್ಟರು. ಹಾಯಾಗಿ ಮತ್ತು ತನ್ನ ಸುತ್ತು ಮುತ್ತಣ ಬದುಕನ್ನು ಪವಿತ್ರಗೊಳಿಸಬೇಕು. ಶುಚಿಗೊಳಿಸಬೇಕು ಶುದ್ಧಗೊಳಿಸಬೇಕು ಎನ್ನುವ ಶುದ್ಧರಾಗಿ ಬದುಕಿದವರು ನಮ್ಮ ಶಿವಶರಣರು.

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು? ಲೇಸೆನಿಸಿಕೊಂಡು ನಾಲ್ಕುದಿನ ಬದುಕಿದರೇನು ? ಲೇಸೆನಿಸಿಕೊಂಡು ಮೂರುದಿನ ಬದುಕಿದರೇನು? ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು?

ಜೀವಿತಂ ಶಿವಭಕ್ತಾನಾಂ ವರಂ ಪಂಚದಿನಾನಿಚ ನಾಜ ಕಲ್ಪ ಸಹಸ್ರಂತು ಭಕ್ತಿ ಹೀನಂತು ಶಂಕರೀ ಎಂಬುದಾಗಿ ಕೂಡಲ ಸಂಗನ ಶರಣರ ವಚನದಲ್ಲಿ ಲೇಸೆನಿಸಿಕೊಂಡು ಒಂದುದಿನ ಬದುಕಿದರೇನು? ಹೀಗೆ ಅವರು ಬದುಕಿನ ನಿಶ್ಚಿತವಾದ ಗುರಿಯನ್ನು ತಮ್ಮ ಕಣ್ಮುಂದೆ ಇಟ್ಟುಕೊಂಡು ಹೊರಟಿದ್ದರೆನ್ನುವದು ಸ್ಪಷ್ಟವಾಗುತ್ತಿದೆ. ಇದರಿಂದ ಯುಗ ಯುಗಗಳಲ್ಲಿ ಸಾಧಿಸಲಾಗದಂತಹ ಕಾರ್ಯವಾಗುವದು. ಆ ಕಾರ್ಯದ ಘನತೆಯೇನು? ಆ ಘನತೆಯಲ್ಲಿ ಪೂಜ್ಯತೆಯಾಗುವದು. ಸಾರ ಎಂಥದು ಈ ಎಲ್ಲ ಪ್ರಶ್ನೆಗಳಿಗೆ ಉತ್ತರದೊರಕಿಸುವದಕ್ಕೆ ಜಟಿಲವಾದ ವಿಜ್ಞಾನದ ತೊಡಕು ಬೇಕಿಲ್ಲ.

ಬೆಟ್ಟದ ತುದಿಯಿಂದ ಶುಭ್ರವಾಗಿ ಇಳಿದು, ಬಯಲು ಭೂಮಿಯಲ್ಲಿ ಪ್ರಶಾಂತ ಪ್ರವಾಹಗೊಂಡು ಹರಿಯುವ ಗಂಗೆ ತುಂಗ ಪ್ರಸನ್ನತೆಯು ಮನಸ್ಸಿಗೆ ಬೇಕು. ಈ ಶರದಲ್ಲಿ ಶಿವಶರಣರು ಮಾಡಿದ ಮೊಟ್ಟಮೊದಲನೇ ಕಾರ್ಯವೆಂದರೆ ವ್ಯಕ್ತಿ ವಿಕಾಸ. ಮಾನವನು ಸಮಾಜಜೀವಿ. ಸಮಾಜ ಜೀವನದಲ್ಲಿ ಶಿಸ್ತು ನೆಲೆಗೊಳ್ಳಬೇಕಾದರೆ ವ್ಯಕ್ತಿ ಜೀವನದಲ್ಲಿ ನೆಮ್ಮದಿ ಹುಟ್ಟಿ ಬರುವದು ಅತ್ಯಾವಶ್ಯಕ.

ರಾಷ್ಟ್ರದ ಘಟಕವಾದ ಸಮಾಜ, ಸಮಾಜದ ಘಟಕವಾದ ವ್ಯಕ್ತಿ ಈ ವ್ಯಕ್ತಿ ಕಾರ್ಯ ಕ್ಷೇತ್ರ ಬದುಕು ಇವೆಲ್ಲವೂ ಒಂದನ್ನೊಂದು ಹೆಣೆದುಕೊಂಡಿವೆ, ವ್ಯಕ್ತಿಯ ಬದುಕಿನಲ್ಲಿ ಶಾಂತಿಯೆಂದರೆ ಸಮಾಜದ ಸ್ವಾಸ್ತ್ಯ.

ಇನ್ನು ವ್ಯಕ್ತಿಯ ಅಂತರಿಕ ವಿಕಾಸದಕಡೆ ನೋಡುವಾ, ಬಹಿರಂಗದಲ್ಲಿ ನೋಡುವದಕ್ಕೆ ಈ ಜೀವನ ಕುತೂಹಲಕಾರಿಯಾಗಿದೆ. ಈ ಪ್ರಪಂಚದ ಜೊತೆಗೆ ಮನುಷ್ಯನ ಸಂಬಂಧ ಬೆಳೆದಾಗ ಅವನಲ್ಲಿ ಸಹಜವಾದ ಬಯಕೆಗಳು ಉಂಟಾಗುತ್ತವೆ. ಅವನು ತನ್ನ ಅನ್ನವಸನಕ್ಕಾಗಿ ಹೋರಾಟ ನಡೆಸುತ್ತಾನೆ. ಈ ಹೋರಾಟ ಜೀವಿತದ ಪ್ರಾರಂಭಿಕ ಉದ್ದೇಶವಾಗಿ ನಿಲ್ಲುತ್ತದೆ. ಆದರೆ ಈ ಉದ್ದೇಶವೇ ಶಿವಶರಣರ ದೃಷ್ಟಿಯಲ್ಲಿ ಕೊನೆಯದಾಗಿ ಕಾಣುವದಿಲ್ಲ.

ಈ ವಿಸ್ಮಯಜನಕವಾದ ಪ್ರಾಪಂಚವನ್ನು ಗಳಿಗೆ ಗಳಿಗೆಗೆ ವ್ಯಾಮೋಹದ ಒತ್ತಡದಲ್ಲಿ ಹಿಡಿದು ಅವನ ವೈಯಕ್ತಿಕ ಬಯಕೆಗಳನ್ನು ಪೂರೈಸಿಕೊಳ್ಳುವದರಲ್ಲಿಯೇ ನಿರತನನ್ನಾಗಿ ಮಾಡುತ್ತದೆ. ಈ ಪ್ರಾಪಂಚಿಕ ವ್ಯಾಮೊಹವೇ ಜೀವನದ ನಿಜವಾದ ಗುರಿಯೇನೋ ಎನ್ನುವಷ್ಟು ಅವನು ಅಂಧನಾಗುತ್ತಾನೆ. ತನ್ನ ಇಷ್ಟಸಿದ್ಧಿಗಾಗಿ ಅವನು ಪರಹಿತವನ್ನು ಲಕ್ಷಿಸದಷ್ಟು ನಿರ್ಲಕ್ಷನಾಗುತ್ತಾನೆ. ಸ್ವಾರ್ಥಿಪರನಾಗುತ್ತಾನೆ. ನಿಸರ್ಗದ ಪ್ರವಾಹದೊಡನೆ ತೇಲಿ ಹೋಗುತ್ತಾನೆ. ಎದುರಿಸುವ ಸಾಮರ್ಥ್ಯವು ವ್ಯಾಮೋಹದ ತೆರೆಯಲ್ಲಿ ಮರೆಯಾಗುತ್ತದೆ. ಈ ಸ್ವಾರ್ಥತೆಯ ಪಂಕದಿಂದ ಎದ್ದು ಮನುಷ್ಯನು ಪರಹಿತ ಸಾಧನೆಯನ್ನು ತನ್ನ ಜೀವನದ ಹೆಗ್ಗುರಿಯನ್ನಾಗಿ ಮಾಡಿಕೊಳ್ಳಬೇಕಾದರೆ ಅವನ ವಯಕ್ತಿಕ ಜೀವನವು ಅತ್ಯಂತ ಪರಿಶುದ್ಧವಾಗಿರಬೇಕು. ಎಂದು ೧೨ನೇ ಶತಮಾನದ ಶಿವಶರಣರು ಕೈಯೆತ್ತಿ ಸಾರಿ ಸಾರಿ ಹೇಳಿದ್ದಾರೆ. ಈ

ಅಹಂಕಾರ ಮನುಷ್ಯನ ಜೀವನದಲ್ಲಿ ಸಲ್ಲದು. ಶಿವಚಿಂತೆ ಶಿವಜ್ಞಾನ ಶಿವ ಭಕ್ತಿ ಶಿವಾನುಭವ ಶ್ರವಣ ಶಿವಾನುಭವ ಗೋಷ್ಠಿ ಇವು ಹೃದಯದಲ್ಲಿ ತರಂಗ ತರಂಗವಾಗಿ ಎದ್ದು ಹೊರಸೂಸಬೇಕು.

ಮಾಯಾ ಪ್ರಪಂಚದ ರಚನೆಗೆ ತುತ್ತಾದ ಮಾನವರಿಗೆ ಹೃದಯದ ಶುದ್ಧವೆಲ್ಲಿಯದೋ. ಹದುಳಿಗರಾದಲ್ಲಪ್ಪ ನಮ್ಮ ಕೂಡಲಸಂಗಮದೇವ ಇಲ್ಲಿ ಹುದುಳಿಗ ಎನ್ನುವ ಮಾತನ್ನು ಗಮನಿಸಬೇಕು. ಇಲ್ಲಿ ಆಶಾ ವ್ಯಾಮೋಹದ ಹುದುಳಿಗ ಎಂದರೆ ಸಂತೃಪ್ತ ಮನೋಭಾವವುಳ್ಳವ. ರಹಿತನವು ಪ್ರಪಂಚ ವೆಲ್ಲವೂ ಶಿವನ ಒಂದು ಲೀಲೆ ಎಂಬ ಮನೋಭಾವವುಳ್ಳವನು. ಮಾಂಗಲ್ಯ ವನ್ನು ಬದುಕಿನಲ್ಲಿ ರೂಪಿಸಿ ಕೊಳ್ಳಬೇಕು ಎನ್ನುವ ಹಿತ ದೃಷ್ಟಿಯುಳ್ಳವನು ಇಂತಹ ಸ್ವಪ್ರೇರಣೆಯ ಖ್ಯಾತಿ-ದೈವ ಭಕ್ತಿಯನ್ನು ತನ್ನ ಅಂತಃಪ್ರೇರಣೆಯ ಸೊತ್ತನ್ನಾಗಿಟ್ಟುಕೊಂಡು ಯಾವ ಕಾರ್ಯವನ್ನು ಮಾಡಿದರೂ ಅದು ಕಾಯಕ ವೆನಿಸುತ್ತದೆ. ಯಾವ ಕರ್ಮವನ್ನು ಮಾಡಿದರೂ ಅದು ಕ್ರಿಯೆಯೆನಿ ಸುತ್ತದೆ. ಆದುದರಿಂದ ಶಿವಶರಣರು ಕಾಯಕದ ಮಹತಿಯನ್ನು ಸಮಾ ಜಕ್ಕೆ ಬೀರಿದರು. ಈ ಶಿವಶರಣರ ಉಧ್ಯೋಗೋಷವು ರಾಷ್ಟ್ರದ ಮೂಲೆ ಮೂಲೆಗಳಲ್ಲಿ ಅಂದರೆ ಅಂಗ ವಂಗ ಕಳಿಂಗ ಕಾಂಬೋಜ ಕಾಶ್ಮೀರ ಸೌರಾಷ್ಟ್ರ ಮೊದಲಾದ ದಿಕ್ದೇಶಗಳಲ್ಲಿ ಅಡಗಿನಿಂತಿರುವ ಕಾರ್ಮಿಕ ಸತ್ವ ಪ್ರಧಾನ ಜನ ರನ್ನು ಕಲ್ಯಾಣದತ್ತ ಆಕರ್ಷಿಸಿ ಶ್ರೇಷ್ಠ ಉಚ್ಛ ತಂವಾದ ಶಿವ ಶರಣರ ಮಾಲಿಕೆಯಲ್ಲಿ ಹೆಣೆದಿಟ್ಟಿತು. ಮಾಡಿದ್ದೆಲ್ಲವೂ ಕಾಯಕವಾಗಬೇಕಾದರೆ ಕರ್ತೃವಿ ನಲ್ಲಿ ಶಿವಾನುಭವದ ಪರಿಪಾಕವು ಆಳವಾಗಿ ಬೆಳೆಯ ಬೇಕು. ಇಂತಹ ಪರಿ ಪಾಕಗೊಂಡ ಭಾವನಾ ಶಕ್ತಿಯಿಂದ ತೋರಿಬಂದ ಕ್ರಿಯಾ ಶಕ್ತಿಯೇ ಕಾಯ ಕವು. ಈ ಹಿನ್ನೆಲೆಯಲ್ಲಿ ಯಾವವೃತ್ತಿ ಉದ್ಯೋಗಗಳನ್ನು ಮಾಡಿದರೂ ಆ ಉದ್ಯೋಗದ ಪರಿಶುದ್ಧತೆಯಲ್ಲಿ ತೋರಿ ಬರುವ ಅನುಭವವೇ ಶಿವಾನುಭವ.

ಅನಾದ್ಯನಂತನಾದ ಪರಮೇಶ್ವರನ ಹೊಂಬೆಳಕನ್ನು ಕರಸ್ಥಲವಾದ ಇಷ್ಟಲಿಂಗದಲ್ಲಿ ಕಂಡು ಆ ಲಿಂಗದ ಗುಣ ಅರಿದರೆ ಪರಮೇಶ್ವರನ ಸಚ್ಚಿದಾ ನಾಡಿ ಗುಣಗಳನ್ನು ಲಿಂಗದಲ್ಲಿ ಅಂದರೆ ಜೀವನದಲ್ಲಿ ತುಂಬಿ ಲಿಂಗಾಂಗ ಸಾಮರಸ್ಯವಾದ ಶಿವಾನುಭವದ ಬೋಧೆಯನ್ನು ಬರಿಯ ಬಾಯಿ ಮಾತಿನಲ್ಲಿ ಹೇಳದೇ ಶಿವಾಚಾರ ಸಂಪನ್ನರಾಗಿ ತಮ್ಮ ಜೀವನದಲ್ಲಿಯೇ ಪರ ಶಿವನ ಇರ ವನ್ನು ಪರಮೇಶ್ವರನ ಸಾಕ್ಷಾತ್ಕಾರವನ್ನು ಮಾಡಿಕೊಂಡು ಮಾತೇ ಜ್ಯೋತಿ

ಲ್ಲಿಂಗವೆಂದು ನಮ್ಮ ಶಿವಶರಣರು ಸಾರಿದರು. ಮತ್ತು ಅವರರಾದರು. ಯೋಗ ಭೋಗಗಳನ್ನು ಸಮನ್ವಯಗೊಳಿಸಿ ಪ್ರಪಂಚವನ್ನು ನಂದನ ವನವನ್ನಾಗಿ ಮಾಡಿದರು. ವೇದಾಂತಗಳು ಹೇಳುವ ಪ್ರಾಪಂಚದ ಅಸಾರತೆಯನ್ನು ತಮ್ಮ ಸಮನ್ವಯ ದ್ವಿರೋದಾತ್ತ ವಿಚಾರಗಳಿಂದ ಹೋಗಲಾಡಿಸಿ ಸಸಾರವೆಂದು ತೋರಿಸಿದರು.

೨೦ನೇ ಶತಮಾನದ ಈ ಭೌತಿಕ ವಾದದ ಸುಳಿಯಲ್ಲಿ ಸಿಕ್ಕ ಇಂದಿನ ಪ್ರಪಂಚಕ್ಕೆ ೮೦೦ ವರ್ಷಗಳ ಹಿಂದಿನ ಆ ತತ್ವಗಳು ಶಕ್ತಿಪೂರ್ಣವಾದ ಮಾರ್ಗದರ್ಶನ ಮಾಡಬಲ್ಲವು. ಬರಿಯ ಇಹದ ಸುಖವನ್ನು ಸಾಧಿಸಿದರೆ ಮನುಷ್ಯನ ಸಮಸ್ಯೆಗಳು ಪೂರ್ಣಗೊಳ್ಳುವದಿಲ್ಲ. ವಿಜ್ಞಾನ ಬರಿಯ ಬಾಹ್ಯ ಸಮಸ್ಯೆ ಉತ್ತರ ಕೊಡಬಲ್ಲುದಲ್ಲದೆ ( ವಿಜ್ಞಾನವು ಬರಿಯ ) ಅದರಿಂದ ಅಂತರಿಕ ಪ್ರಸನ್ನತೆಗೆ ಉತ್ತರ ದೊರೆಯಲಾರದು. ಬಹಿರಂಗದ ಸಾಮಾಜಿಕ ಜೀವನ ಅಂತರಂಗದ ಆಧ್ಯಾತ್ಮಿಕ ಜೀವನ ಇವೆರಡಕ್ಕೂ ಸತ್ವಪೂರ್ಣವಾದ ಪರಿಹಾರವಾಗಬೇಕು. ಅದಕ್ಕೆ ಶಿವಶರಣರು ಬೋಧಿಸಿದ ವ್ಯಕ್ತಿಯ ಸದಾಚಾರ ಅವನ ನಿರಾಪೇಕ್ಷೆ. ಬುದ್ಧಿ ಕಾಯಕದ ಹಿರಿಮೆ. ಅದರಿಂದುಂಟಾದ ಸಮಾಜಸ್ವಾಸ್ಥ, ಅದರಿಂದ ವ್ಯಕ್ತಿ ವ್ಯಕ್ತಿಗಳಲ್ಲಿ ಮಾಡುವ ಸಮದೃಷ್ಟಿ ಇವುಗಳನ್ನು ಆಶ್ರಯಿಸಬೇಕಾಗುತ್ತದೆ. ಬದುಕಬೇಕು, ಬದುಕಿಸಬೇಕು ಎನ್ನುವದು ಈ ಶಿವಶರಣರ ಶಿವಾನುಭವ ತತ್ವಕ್ಕೆ ಹೊಂದಿಕೆಯಾಗುತ್ತದೆ. ಎಲ್ಲರಿಗೂ ಶುಭವಾಗಲಿ, ಎಲ್ಲರಿಗೂ ಹಿತವಾಗಲಿ, ಎಲ್ಲರೂ ಶಿವಾನುಭವಿಗಳಾಗಲಿ. ಇದು ಕಲ್ಯಾಣದ ಶಿವಾನುಭವ ಮಂಟಪದಲ್ಲಿ ನುರಿತ ಶಿವಾನುಭವಿಗಳ ನಿರ್ದೇಶುಕವಾದ ದಯಾವಾಣಿಯು ಆ ದೆಶೆಯಲ್ಲಿ ಆ ಅನುಭವವನ್ನು ಈ ೨೦ನೇ ಶತಮಾನದ ಜನಜೀವನದಲ್ಲಿ ಹೇಗೆ ರೂಪಿಸಿಕೊಳ್ಳಬೇಕು ? ಈ ಓಡುವ ಜಗತ್ತಿನ ಮುಂದೆ ರೂಪಿಸಿಕೊಳ್ಳಲು ಸಾಧ್ಯವಿಲ್ಲದ ಅಂಶಗಳು ಏನಾದರೂ ಇವೆಯೋ ? ಇದ್ದರೆ ಅವುಗಳನ್ನು ಹೇಗೆ ಸಮನ್ವಯಗೊಳಿಸಬೇಕು ? ಶ್ರೀ ಪ್ರಭು, ಬಸವೇಶ್ವರ, ಚನ್ನಬಸವ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶಿವಾನುಭವಿಗಳು ನಮ್ಮಲ್ಲಿ ನಮ್ಮ ಹೃದಯದಲ್ಲಿ ಚಿತ್ತರಿಸಿ, ಅವು ಮೊಳೆಯುವಂತೆ ಅವರು ನಮ್ಮ ಅಂತರಾತ್ಮರಾಗಿರಲಿ. ಇಂದು ಶಿವಾನುಭವ ತತ್ವವನ್ನು ಪ್ರಚಾರಗೊಳಿಸುವ ಶಿವಾನುಭವ ಸಮ್ಮೇಲನಗಳು ಹೆಚ್ಚಾಗಿ ಬೆಳೆಯಲಿ, ಜನಜೀವನಕ್ಕೆ ಬೆಳಕನ್ನು ತೋರಲಿ. ಈ

೨೦ನೇ ಶತಮಾನದಲ್ಲಿ ಸುಪ್ರಸಿದ್ಧವಾದ ಧರ್ಮಭಾವನೆಯು ಶ್ರೀ ಪೂಜ್ಯ ಶಿವಯೋಗಿಗಳ ಕೃಪಾ ಛತ್ರದಲ್ಲಿ ಇಂಥ ಸಭೆ ಸಮ್ಮೇಲನ ರೂಪದಿಂದ ಜಾಗ್ರತಿಗೊಳ್ಳಲಿ ಅಂತ ನಾನು ಹಾರೈಸಿ, ನನ್ನ ಮಾತನ್ನು ಮುಗಿಸುತ್ತೇನೆ.

ಇಂದೆನ್ನ ಮನೆಗೆ ಪ್ರಮಥರು ಬಂದಿಹರೆಂದು ಗುಡಿತೋರಣ ಕಟ್ಟಿ,
ಷಡ ಸಮಾರ್ಚನೆ ಮಾಡಿ ರಂಗವಾಲಿಯನಿಕ್ಕಿ ಉಘೇ! ಚಾಂಗುಭಲಾ!
ಎಂಬೆ ತಮ್ಮ ಬಪ್ಪುದಕ್ಕಿಕ್ಕಿ ಸಲಹುವರಾಗಿ ನಮ್ಮ ಕೂಡಲಸಂಗನ ಶರಣರು

ಸತ್ಯಂ ಶಿವಂ ಸುಂದರಂ

ಶ್ರೀ ಸಂಗನಬಸವ ಶಿವಯೋಗಿ !

ಅಧ್ಯಕ್ಷರು
೮ನೆಯ ವಾರ್ಷಿಕ
ಶಿವಾನುಭವ ಸಮ್ಮೇಲನ

ಬಂಥನಾಳ
೧೧ — ೩ — ೫೯

# ಶ್ರೀ. ಹಾನಗಲ್ ಕುಮಾರಸ್ವಾಮಿಗಳವರ ಬಗ್ಗೆ ಕೆಲವು ನೆನಹುಗಳು.

(ಲೇಃ–ಡಾ. ರಾ. ಬ. ಫ. ಗು. ಹಳಕಟ್ಟಿ ಬಿ.ಏ. ಎಲ್.ಎಲ್.ಬಿ.(ಡಿ.ಲಿಟ್.)
ಮುಕ್ಕಾಮು ವಿಜಾಪೂರ

ಮುಳಗುಂದದ ಶ್ರೀ. ಬಾಲಲೀಲಾ ಮಹಾಂತ ಶಿವಯೋಗಿಗಳು ಲಿಂಗೈಕ್ಯರಾಗಿ ೧೮೫೯ ಇಸ್ವಿಗೆ ಒಂದುನೂರು ವರುಷಗಳಾಗುತ್ತ ಬಂದವು. ಈ ಮಹಾನುಭಾವರ ನೆನಹಿಗಾಗಿ ಸ್ಮಾರಕ ಗ್ರಂಥವೊಂದನ್ನು ಪ್ರಕಟಿಸುವ ಯೋಜನೆಯನ್ನು ಪ್ರಕಾಶಕರು ಕೈಕೊಂಡಿದ್ದು ಅತ್ಯಂತ ಸ್ತುತ್ಯವಾಗಿದೆ. ಈ ಗ್ರಂಥದಲ್ಲಿ ನಾನು ಶ್ರೀ. ಶಿವಯೋಗಿಮಂದಿರದ ಸಂಸ್ಥಾಪಕರಾದ ಶ್ರೀ. ಹಾನಗಲ್ಲ ಕುಮಾರ ಸ್ವಾಮಿಗಳವರು ನೆರವೇರಿಸಿದ ಕಾರ್ಯಗಳು ಬಹು ಮುಖವಾಗಿವೆ. ಅವುಗಳನ್ನು ನಾನು ಸವಿಸ್ತಾರವಾಗಿ ವಿವೇಚಿಸುವದು ಶಕ್ಯವಿಲ್ಲ. ಇದಕ್ಕೆ ಒಂದು ಸ್ವತಂತ್ರ ದೊಡ್ಡ ಗ್ರಂಥವೇ ಬೇಕಾದೀತು. ಆದ್ದರಿಂದ ನಾನು ನನ್ನ ಲಕ್ಷದಲ್ಲಿ ಈಗ ಉಳಿದ ಹಲಕೆಲವು ವಿಷಯ ಗಳನ್ನು ಕುರಿತು ಮಾತ್ರ ಇಲ್ಲಿ ನಿರ್ದೇಶಿಸುತ್ತೇನೆ.

ನನಗೆ ಶ್ರೀ. ಹಾನಗಲ್ಲು ಕುಮಾರ ಸ್ವಾಮಿಗಳವರ ಮೊದಲು ಪರಿಚಯವಾದುದು ಧಾರವಾಡ ೧ನೇ ವೀರಶೈವ ಮಹಾಸಭೆಯ ಅಧಿವೇಶನ ಕಾಲದಲ್ಲಿ. ಅದರ ಹಿಂದಿನ ವರುಷ ಅಂದರೆ ೧೯೦೩ ಇಸ್ವಿಯಲ್ಲಿ ಧಾರವಾಡದಲ್ಲಿ ಒಂದು ರಾಜಕೀಯ ಪ್ರಾಂತಿಕ ಪರಿಷತ್ತು ಶ್ರೀಯುತ ಖರೆ ಇವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಈ ಸಭೆಗೆ ಕೈ. ವಾ. ಬಾಲಗಂಗಾಧರ ಟಿಳಕ, ನಾ|| ಗೋಖಲೆ ಮೊದಲಾದ ಅನೇಕ ರಾಜಕೀಯ ಪಟುಗಳು ಆಗಮಿಸಿದ್ದರು, ಈ ಕಾಲದಲ್ಲಿ ಧಾರವಾಡ ಜಿಲ್ಹೆಯಲ್ಲಿಯ ಮುಖ್ಯ ಗ್ರಾಮಗಳಲ್ಲಿಯ ನೂರಾರು ಜನ ವೀರಶೈವ ವ್ಯಾಪಾರಸ್ಥರೂ ವಿದ್ಯಾವಂತರೂ ಕೂಡ ಸೇರಿದ್ದರು. ಅವರೆಲ್ಲರೂ ಇರಲಿಕ್ಕೆ ಒಂದು ವಿಶಾಲವಾದ ಮಂಡಿರವನ್ನು ಸತ್ಕಾರಕ ಸಂಘದವರು ಧಾರವಾಡವಲ್ಲಿಯೇ ಏರ್ಪಡಿಸಿದ್ದರು. ಆಗ ನಾಡಿನ ಹಿತಾಹಿತಗಳ ಸಂಬಂಧವಾಗಿ ಚರ್ಚೆಗಳು ಕೂಡಿದ ವೀರ

ಶೈವರಲ್ಲಿ ಉದ್ಭವಿಸುತ್ತಿದ್ದವು. ಇವುಗಳಲ್ಲಿ ಮುಖ್ಯ ಭಾಗವನ್ನು ವಹಿಸಿದವರು ಶ್ರೀಯುತ ಗದಿಗಯ್ಯ ಹೊನ್ನಾಪುರಮಠ ಮು. ಧಾರವಾಡ, ಬನಹಟ್ಟಿಯ ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿ, ಧಾರವಾಡದ ಮೂಗಪ್ಪ ಸವದತ್ತಿ ಈ ಮೊದಲಾದವರು ಇರುತ್ತಿದ್ದರು. ಈ ಚರ್ಚೆಗಳ ಪರಿಣಾಮವಾಗಿ ಹೇಗ ರಾಜಕೀಯ ಪ್ರಾಂತಿಕ ಪರಿಷತ್ತು ಸೇರಿದೆಯೋ ಹಾಗೆಯೇ ವೀರಶೈವರ ಹಿತಾಹಿತಗಳನ್ನು ವಿಚಾರಿಸಲು ಒಂದು ವೀರಶೈವ ಪರಿಷತ್ತನ್ನು ನೆರಿಸುವದು ಅಗತ್ಯವೆಂದು ತೋರಿಬಂದಿತು. ಆಮೇಲೆ ಒಂದು ವಾರದಲ್ಲಿಯೇ ಪಟ್ಟಣದಲ್ಲಿಯ ೨೦-೩೦ ಪ್ರಮುಖರ ಒಂದು ಚಿಕ್ಕ ಸಭೆಯನ್ನು ಧಾರವಾಡದಲ್ಲಿ ಸೇರಿಸಲಾಗಿ ಅವರು ವೀರಶೈವ ಮಹಾಸಭೆಯನ್ನು ಕೂಡಿಸಲೇಬೇಕೆಂದು ನಿರ್ಧರಿಸಿದರು. ಇದರಲ್ಲಿ ವಿಶೇಷ ಪ್ರೋತ್ಸಾಹವನ್ನು ಕೊಟ್ಟವರು ಶ್ರೀ. ಹಾನಗಲ್ಲ ಕುಮಾರಸ್ವಾಮಿಗಳೂ ಅವರಿಗೆ ಬೆಂಬಲವಾಗಿ ಕೈ. ವಾ. ರೇವಣಸಿದ್ಧಪ್ಪ ಕಿತ್ತೂರ ಕೈ. ವಾ. ಕೊಂಗವಾಡ ಮೊದಲಾದವರು ಇದ್ದರು.

ಮುಂದೆ ಕೆಲವು ದಿವಸಗಳಾದ ಮೇಲೆ ಆರ್ಯ ಸಮಾಜದವರು ಒಂದು ಗುರುಕುಲವನ್ನು ನಾಡಿನಲ್ಲಿ ಸ್ಥಾಪಿಸಿ ಅದಕ್ಕೋಸ್ಕರ ಅದ್ಭುತವಾಗಿ ಪ್ರಯತ್ನ ಮಾಡುತ್ತಿರುವವಾರ್ತೆಗಳು ವೃತ್ತ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಹತ್ತಿದವು. ೧೯೦೭ನೇ ಇಸ್ವಿಯಲ್ಲಿ ಸೊಲ್ಲಾಪುರದಲ್ಲಿ ೩ನೇ ಮಹಾ ಸಭೆಯು ಜರುಗಿತು. ಈ ಸಭೆಗೆ ಹಾನಗಲ್ಲು ಮಹಾಸ್ವಾಮಿಗಳವರು ಕಾಲು ಮಾರ್ಗದಿಂದ ಸೊಲ್ಲಾಪುರ ಪಟ್ಟಣಕ್ಕೆ ಆಗಮಿಸಿದರು. ಮಹಾತ್ಮಾಗಾಂಧಿಯವರು ಜನತೆಯಲ್ಲಿ ಒಂದು ಮಹತ್ವದ ಸಂದೇಶವನ್ನು ಬೀರಲು ಪಾದಚಾರಿಗಳಾಗಿ ಹೇಗೆ ಮಾರ್ಗ ಕ್ರಮಣ ಮಾಡುತ್ತಿದ್ದರೋ ಅದೇ ಮೇರೆಗೆ ಹಾನಗಲ್ಲ ಕುಮಾರ ಸ್ವಾಮಿಗಳವರು ತಾವು ಇಳಿದ ಗ್ರಾಮುಗಳಲ್ಲೆಲ್ಲ ವೀರಶೈವರಿಗೋಸ್ಕರ ಒಂದು ಗುರುಕುಲವನ್ನು ಒಂದು ಕಡೆಗೆ ಸ್ಥಾಪಿಸಬೇಕೆಂಬ ವಿಚಾರಗಳನ್ನು ವಿಶದಪಡಿಸುತ್ತಲೇ ಬಂದರು.

ಮುಂದೆ ೧೯೦೪ರಲ್ಲಿ ಬಾಗಲಕೋಟೆಯಲ್ಲಿ ವೀರಶೈವ ಮಹಾಸಭೆಯು ರಾಜಾ ಲಖಮಗೌಡಾ ಸರದೇಸಾಯಿ ವಂಟಮುರಿ ಇವರ ಅಧ್ಯಕ್ಷತೆಯಲ್ಲಿ ನೆರವೇರಿತು. ಈ ಸಭೆಯಲ್ಲಿ ಆದ ನಿರ್ಣಯಗಳಲ್ಲಿ ಶಿವಯೋಗ ಮಂದಿರವನ್ನು ಸ್ಥಾಪಿಸಬೇಕೆಂಬ ನಿರ್ಣಯವು ಮಹತ್ವವಾದದ್ದು, ಈ ನಿರ್ಣಯುವಾದ ಬಳಿಕ

ಮೂರು ವರುಷವೇ ಈಗಿನ ಬದಾಮಿಯ ನೆರೆಯಲ್ಲಿ ಮಹಾಕೂಟ ಪುಣ್ಯ ಕ್ಷೇತ್ರಕ್ಕೆ ಸಮೀಪವಾಗಿ ಮಲಾಪಹಾರಿ ನದೀ ತೀರದಲ್ಲಿ ಶಿವಯೋಗ ಮಂದಿರವು ಸ್ಥಾಪಿತವಾಯಿತು.

ಅಂದಿನಿಂದ ಈ ವರೆಗೆ ಈ ಸಂಸ್ಥೆಯ ಮೂಲಕ ವೀರಶೈವ ಅನೇಕ ಮಠಾಧಿಪತಿಗಳೂ ಯೋಗ್ಯ ಶಿಕ್ಷಣವನ್ನು ಹೊಂದಿ ವೀರಶೈವ ಧರ್ಮದ ಮಹತ್ವವನ್ನು ಎಲ್ಲ ಕಡೆಗೂ ಈ ವರೆಗೆಯೂ ಬೀರುತ್ತ ಬಂದಿದ್ದಾರೆ.

"ಶ್ರೀ. ಹಾನಗಲ್ಲ ಕುಮಾರ ಸ್ವಾಮಿಗಳವರು ಹೇಗೆ ಧನ ಸಂಚಯ ಮಾಡುತ್ತ ಬಂದರೋ ಹಾಗೆಯೇ ಅವರು ಗ್ರಂಥ ಸಂಚಯವನ್ನು ಸಹ ಮಾಡುತ್ತ ಬಂದರು. ಅವರ ಈ ಕಾರ್ಯವು ಅತ್ಯಂತ ಮಹತ್ವವಾದುದು. ಶ್ರೀ ಸ್ವಾಮಿಗಳವರ ದರ್ಶನ ಹೊಂದಲು ಎಲ್ಲ ಕಡೆಯಿಂದಲೂ ಪ್ರಮುಖ ವ್ಯಕ್ತಿಗಳು ಈ ಮಂದಿರಕ್ಕೆ ಬರುವದು ರೂಢಿಯಾಗಿತ್ತು. ಅವರನ್ನು ಶ್ರೀ ಸ್ವಾಮಿಗಳು ಕಂಡು ಅವರ ಗ್ರಾಮದಲ್ಲಿ ತಾಡವೋಲೆಯ ಗ್ರಂಥಗಳು ಇವೆಯೋ ಹೇಗೆ ಎಂಬುದನ್ನು ಪ್ರಶ್ನೆಮಾಡದೇ ಬಿಡುತ್ತಿದ್ದಿಲ್ಲ. ಯಾರಾದರೂ ತಮ್ಮಲ್ಲಿ ಇಂಥ ಗ್ರಂಥಗಳು ಇವೆ ಎಂದು ಅವರು ಉತ್ತರಕೊಟ್ಟಲ್ಲಿ ಅವುಗಳನ್ನು ಮಂದಿರಕ್ಕೆ ಕಳಿಸಬೇಕೆಂದು ಶ್ರೀ ಸ್ವಾಮಿಗಳು ತಪ್ಪದೆ ಹೇಳುವರು. ಅವರನ್ನು ಕಾಣಬಂದವರಲ್ಲಿ ಯಾರೂ ತಾವು ಕಳಿಸುವದಿಲ್ಲ ಎಂದು ಅನ್ನುತ್ತಿದ್ದಿಲ್ಲ. ಎಲ್ಲರೂ ಭಕ್ತಿಯಿಂದ ತಮ್ಮಲ್ಲಿಯ ಗ್ರಂಥಗಳನ್ನು ಅವರ ಕಡೆಗೆ ಸಮರ್ಪಿಸುತ್ತಿದ್ದರು. ಈ ಪ್ರಕಾರ ಮಂದಿರದಲ್ಲಿ ವೀರಶೈವ ಗ್ರಂಥಗಳ ಒಂದು ದೊಡ್ಡ ಸಮುದಾಯವು ಸ್ವಲ್ಪ ದಿವಸಗಳಲ್ಲಿ ಉಂಟಾಯಿತು.

"ಶ್ರೀ ಸ್ವಾಮಿಗಳವರು ಮಂದಿರದ ಒಂದು ದೊಡ್ಡ ನಿಧಿಯನ್ನು ಕೂಡಿಸಿದ್ದೂ, ಅಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದೂ ಮಹತ್ವದ ಕಾರ್ಯಗಳೆಂಬುದು ನಿಃಸಂದೇಹವಾದದ್ದು. ಆದರೆ ಹಣಕ್ಕಿಂತಲೂ ಮಹತ್ವವೆನಿಸಿಕೊಳ್ಳುವ ಗ್ರಂಥಗಳ ಸಂಗ್ರಹ ಮಾಡುವದು ಅಷ್ಟೇ ಶ್ರೇಯಸ್ಕರವಾದದ್ದು ಇರುತ್ತದೆ. ಇಂಥ ಗ್ರಂಥಗಳು ಸಮಾಜದಲ್ಲಿ ಇರದಿದ್ದರೆ ಸಾಂಸ್ಕೃತಿಯು ಬಾಳುವ ಸಂಭವವೇ ಇಲ್ಲ.

"ಇದೇ ಕಾಲದಲ್ಲಿ ನಾನು ವಚನಶಾಸ್ತ್ರದ ಉಕ್ತಿಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದ್ದೆನು. ಈ ಸಂಗತಿಯನ್ನು ನಾನು ಸ್ವಾಮಿಗಳವರ

ನಿದರ್ಶನಕ್ಕೆ ಆಗಿಂದಾಗ್ಗೆ ತರುತ್ತಿದ್ದೆನು. ಅವರು ಇದನ್ನು ನೋಡಿ ಬಹಳ ಸಂತೋಷಿಸುತ್ತಿದ್ದರು. ಮತ್ತು ನನಗೆ ಅವರಲ್ಲಿ ಪ್ರೋತ್ಸಾಹವನ್ನೂ ಕೊಡುತ್ತಿದ್ದರು.

ಮುಂದೆ ನಾನು 'ವಚನ ಶಾಸ್ತ್ರ ಸಾರ' ಎಂಬ ಗ್ರಂಥವನ್ನು ನಿರ್ಮಾಣ ಮಾಡಿ ಅದರಲ್ಲಿ ನಾಲ್ಕು ವಿಭಾಗಗಳನ್ನು ತಯಾರಿಸಿದ್ದೆನು. ಮೊದಲನೆಯ ಭಾಗವು ಪೂರ್ಣವಾಗಲು ಬಾಗಲಕೋಟೆಯ ಕೆಲಮು ಹನೀಯರು ಸ್ವಾಮಿಯವರಿಗೆ ಹೇಳಲು ಅವರು ಖುದ್ದಾಗಿ ನಾನಿದ್ದ ಮನೆಯ ಸಮೀಪದಲ್ಲಿ ಸೊನ್ನದ ಶ್ರೀಮಂತ ಗಂಗಪ್ಪ ದೇಸಾಯಿಯವರ ಕಟ್ಟಡವು ಪ್ರಾರಂಭವಾಗಿದ್ದು ಅದೇ ಮನೆಯಲ್ಲಿ ಅವರು ಇಳಿದರು. ಆಗ ನಾನು ವಿಷಮಜ್ವರ ಪೀಡಿತನಾಗಿ ಚನ್ನಾಗಿ ಕುಳ್ಳಿರಲಿಕ್ಕೆ ಬರುತ್ತಿದ್ದಿಲ್ಲ. ಆದರೂ ಶ್ರೀ ಸ್ವಾಮಿಗಳು ನನ್ನ ಅನುಕೂಲತೆಗಾಗಿ ಈ ಗೃಹದಲ್ಲಿ ಇಳಿದು ಕೆಲವು ದಿವಸಗಳವರೆಗೆ ನಾನು ಸಂಗ್ರಹಿಸಿದ ಉಕ್ತಿಗಳನ್ನು ನನ್ನ ಕಡೆಯಿಂದ ಓದಿಸಿ ಕೊಳ್ಳುತ್ತಿದ್ದರು. ಅವುಗಳಲ್ಲಿರುವ ವಚನಗಳಲ್ಲಿಯ ಉಚ್ಚವಿಚಾರಗಳು ಸುಂದರ ನುಡಿಗಳು ಇವುಗಳನ್ನು ಕೇಳಿ ಅವರು ಹರ್ಷಿಸುತ್ತಿದ್ದರು. ಮತ್ತು ನನಗೆ ಈ ಗ್ರಂಥವನ್ನು ಅಚ್ಚು ಹಾಕಲಿಕ್ಕೆ ಪ್ರೋತ್ಸಾಹಿಸಿದರು ಈ ಅಚ್ಚುಹಾಕುವ ಕಾರ್ಯದಲ್ಲಿ ನನಗೆ ಶ್ರೀಮಂತ ಗಂಗಪ್ಪ ದೇಸಾಯರು ಧನ ಸಹಾಯವನ್ನು ಮಾಡಲು ಒಪ್ಪಿದರು. ಶ್ರೀ ಸ್ವಾಮಿಗಳು ಇದನ್ನು ಕೇಳಿ ಸಂತೋಷ ಪ್ರದರ್ಶನವನ್ನು ಮಾಡಿದರು. ಗ್ರಂಥದ ಮುದ್ರಣವು ಬೆಳಗಾವಿಯಲ್ಲಿ ಮುಗಿದ ಬಳಿಕ ನಾನು ಅದನ್ನು ಅವರಿಗೆ ತಲುಪಿಸಿದೆನು.

ಸ್ವಾಮಿಗಳವರ ಹಸ್ತದಲ್ಲಿ ಈ ಗ್ರಂಥವು ಬಂದ ಬಳಿಕ ಅವರು ತಮ್ಮ ಭೋಜನೋತ್ತರ ಕಾಲದಲ್ಲಿ ಅದರಲ್ಲಿಯ ಶ್ರೇಷ್ಠ ಉಕ್ತಿಗಳನ್ನು ತಮ್ಮನ್ನು ಕಾಣಲಿಕ್ಕೆ ಬಂದಂಥ ಜನರಿಗೆ ತಿಳಿಸಿ ಹೇಳುವರು. ಈ ಕಾರ್ಯವನ್ನು ಅವರು ಬಹುದಿನ ಮಾಡುತ್ತ ಬಂದರು. ಹೀಗೆ ತಾವಷ್ಟೇ ಅಲ್ಲ, ಮಂದಿರಕ್ಕೆ ಬಂದ ಮಠಾಧಿಕಾರಿಗಳಿಗೂ ಶಾಸ್ತ್ರಿಗಳಿಗೂ ಶಿವಶರಣರು ಎಂಥ ಮಹತ್ವದ ಕಾರ್ಯವನ್ನು ಮಾಡಿದ್ದಾರೆ ನೋಡಿರಿ ಎಂದು ಅವರಿಗೆ ತಿಳಿಸಿ ಹೇಳುವರು.

ಮುಂದೆ ಶ್ರೀಯುತ ರಂಗರಾವ ದಿವಾಕರ, ಶ್ರೀಯುತ ಬಿ. ಎಂ. ಶ್ರೀಕಂಠಯ್ಯ ಶ್ರೀಯುತ ಎಮ್. ಆರ್ ಶ್ರೀನಿವಾಸಮೂರ್ತಿ ಮೊದಲಾದ

ಮಹನೀಯರು ಶಿವಶರಣರ ಬಗ್ಗೆ ಯಾವಾಗಲೂ ಉಚ್ಚತರದ ಲೇಖಗಳನ್ನು ಬರೆಯುವದರಲ್ಲಿ ತೊಡಗಿದವರಾದರು.

ಹೀಗೆ ಶಿವಶರಣರ ವಚನಗಳನ್ನು ಮೊದಲು ಪ್ರಸಾರ ಮಾಡಿದ ವರು ಶ್ರೀ. ಹಾನಗಲ್ಲ ಕುಮಾರ ಸ್ವಾಮಿಗಳೇ ಇದ್ದಾರೆ. ಅವರು ಹೋದ ಲ್ಲೆಲ್ಲ ಶಿವಶರಣರ ವಿಚಾರಗಳು ತಮ್ಮ ಅಧಿಕಾರವಾಣಿಯಿಂದ ಜನರ ಮುಂದೆ ಪ್ರಸ್ತಾಪಿಸಿ ಅವುಗಳನ್ನು ಮುಂದಕ್ಕೆ ತಂದರು.

ಶ್ರೀ. ಸ್ವಾಮಿಗಳು ನಿಜಗುಣರ ಶಾಸ್ತ್ರವನ್ನು ಚನ್ನಾಗಿ ಪರಿಶೀಲಿಸಿದ ವರಿದ್ದರು. ಈ ಗ್ರಂಥದಲ್ಲಿ ಯೋಗಾಭ್ಯಾಸದ ತತ್ವಗಳು ವಿಸ್ತಾರವಾಗಿ ಬಂದಿರುತ್ತವೆ. ಶಿವಶರಣರ ಗ್ರಂಥಗಳಲ್ಲಿ ಬರುವ ಕ್ಲಿಷ್ಟ ಅಂತರಂಗಿಕ ವಿಚಾರಗಳನ್ನು ಶ್ರೀ ಸ್ವಾಮಿಗಳವರು ಬಹಳ ಹಗುರಾಗಿ ಜನರಿಗೆ ತಿಳಿಸಿ ಹೇಳುವರು. ಇದರಿಂದ ವಚನವಾಙ್ಮಯದ ಮಹತ್ವವು ಅವರಿಗೆ ಚನ್ನಾಗಿ ಬಿಂಬಿಸುತ್ತಿತ್ತು ಮುಂದೆ ಇದರ ಪ್ರಭಾವವು ಬೆಳೆಯುತ್ತಲೇ ಬಂದಿತು. ಈ ಪ್ರಭಾವವು ಬೆಳೆಯುತ್ತ ಇನ್ನೂ ವಿಶಾಲ ಸ್ಥಿತಿಯನ್ನು ಹೊಂದುವದ ರಲ್ಲಿ ಇದೆ. ಇದು ಪೂರ್ಣತಗೆ ಬರಲಿಕ್ಕೆ ಇನ್ನೂ ಕೆಲಕಾಲವು ಬೇಕಾಗ ಬಹುದು. ಈ ಮಹತ್ವದ ಕಾರ್ಯವು ಶ್ರೀ ಶಿವಯೋಗಿ ಮಂದಿರದ ಸ್ಥಾನ ದಲ್ಲಿಯೇ ಸ್ವಲ್ಪ ಕಾಲದಲ್ಲಿ ಪೂರ್ಣತೆಗೆ ಬರಬಹುದೆಂದು ನಿರೀಕ್ಷಿಸಲ್ಪಟ್ಟಿದೆ.

ಶಿವಶರಣರ ವಾಙ್ಮಯದಲ್ಲಿ ಸಂಕುಚಿತ ಭಾವನೆಗಳು ಎಷ್ಟು ಮಾತ್ರವೂ ಇರುವದಿಲ್ಲ. ಶ್ರೀ. ಹಾನಗಲ್ಲ ಕುಮಾರ ಸ್ವಾಮಿಗಳಲ್ಲಿ ಯಾವಾಗಲೂ ಶಿವಶರಣರ ಉದಾರ ಭಾವವು ಹೊರ ಹೊಮ್ಮುತ್ತಿತ್ತು. ಅವ ರನ್ನು ಕಾಣಬಂದವರು ಯಾವ ಜಾತಿಯುವರಿದ್ದರೂ ಅವರನ್ನು ಅವರು ಆದ ರಿಸದೆ ಇರುತ್ತಿದ್ದಿಲ್ಲ.

ಸ್ವಾಮಿಗಳವರು ಒಕ್ಕಲುತನ, ಪಶು ಸಂಗೋಪನ, ಈ ಮೊದಲಾದ ಕಾರ್ಯಗಳಿಗೆ ಉತ್ತೇಜನ ಕೊಡುತ್ತಿದ್ದರು. ಇಂಥ ಕಾರ್ಯಗಳಲ್ಲಿ ಅವರು ಸ್ವತಃ ಲಕ್ಷ ಹಾಕುತ್ತಿದ್ದರು. ಮಂದಿರದಲ್ಲಿ ಅನೇಕ ಜನ ವಟುಗಳು ಇರುತ್ತಿ ದ್ದರು. ಅವರೆಲ್ಲರಿಗೆ ಧಾರ್ಮಿಕ ಶಿಕ್ಷಣ ಕೊಡಲಿಕ್ಕೆ ಅವರು ತಕ್ಕ ಏರ್ಪಾಡು ಗಳನ್ನು ಮಾಡಿದ್ದರು. ಹೀಗೆ ಶಿಕ್ಷಣ ಹೊಂದಿದವರಲ್ಲಿ ಅನೇಕರು ನಾಡಿನಲ್ಲಿ ಇದ್ದು ಅವರು ಈಗ ಉಚ್ಚಪೀಠಗಳಿಗೆ ಅಧಿಕಾರಿಗಳಾಗಿದ್ದಾರೆ. ಇವರು ಯಾವಾಗಲೂ ಸಮಾಜ ಸೇವೆಯಲ್ಲಿರುವದು ಕಂಡು ಬರುತ್ತದೆ.

ಸ್ವಾಮಿಗಳವರು ಇಂಗ್ಲೀಷ ಭಾಷೆಯು ಪರಕೀಯ ಭಾಷೆಯೆಂದು ತಿಳಿದು ಎಂದೂ ಅದನ್ನು ತಿರಸ್ಕರಿಸಲಿಲ್ಲ. ಮಂದಿರದಲ್ಲಿ ಇಂಗ್ಲೀಷ ಸಹ ಶಿಕ್ಷಣಕ್ಕೋಸ್ಕರ ಅವರು ಕೆಲವು ಕಾಲ ಒಂದು ಶಾಲೆಯನ್ನು ಸ್ಥಾಪಿಸಿದ್ದರು.

ಅವರು ಸಾಕಷ್ಟು ನಿಧಿ ಕೂಡಿದ ಕೂಡಲೇ ಬಾಗಲಕೋಟೆಯಲ್ಲಿ ಒಂದು ಕಾರ್ಯಾಲಯವನ್ನು ಅಥವಾ ಗಿರಣಿಯನ್ನು ಸ್ಥಾಪಿಸಿದರು. ಅವರು ಮಂದಿರದ ಮತ್ತಲೂ ಕೃಷಿಯನ್ನು ಹೆಚ್ಚಿಸಿದರು, ಧಾರ್ಮಿಕ ವಿಧಿ ವಿಧಾನಗಳು ಸರಿಯಾಗಿ ನಡೆಯಬೇಕೆಂದು ಯೋಗ್ಯ ವ್ಯವಸ್ಥೆ ಮಾಡಿದರು. ಅವರ ಈ ಎಲ್ಲ ಯೋಜನೆಗಳು ಈಗಲೂ ಉತ್ತಮ ಸ್ಥಿತಿಯಲ್ಲಿ ಇರುತ್ತವೆ.

ಶ್ರೀ ಸ್ವಾಮಿಗಳವರು ಮೇಲೆ ಹೇಳಿದ ಪ್ರಕಾರ ಕಾರ್ಯಮಾಡುತ್ತ ಇಹಲೋಕವನ್ನು ತ್ಯಜಿಸಿದರು. ಆದರೂ ಅವರ ತರುವಾಯ ಶ್ರೀ ಹಾಲಕೆರೆ ಮಹಾಸ್ವಾಮಿಗಳು ಈಚೆಗೆ ಹಾನಗಲ್ಲು ಮಠಕ್ಕೆ ಪಟ್ಟವೇರಿದ ಹಾನಗಲ್ಲ ಮಹಾ ಸ್ವಾಮಿಗಳು ಮಂದಿರದ ವ್ಯವಸ್ಥೆಯನ್ನು ಚೆನ್ನಾಗಿ ಇಟ್ಟಿರುವದು ಶ್ಲಾಘನೀಯವಾಗಿದೆ. ಅವರು ಉತ್ತಮ ರೀತಿಯಿಂದ ಮಂದಿರವನ್ನು ನಡಿಸುತ್ತ ಬಂದಿದ್ದಾರೆ ಅವರ ಈ ಕಾರ್ಯಗಳು ಇನ್ನೂ ಹೆಚ್ಚಾಗಿ ಬೆಳೆಯುವಂತೆ ಬಸವಾದಿ ಪ್ರಮಥರು ಸಹಾಯಕರಾಗುವರೆಂದು ನಾನು ಭರವಸೆ ತಾಳಿರುವೆ

# ಧರ್ಮದ ಉತ್ಕರ್ಷತೆ

( ಬರೆದವರು;— ವಿ. ಚಿಕ್ಕಮಠ. ಜಿಲ್ಹಾ. ಧಾರವಾಡ ಮು. ಹೆಬ್ಬಳ್ಳಿ )



ಮಾನವನಾಗಿ ಹುಟ್ಟಿದ ಬಳಿಕ ಪ್ರತಿಯೊಬ್ಬನೂ ಭಕ್ತಿ ಜ್ಞಾನ ವೈರಾಗ್ಯ ಮೊದಲಾದ ಸದ್ಧರ್ಮದ ಫಲದಿಂದ ಆತನು ಉತ್ತಮೋತ್ತಮವಾದ ಗತಿ ಅಥವಾ ಮೋಕ್ಷವನ್ನು ಹೊಂದಲಿಕ್ಕೆ ಅವನಿಗೆ ಅವಕಾಶವುಂಟು. ಏಕೆಂದರೆ ಇದು ಕರ್ಮಭೂಮಿ ಉಳಿದವೆಲ್ಲವೂ ಭೋಗಭೂಮಿ. ಈ ಕರ್ಮಭೂಮಿಯಲ್ಲಿ ಮಾನವ ಶರೀರವೆಂಬ ಅಡಿಗಲ್ಲಿನ ಮೇಲೆ ಪತ್ತಾರನು ತನ್ನ ಅಡಿ ಗಲ್ಲಿನ ಮೇಲೆ ಆಭರಣಗಳನ್ನು ಹೇಗೆ ತಯಾರಿಸುತ್ತಾನೋ ಅದರಂತೆ ಮಾನವ ನಾಗಿ ಹುಟ್ಟಿದಬಳಿಕ ನ್ಯಾಯವಾದದು ಯಾವದು ಅನ್ಯಾಯವಾದದು ಯಾವದು ಎಂದು ವಿಚಾರ ಮಾಡುವದೇ ಮಾನವ ಧರ್ಮದ ಉತ್ಕರ್ಷತೆ ಇದರಿಂದ ಆತ್ಮ ಕಲ್ಯಾಣವೂ ಲೋಕಕಲ್ಯಾಣವೂ ಆಗುತ್ತದೆ. ನಿಜವಾಗಿಯು ಇದು ಕರ್ಮ ಭೂಮಿ ಇದು ಸ್ವರ್ಗಾಪವರ್ಗಳಿಗೂ ಬುನಾದಿ. ಜೀವನು ಉನ್ನತ ಸ್ಥಾನ ವನ್ನು ಹೊಂದಲು ಇದೊಂದು ವ್ಯಾಯಾಮ ಕೇಂದ್ರ ಇದರಲ್ಲಿ ನಿಸ್ವಾರ್ಥತೆ ಯಿಂದ ಕಾರ್ಯಮಾಡಿ ಮುಕ್ತಿ ಪಡೆಯಬೇಕು. ಈ ಲೋಕದ ಜೀವಿಗಳು ಪುಣ್ಯಶಾಲಿಗಳೂ ಪರೋಪಕಾರಿಗಳೂ ಎಂದು ದೇವತೆಗಳು ಹಾಡಿ ಹೊಗಳು ತ್ತಾರೆ. ಯಾಕಂದರೆ ಪುಣ್ಯವೆಲ್ಲವೂ ತೀರಿದನಂತರ ಪುನಃ ಮರ್ತ್ಯಲೋಕಕ್ಕೆ ಬರಲೇಬೇಕು. ಆದ್ದರಿಂದ ನಶ್ವರವಾದ ಸ್ವರ್ಗಕ್ಕಿಂತ ಮೃತ್ಯಲೋಕವೇ ಶ್ರೇಷ್ಠ. ಈ ಲೋಕದಲ್ಲಿ ಮಾನವನು ಯಾವಕಾಯಕವನ್ನಾದರೂ ನಿಸ್ವಾರ್ಥತೆ ಯಿಂದ ಕೈಕೊಂಡು ಅದನ್ನು ನೆರವೇರಿಸಿದರೆ ಅಂದೇ ಅವನಿಗೆ ಮುಕ್ತಿ. ಅದು ಪರಮಾತ್ಮನ ಸಾನಿಧ್ಯದಲ್ಲಿ ಸದಾ ಶಾಶ್ವತವಾದದ್ದು ಇಂಥ ಪವಿತ್ರವಾದ ಮಾನವ ಜನ್ಮದಲ್ಲಿ ಮನುಷ್ಯತ್ವವನ್ನು ಪಡೆದು ಆತ್ಮಕಲ್ಯಾಣ ಮತ್ತು ಲೋಕ ಕಲ್ಯಾಣ ಈ ಉಭಯ ಕಲ್ಯಾಣಗಳನ್ನು ಸಾಧಿಸಿಕೊಂಡು ಅಮರರಾದ ಮಹಾ ವಿಭೂತಿಗಳು ಅನೇಕರುಂಟು. ಉದಾ:— ಸಾಕ್ರೆಟೀಸ, ಬುದ್ಧ, ಬಸವೇಶ್ವರ, ರಾಮಕೃಷ್ಣ ಪರಮಹಂಸ, ಮಹಾತ್ಮಾಗಾಂಧಿ, ಸ್ವಾಮಿ ವಿವೇಕಾ ನಂದ ಮುಂತಾದವರು ಇವರೇ ತತ್ವಜ್ಞಾನಿಗಳು ಜೀವನ್ಮುಕ್ತರು. ಇವರೇ

ಮಾನವ ಧರ್ಮದ ಧುರೀಣರು ಪರಮಾತ್ಮನು ಒಲಿಯಬೇಕಾದರೆ ಸಾಮಾನ್ಯವಾಗಿ ಎಲ್ಲರಿಗೂ ಒಲಿಯಲಾರ. ಭಕ್ತ ಪರಾಧೀನ ಎಂಬ ಪ್ರಶಸ್ತಿ ಅವನಿಗಿರುವದು. ಅನೇಕವರ್ಷ ಅವಿಚ್ಛಿನ್ನವಾದ ಸೇವೆಯ ಫಲದಿಂದ ಆತನು ಒಲಿಯುತ್ತಾನೆ. ಆ ಸೇವೆ ನಿಷ್ಕಾಮ್ಯವಿರಬೇಕು ಧರ್ಮದ ದೃಷ್ಟಿಯಿಂದ ಗುರುಪದೇಶಾಮೃತದಿಂದ ನಾನು ಮಾಡುವೆ ನಾನು ಮಾಡುವ ಕಾರ್ಯವು ಎಲ್ಲಾ ವಿಧದಿಂದಲೂ ಪರಮಾತ್ಮನಿಗೆ ತೃಪ್ತಿಯಾದರೆ ಅಂದು ನಾನೇ ಧನ್ಯ. ತೃಪ್ತನಾಗಿ ಆತನು ನನಗೆ ಏನೆ ಕರುಣಿಸುವದಿರಲಿ ಅದು ನನಗೆ ಅನಪೇಕ್ಷಿತ ಅನಿರೀಕ್ಷತವೆಂದು ಆತನಿಗಿರಬೇಕು. ನಿರಪೇಕ್ಷೆಯು ಈಶ್ವರೀ ಗುಣವಿರುತ್ತದೆ. ಈ ಗುಣವು ಮನುಷ್ಯನಲ್ಲಿ ಬೆಳೆಯುತ್ತ ನಡೆದಂತೆ ಅವನ ಈಶ್ವರೀ ಸಾದೃಶ್ಯವು ಬರುತ್ತದೆ ಎಂದು ಮಹಾತ್ಮರ ಅಭಿಪ್ರಾಯ. ಈಶ್ವನಲ್ಲಿ ನಿರಪೇಕ್ಷೆಬುದ್ಧಿ ಇರುವಕಾರಣ ಅವನಲ್ಲಿ ಪರಿಪೂರ್ಣತ್ವವಿರುವದು. ಮನುಷ್ಯನು ದ್ರವ್ಯವನ್ನು ಸಂಪಾದಿಸಿ ತನ್ನ ಸೌಖ್ಯವನ್ನು ಬೆಳಿಸಿಕೊಂಡು ಅವನ ಜನ್ಮದ ಉದ್ದೇಶವು ಸಫಲವಾಯಿತೆಂದು ತಿಳಿಯಬಾರದು. ಮಾಡಿದ್ದು ಮರಿಯಲರಿಯದು ಹೋದದ್ದು ಬರಲರಿಯದು. ಆದ್ದರಿಂದ ಕಾಲವು ಹೋದ ಮೇಲೆ ಬಂದ ಬುದ್ಧಿಯು ನಿಷ್ಪ್ರಯೋಜಕವಾಗುವದು. ಕೆಟ್ಟ ಕಲ್ಪನೆಗಳಿಗೂ ಕೆಟ್ಟ ವಿಚಾರಗಳಿಗೂ ನಮ್ಮ ಮನಸ್ಸಿನಲ್ಲಿ ಸ್ಥಳವನ್ನು ಕೊಡದಂತೆ ಅದನ್ನು ಯಾವಾಗಲೂ ಸದ್ವಿವಿಚಾರಗಳಿಂದ ತುಂಬಬೇಕು. ಅಂದರೆ ಮನಸ್ಸಿನಲ್ಲಿ ದೊರಕಿಸಿಟ್ಟ ಶಾಂತತೆಯೆಂಬ ದ್ರವ್ಯವನ್ನು ಯಾರೂ ಅಪಹರಿಸಲಾರರು. ಸೌಖ್ಯವನ್ನು ದೊರಕಿಸಲಿಕ್ಕೆ ನಾವು ನಮ್ಮನ್ನು ಬಿಟ್ಟು ಹೊರಗೆ ಹುಡುಕುವ ಕಾರಣವಿಲ್ಲ. ಅದು ನಮ್ಮಲ್ಲಿಯೇ ಉಂಟು. ಅಹಂಕಾರ ಲೋಭ ಸ್ವಾರ್ಥಬುದ್ಧಿ ಮತ್ತು ಪ್ರಪಂಚದ ಮಹತ್ವಾಕಾಕ್ಷೆಗಳಿಂದ ನಮಗೆ ಇಹಲೋಕದಲ್ಲಿ ಸೌಖ್ಯವು ದೊರಕಬಹುದು ಆದರೆ ನಾವು ಬರಿ ಇಹಲೋಕ ಸೌಖ್ಯಕ್ಕಾಗಿ ಆತುರಪಟ್ಟು ಕುಳಿತರೆ ಫಲವಿಲ್ಲ ಇಹಲೋಕದ ಸೌಖ್ಯವು ಕ್ಷಣಭಂಗುರವಾದುದು ಆದ್ದರಿಂದ ನಾವು ಕಾಮ ಕ್ರೋಧಲೋಭ ಮೋಹ ಮದ ಮಾತ್ಸರಗಳೆಂಬ ಷಡ್ರಿಪುಗಳನ್ನು ಗೆದ್ದು ಸನ್ಮಾರ್ಗದಿಂದ ವರ್ತಿಸಿ ಪರಲೋಕದ ಸೌಖ್ಯವನ್ನು ಸಂಪಾದಿಸುವದಕ್ಕೆ ಆತುರಪಡತಕ್ಕದ್ದು ತನ್ನ ತಪ್ಪುಗಳನ್ನು ತಿಳಿದುಕೊಂಡು ಅವುಗಳನ್ನು ತಿದ್ದಲಿಕ್ಕೆ ಯತ್ನಿಸುವ ಮನುಷ್ಯನೇ ಎಲ್ಲರೊಳಗೆ ಜಾಣನು ಅವನೇ ಸುಖಿಯು ಬರೀ ಹಣದಿಂದ ಅಥವಾ ಅಧಿಕಾರದಿಂದ ಸೌಖ್ಯವು ದೊರಕುವದಿಲ್ಲ ನಾವು ಜನರನ್ನು ಪ್ರೀತಿಸಿ ಜನರಿಗೆ ಉಪಕಾರವನ್ನು ಮಾಡಿ ನಮ್ಮ ಮನಸ್ಸಿನ ಶಾಂತತೆ

ಯನ್ನು ಇಟ್ಟುಕೊಳ್ಳದಿದ್ದರೆ ನಮ್ಮ ಹತ್ತರ ಬೇಕಾದಷ್ಟು ಹಣವಿದ್ದರೂ ನಮಗೆ ಬೇಕಾದಂಥ ಅಧಿಕಾರವಿದ್ದರೂ ನಮಗೆ ಸೌಖ್ಯವಾಗುವದಿಲ್ಲ ಐಶ್ವರ್ಯಕ್ಕಿಂತ ಬಡತನವೆ ಹೆಚ್ಚು ಸುಖಕರವಾದದ್ದು. ಇದರ ಬಗ್ಗೆ ಅನೇಕ ದೃಷ್ಟಾಂತ ವಿರುವವು. ದೈವವುಳ್ಳವರು ಜೀವನರಾಗಬಾರದು ಅವರಲ್ಲಿ ಔದಾರ್ಯವಿರ ತಕ್ಕದ್ದು ಕೈ. ಎತ್ತಿಕೊಟ್ಟದ್ದು ಈಗಲೂ ಇರುತ್ತದೆಂದೂ ವೆಚ್ಚಮಾಡಿದ್ದು ಹಿಂದಕ್ಕೆ ಇತ್ತೆಂದು ತನ್ನ ಹಿಂದೆ ಉಳಿದದ್ದು ಕಳೆದುಹೋಯಿತೆಂದೂ ಎಣಿಸ ಬೇಕು ಎಂಬುದಾಗಿ ಹಲವು ಜ್ಞಾನಿಗಳ ಅಭಿಪ್ರಾಯ. ಇದಕ್ಕೆ ಸರ್ವಜ್ಞನ ಉಕ್ತಿ:— ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ ಕೊಟ್ಟದ್ದು ಕೆಟ್ಟತನ ಬೇಡ ಅದು ಕಟ್ಟಿಹುದು ಬುತ್ತಿ ಸರ್ವಜ್ಞ ನಾವು ಯೋಗ್ಯರಾದ ಮಿತ್ರ ರನ್ನು ಆರಿಸುವಂತೆ ಒಳ್ಳೇ ಗ್ರಂಥಗಳನ್ನು ಆರಿಸಿಕೊಂಡು ಓದತಕ್ಕದ್ದು ಮನಸ್ಸಿಗೆ ದುರ್ಬೋಧವಾಗುವ ಗ್ರಂಥಗಳನ್ನು ಓದಬಾರದು ಬೋಧವಿಲ್ಲದ ಓದು, ನೀತಿಯಿಲ್ಲದ ಗ್ರಂಥ ಇವೆರಡು ನಿಷ್ಪ್ರಯೋಜಕ. ಒಳ್ಳೆ ಗ್ರಂಥಗಳನ್ನು ಓದುವದರಿಂದ ನಮ್ಮ ಜ್ಞಾನವು ಬೆಳೆದು ಮನಸ್ಸಿಗೆ ಆನಂದವಾಗುವದು ಆದರಿಂದ ಜ್ಞಾನ ಭಾಂಡಾರವನ್ನೂ ನೀತಿ ಧರ್ಮಗಳನ್ನೂ ಬೆಳೆಸತಕ್ಕಂಥ ಗ್ರಂಥಗಳನು ಓದಿ ಅದರಂತೆ ನುಡಿದು ನಡೆದು ಮಾನವ ಜನ್ಮವನ್ನು ಸಾಫಲ್ಯ ಮಾಡಿ ಕೊಳ್ಳುವದೇ ಮುಖ್ಯ ಕರ್ತವ್ಯವು. ಇದೇ ಆತ್ಮಕಲ್ಯಾಣ ಲೋಕ ಕಲ್ಯಾಣವು. ಇದೇ ಮಾನವ ಧರ್ಮದ ಉತ್ಕರ್ಷತೆಯು.

———

# ೭೭೦ ಅಮರಗಣಾಧೀಶರ ಸ್ಮಾರಕ ಎಂಥದಿದ್ದರೆ ಒಳಿತು ?

(ಲೇಖಕರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ ತಾ. ಇಂಡಿ)



ಅನೇಕ ಪತ್ರಿಕೆಗಳಲ್ಲಿ ಈ ಸ್ಮಾರಕದ ಬಗ್ಗೆ ವಿರೋಧ ಹಾಗೂ ಅವಿರೋಧ ಪರವಾಗಿ ಲೇಖಗಳು ಪ್ರಕಟವಾಗಿವೆ. ಅಮರಗಣಾಧೀಶರ ಹೆಸರಿನಿಂದ ಒಂದೊಂದು ಲಿಂಗವನ್ನು ಸ್ಥಾಪಿಸುವದು ವ್ಯವಹಾರಿಕ ದೃಷ್ಟಿಯಿಂದ ಶಾಸ್ತ್ರದ ದೃಷ್ಟಿಯಿಂದ, ಧರ್ಮದ ದೃಷ್ಟಿಯಿಂದ, ನೈತಿಕದೃಷ್ಟಿಯಿಂದ, ಆಧ್ಯಾತ್ಮಿಕ ದೃಷ್ಟಿಯಿಂದ ಅಥವಾ ಯಾವದೇ ದೃಷ್ಟಿಯಿಂದ ತಪ್ಪುವಿಲ್ಲೆಂದು ಅನಿಸುವದು. ಲಿಂಗಮಯ ಜಗತ್ತು, ಲಿಂಗಮಧ್ಯ ಜಗತ್, ಸರ್ವಾಂಗಲಿಂಗವು ಪರವಸ್ತುವಿನ ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವದು ತತ್ವವಾಗಿದೆ. ಶಿವನು- ಸದ್ರೂಪನು. ಶಕ್ತಿ ಚಿದ್ರೂಪಳು.

ಲಿಂಗವೆಂಬುದು ಸರ್ವ ಕಾರಣ ನಿರ್ಮಲ ಲಿಂಗ ವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ, ಲಿಂಗವೆಂಬುದು ಸರ್ವ ಲೋಕೋತ್ಪತ್ತಿಗೆಕಾರಣ ಲಿಂಗವೆಂಬುದು ಸರ್ವ ತತ್ವ ಪೂರ್ಣ, ಲಿಂಗವೆಂಬುದು ಪರಶಕ್ತಿ ಮತ ಪರಶಿವನ ದೇಹ, ಲಿಂಗವೆಂಬುದು ಪರಶಿರನ ಘನತೇಜ, ಲಿಂಗವೆಂಬುದು ಪರಶಿವನ ನಿರಂತರಾನಂದ ಸುಖವು, ಲಿಂಗವೆಂಬುದು ಪರಶಿವನ ಪರಮ ಜ್ಞಾನ.

ಈ ಪ್ರಕಾರ ಲಿಂಗವು ವೀರಶೈವ ದರ್ಶನದಲ್ಲಿ, ತತ್ವದಲ್ಲಿ, ಸಂಸ್ಕೃತಿಯಲ್ಲಿ ಸಿದ್ಧಾಂತದಲ್ಲಿ ಹಾಸು ಹೊಕ್ಕಾಗಿರುವದು ಲಿಂಗವು ವೀರಶೈವನ ಉಸುರಾಗಿದೆ., ಮತ್ತು ಪ್ರಾಣವಾಗಿದೆ. ಹೀಗಾಗಿ ವೀರಶೈವನಿಗೆ ಲಿಂಗವು ಪ್ರತಿ ಹೆಜ್ಜೆಜ್ಜೆಗೆ ತನ್ನ ಪ್ರಜ್ಞೆಯನ್ನು ತಂದು ಕೊಡುವದು ತಾನಾರು ಎಂದು ಅದು ಅವನಿಗೆ ತಿಳಿಸಿ ಕೊಡುವ ಹಿರಿದಾದ ಮಹಾಮಂತ್ರವಾಗಿದೆ. ಅವನು ಸಕಲ ಇಂದ್ರಿಯಗಳಲ್ಲಿ ಅಂತರಂಗ ಬಹಿರಂಗಗಳಲ್ಲಿ ಸಹ ಲಿಂಗವನ್ನು ಅಳವಡಿಸಿಕೊಳ್ಳಬೇಕಾಗಿದೆ.

ಹೀಗೆ ಎಲ್ಲ ಕಡೆಗಳಲ್ಲಿ ಲಿಂಗದ ಸ್ಮರಣೆಯು ಸಾಮಾನ್ಯರಿಗೂ ಕೂಡ ಬರುವಂತೆ ಅದರ ಧ್ಯಾನ ಪೂಜೆಗಳು ಹೆಚ್ಚಾಗುವಂತೆ ಎಲ್ಲ ಮಾನವ ಕೋಟಿಯು ಅದಕ್ಕಾಗಿ ಮರಳಾಗುವಂತೆ ಅವುಗಳನ್ನು ಸ್ಥಾಪಿಸಬೇಕೆಂದು ನನ್ನ ವೈಯಕ್ತಿಕ ಮತವಲ್ಲದೆ ಮಹಾತ್ಮರ ಅಭಿಪ್ರಾಯವಿದೆ. ಇಂಥ ಲಿಂಗವು ಸ್ಥಾವರವಿರಬಹುದು. ಅಥವಾ ಇಷ್ಟಲಿಂಗವಾಗಿರಬಹುದು. ಯಾವದಾದರೂ ಲಿಂಗವೇ ಸರಿ. ಅದರಲ್ಲಿ ದ್ವೇಷ ಮತ್ಸರ ಪಡಬೇಕಾದುದೇನೂ ಇಲ್ಲ. ಯಾರು ಸ್ಥಾವರ ಲಿಂಗ ದಾಟಿ ಹೋಗಿರುವರೋ ಅವರಿಗೆ ಇಷ್ಟಲಿಂಗ ವಿದ್ಯೆಯಿದೆ. ಯಾರು ಇಷ್ಟಲಿಂಗ ದಾಟಿ ಮುಂದೆ ಹೋಗಿದ್ದಾರೋ ಅವರಿಗೆ ಭಾವಲಿಂಗವಿದೆ. ಯಾರು ಭಾವಲಿಂಗ ದಾಟಿ ಮುಂದೆ ಹೋಗಿರುವರೋ ಅವರಿಗೆ ಮಹಾಲಿಂಗ ಪರಮಾತ್ಮ ಲಿಂಗಗಳಿರುವವು. ಆದರೂ ಇವು ಒಂದಕ್ಕೊಂದು ಪೋಷಕವಾಗಿರುವವೇ ಹೊರತು ವಿನಾಶಕವಾಗಿಲ್ಲ. ಇವು ಯಾವವೂ ಒಂದಕ್ಕೊಂದು ವೈರಿಗಳಲ್ಲ ಲಿಂಗದಲ್ಲಿ ವಿಕಾರವಾಗಿದೆ. ಹೀಗಾಗಿ ಒಂದೇ ಲಿಂಗದಲ್ಲಿ ಸೂಕ್ಷ್ಮವಾಗಿ ವಿಚಾರಿಸಿದಲ್ಲಿ ೫೭ ಲಿಂಗಗಳಾಗಿವೆ.

ಇಷ್ಟಲಿಂಗಗಳನ್ನೇ ಇಡಬೇಕೆಂದು ಹೇಳುವವರೇನು ಅವುಗಳನ್ನು ಕೊರಳಲ್ಲೆ ಕಟ್ಟಿದ್ದಾರೆ. ಅದನ್ನು ಕೊರಳ ಬಿಡಿಸಿದ ಕೂಡಲೇ ಸ್ಥಾವರಲಿಂಗವೆ ಆಗುವದು. ಹೀಗಾಗಿ ಶರಣರ ಸ್ಮಾರಕಗಳನ್ನು ಸ್ಥಾವರಲಿಂಗಗಳಿಂದಲೇ ಮಾಡುವದು ಎಲ್ಲ ದೃಷ್ಟಿಯಿಂದ ಬಹಳೇ ಒಳ್ಳೆಯದು. ಇದರಿಂದ ಕೆಳ ಮಟ್ಟದ ಸಕಲ ಜಾತಿಯ ಜನರಿಗೆ ಭಕ್ತಿ ಪ್ರೀತಿಗಳು ಸಹಜ ಜನಿಸುವದರಲ್ಲಿ ಸಂದೇಹವಿಲ್ಲ.

ಕೆಲವು ಶರಣರು ಸ್ಥಾವರಲಿಂಗದ ಖಂಡನೆ ಮಾಡಿದ್ದುಂಟು. ಅಲ್ಲದೆ ಕೆಲವು ಶರಣರು ಇಷ್ಟಲಿಂಗದ ಖಂಡನೆಗಳನ್ನು ಸಹ ಮಾಡಿದ್ದ ವಚನಗಳನ್ನು ಕಾಣಬಹುದು. ಅದೆಲ್ಲ ಆಯಾ ಪರಿಸ್ಥಿತಿ ದೇಶಕಾಲ ವ್ಯಕ್ತಿಗೆ ಮಾತ್ರ ಸಮ್ಮಂಧಿಸಿದ್ದಾಗಿದೆ. ಸಿದ್ಧರಾಮನು ಯೋಗಿಯು ಉಚ್ಚತರದ ಸಾಧಕನು ಅವನ ಲಿಂಗದ ಗುಡಿ ಕಟ್ಟುವದನ್ನು ಖಂಡಿಸಿ ಇಷ್ಟಲಿಂಗ ಕಟ್ಟಿಕೊಳ್ಳಲು ಹಾಗೆ ಮಾಡಿದ್ದಾನೆ. ಇದು ಎಲ್ಲರಿಗೂ ಹೇಗೆ ಸಂಬಂಧವಾಗುವದು? ಇದರಂತೆ ಇಷ್ಟಲಿಂಗದ ಬಗ್ಗೆ ಅತೀ ಅಭಿಮಾನ ಭಕ್ತಿ ಪ್ರೀತಿಗಳನ್ನು ತೋರಿಸಿದ ಒಬ್ಬ ಶರಣನಿಗೆ ಅದನ್ನು ಸಹ ಆ ಪ್ರಸಂಗದಲ್ಲಿ ಖಂಡಿಸಿ ಇವು ಲಿಂಗಕ್ಕಿಂತಲೂ ಮುಂದೆ ಹೋಗಲು ತಿಳಿಸಿದ್ದಾನೆ,

ಇದರಂತೆ ಸ್ಥಾವರಲಿಂಗದ ನಿಂದೆ ತಿರಸ್ಕಾರ ಗತಿಯಾಗಿರುವದೇ ಹೊರತು ಸರಿಯಲ್ಲ. ಕಲ್ಲದೇವರ ಮಾಡಿ ಕಲ್ಲನುನೆ ಮಾಡಿ ಆ ಕಲ್ಲ ಕಲ್ಲಮೇಲೆ ಕೆಡವಿದರೆ ದೇವರೆತ್ತ ಹೋದರೋ ಎಂದು ಪ್ರಭುದೇವರು ಅಂದರೆ ಅವರ ಇಷ್ಟಲಿಂಗವನ್ನು ಧರಿಸಿಲ್ಲವೆಂದು ಅರ್ಥ ಮಾಡಬಾರದು. ಇಷ್ಟಲಿಂಗವನ್ನು ಕೂಡ ಕಲ್ಲಿನಿಂದಲೇ ಮಾಡುವರಲ್ಲವೇ ? ಸಜೀವ ಶರೀರದ ಮೇಲೆ ಕಲ್ಲನ್ನು ಕಟ್ಟಿಕೊಂಡು ಭಾರಹೊತ್ತು ತಿರುಗಬಾರದೆಂದು ಹೇಳಿದಂತೆ ಆಗುವದಿಲ್ಲವೆ ?

ಹೀಗೆ ಯಾರೂ ಅನರ್ಥ ಮಾಡಬಾರದು. ದೇಶಕಾಲ ಪರಿಸ್ಥಿತಿ ವ್ಯಕ್ತಿಯನ್ನು ವಿಚಾರಿಸಿ ಅದಕ್ಕೆ ಅರ್ಥ ಮಾಡಬೇಕೇ ಹೊರತು ವಿಪರೀತ ಮಾಡಿಕೊಳ್ಳಬಾರದು. ವಿಪರೀತ ತಿಳಿದುಕೊಂಡೇ ಲೋಕ ಬಹಳೇ ಕೆಟ್ಟು ಹೋಗಿದೆ. ಒಂದೊಂದು ಸಮಯದಲ್ಲಿ ಒಂದೊಂದು ವಿಷಯವನ್ನು ತಿಳಿಸುವ ಪ್ರಸಂಗದಲ್ಲಿ ಅನೇಕ ಬಗೆಯ ಒಂದಕ್ಕೊಂದು ವಿರೋಧ ವಾಕ್ಯಗಳನ್ನು ನುಡಿದಂತೆ ಕಂಡರೂ ಹಾಗೆ ಅವುಗಳ ಇಂಗಿತವೆಲ್ಲ ಆ ಪರಿಸ್ಥಿತಿಗೆ ತಕ್ಕಂತೆ ನುಡಿದವುಗಳೆಂದು ತಿಳಿದು ಸಮಾಧಾನ ಪಡಬೇಕು.

ನಮ್ಮ ಗುರುಗಳನ್ನು, ನಮ್ಮ ಹಿರಿಯರನ್ನು, ನಮ್ಮ ಶರಣರನ್ನು ನಮಗಾಗಿ ಪ್ರಾಣ ತೆತ್ತವರನ್ನು ನಾವು ಮನ್ನಿಸಲೇಬೇಕು. ಅವರ ಸ್ಮಾರಕಗಳ ಮುಂದೆ ಮಣಿಯಲೇ ಬೇಕು ಆ ಸ್ಮಾರಕಗಳಿಗೆ ವಿನಂಬ್ರವಾಗಿ ನಡೆಯಬೇಕು. ಅವುಗಳ ಸ್ತುತಿಸ್ತೋತ್ರಗಳನ್ನು ಕಾಪಾಡಬೇಕು. ಅಂದರೆ ನಾವು ಮನುಷ್ಯರು. ಇಲ್ಲವಾದರೆ ನಾವು ಪಶುಪಕ್ಷಿಗಳೇ ಸರಿ. ಅವುಗಳನ್ನು ನಿಂದಿಸಿದರೆ ತಿರಸ್ಕರಿಸಿದರೆ ಪಶುಪಕ್ಷಿಗಳಿಂದ ನಾನೇನು ಹೆಚ್ಚಿನವರಲ್ಲ. ಯಾಕೆಂದರೆ ಸ್ಮಾರಕಗಳ ಮೇಲೆ ಅವು ಕೂತು ಮಲಮೂತ್ರಗಳನ್ನು ಬಿಡುವವು. ಹಾಗೇ ನಾವು ಮಾಡಿದರೆ ಪಶುಪಕ್ಷಿಗಳಂತೆ ಅವುಗಳ ಮೇಲೆ ಮಲಮೂತ್ರಗಳನ್ನು ಬಿಟ್ಟಂತೆಯೇ ಸರಿ. ಅದರಲ್ಲಿ ಶಿವಶಕ್ತಿಯರ ಸ್ಮಾರಕವಿರುವದು. ಶಿವ–ಶಕ್ತಿಯರನ್ನು ಕೂಡಿಸಿದ್ದರ ಅಂದರೆ ಲಿಂಗಾಂಗ ಸಾಮರಸ್ಯದ ಸರ್ವಾಂಗಲಿಂಗ ಆದದ್ದರ ಗುರುತಾಗಿದೆ. ಅದಕ್ಕೆ ಸ್ಮಾರಕಗಳನ್ನು ಸ್ಥಾವರಲಿಂಗಗಳಿಂದ ಮಾಡುವದು ಒಳಿತು. ಇದು ಯಾವ ದೃಷ್ಟಿಯಿಂದಲೂ ಕೆಡಕಲ್ಲ. ಲಿಂಗ ಐಕ್ಯರಾದುದರ ಕುರುಹು ಇದಾಗಿದೆ. ಬರೆ ಕಟ್ಟೆಯನ್ನು ಕಟ್ಟಿಸಿದ್ದರೆ ಕಟ್ಟೆ ಐಕ್ಯವಾಗುವದು. ಇದು ಸರಿಯಲ್ಲ. ಅವರ ಮೂರ್ತಿಗಳಿಗಿಂತ

ಲಿಂಗವಾದರೆ ಹೆಚ್ಚು ಪವಿತ್ರವಾಗುವದು. ಈಗ ವಿಜಾಪುರದಲ್ಲಿ ೭೭೦ ಅಮರಗಣಂಗಳ ಸ್ಮಾರಕವಾಗಿ ೭೭೦ ಲಿಂಗಗಳನ್ನು ೩ ಗೋಡೆಗಳಲ್ಲಿ ಸಾಲಿನ ಮೇಲೆ ಸಾಲ ಗೋಡೆಗಳನ್ನು ಮಾಡಿ ಅವುಗಳಲ್ಲಿ ಒಂದೊಂದು ಲಿಂಗಗಳನ್ನು ಕಿತ್ತಿ ತೆಗೆಯದಂತೆ ಸ್ಥಾಪಿಸುವದಾಗಿದೆ. ಸಾಲುಸಾಲಾಗಿ ಬರೆ ಲಿಂಗಗಳನ್ನು ಕಾಣುವವು. ಒಂದೊಂದು ಗೋಡೆಯಲ್ಲಿ ೨೫೬ ಮಾಡುಗಳು ಅಷ್ಟುಲಿಂಗಗಳು ಎಂದು ಹೆರಡುವದು. ಉಳಿದ ಎರಡು ಮಾಡುಗಳು ಉಳಿದ ಗೋಡೆಗಳಲ್ಲಿ ಎಂದು ಕೇಳಬಹುದು. ರೂಪಾಯಿ ಕೊಟ್ಟವರ ಹೆಸರು ಮಾಡಿನ ಕೆಳಗೆ ಮೇಲೆ ಆ ಶರಣರ ಹೆಸರು ಇಷ್ಟಾಗುವದು. ಈ ಸ್ಮಾರಕ ಯೋಜನೆಯೊಂದು ಕೇಳಿದ್ದೇವೆ. ಇದು ಒಳಿತು ಸರಿ ಅಡ್ಡಿ ಇಲ್ಲ. ಆದರೂ ಇದಕ್ಕೂ ಸ್ವಲ್ಪ ವಿಶಾಲದೃಷ್ಟಿಯನ್ನಿಟ್ಟುಕೊಂಡು ಈ ಸ್ಮಾರಕವನ್ನು ಪ್ರಾರ್ಥನಾಮಂದಿರವನ್ನು ರಚಿಸುವದು ಇದು ಹೆಚ್ಚು ಶ್ರೇಯಸ್ಕರ ಹೆಚ್ಚು ಒಳಿತು ಹೆಚ್ಚು ಅಡ್ಡಿ ಇಲ್ಲ ಹೆಚ್ಚು ಸರಿ ಎಂದು ಅನಿಸುವದು. ಈ ಪ್ರಾರ್ಥನಾಮಂದಿರದಲ್ಲಿ ಪ್ರವೇಶಮಾಡಿದ ಪ್ರತಿ ಮಾನವನು ದಂಗು ಬಡಿಯಬೇಕು. ಮುಗ್ಧನಾಗಬೇಕು. ಮತ್ತು ವಿನಯದಿಂದ ಬಾಗಿ ಹೊರಗೆ ಬರಬೇಕು. ವಿಜಾಪುರದಲ್ಲಿಯ ಸಕಲ ಸ್ಮಾರಕಗಳಿಗಿಂತ ಇದು ಹೆಚ್ಚಿನದೆಂದು ಅನಿಸಬೇಕು. ಅಂಥದನ್ನು ಇನ್ನೂ ಯಾರೂ ಮಾಡಿಲ್ಲೆಂದು ಅನಿಸಬೇಕು. ಅಂಥ ಸ್ಮಾರಕವನ್ನು ರಚಿಸಬೇಕೆಂದು ನಾವು ಸೂಚಿಸಬಯಸುವೆವು. ಅದೇನೆಂದರೆ ಪ್ರತಿಯೊಂದು ಮಾಡಿನಲ್ಲಿ ಆಯಾ ಶರಣರ ತೈಲಚಿತ್ರವನ್ನು ತೆಗೆಯಿಸಿ, ಅದರ ಮುಂಭಾಗದಲ್ಲಿ ಒಂದು ಚಿಕ್ಕ ಸಂಗಮವರಿ ಲಿಂಗವನ್ನು ಸ್ಥಾಪಿಸಬೇಕು. ಹಣಕೊಟ್ಟವರ ಹೆಸರುಗಳನ್ನು ಸಾಲಾಗಿ ಒಂದು ಗೋಡೆಯ ಮೇಲೆ ಒಂದರ ಕೆಳಗೊಂದು ಬರೆಯಬಹುದು. ಮೇಲಿಂದ ಮೇಲೆ ಇಂಥ ಸ್ಮಾರಕಗಳನ್ನು ರಚಿಸುವದಿಲ್ಲ. ಒಮ್ಮೆ ಆದರೆ ಆಗಿ ಹೋಗುವದು. ಅದಕ್ಕೆ ಶರಣರ ತೈಲಚಿತ್ರಗಳನ್ನು ಬರೆಯಿಸಿ ಅದರ ಒಂದೊಂದು ಮಹತ್ವದ ವಚನಗಳನ್ನು ಅಲ್ಲಿ ಬರೆದುಬಿಡಬೇಕು. ಅಂದರೆ ಪ್ರತಿ ಜಾತಿಯವರಿಗೂ ಈ ಸ್ಮಾರಕವು ಪೂಜ್ಯವಾಗುವದು. ಯಾಕಂದರೆ ಅದರಲ್ಲಿ ಎಲ್ಲ ಜಾತಿಯ ಶರಣರೂ ಇದ್ದಾರೆ. ಅಂದರೆ ಎಲ್ಲ ಕಾಯಕದವರೂ ಇದ್ದಾರೆ. ಎಲ್ಲರಿಗೂ ಆನಂದವೆನಿಸುವದು. ಎಲ್ಲರಿಗೂ ವೀರಶೈವರಾಗಲಿಕ್ಕೆ ಬರುವದೆಂದು ಈ ಸ್ಮಾರಕವು ತಿಳಿಸುವದು. ಜಾತಿ ಅಳಿದು

ನೀತಿ ಉಳಿಯುವವೆಂದು ಇದು ಸೂಚಿಸುವದು. ಎಲ್ಲ ಕಾಯಕಗಳೂ ಅಷ್ಟೇ ಎಂದು, ಇದು ತಿಳಿಸುವದು. ಕಾಯಕದಿಂದ ಜಾತಿ ಬರುವದಿಲ್ಲೆಂದು ಇದು ತಿಳಿಸುವದು ಸಮತೆ ಸಮಾನತೆಯು ಸ್ಥಾನ, ಧರ್ಮತತ್ತ್ವವೆಂದು ಇದು ಬೋಧಿಸುವದು. ಇದಕ್ಕೆ ಶರಣರ ತೈಲಚಿತ್ರಗಳನ್ನು ತೆಗೆಯಿಸಿ ಲಿಂಗ ಸ್ಥಾಪಿಸಿ ಸ್ಮಾರಕ ನಿರ್ಮಿಸಿರಿ ಅಂದರಾಯಿತು.

ಇನ್ನು ಮೇಲೆ ಇವುಗಳ ಬ್ಲಾಕುಗಳನ್ನು ಮಾಡಿಸಿ ಶರಣರ ಚಿತ್ರ ಮಯ ಪುಸ್ತಕವನ್ನು ರಚಿಸಬೇಕು. ಒಂದು ಪಾನಿನ ಮೇಲ್ಭಾಗದಲ್ಲಿ ಅವರ ಚಿತ್ರ, ಒಂದು ವಚನ, ಅವರ ಹೆಸರು, ಹಿಂಬದಿಯಲ್ಲಿ ಅವರ ಸಂಕ್ಷೇಪ ಚರಿತ್ರೆ ಹೇಗೆ ರಚಿಸಬೇಕು ? ಅಂದರೆ ೧೯೩೦ರ ಒಂದು ದಿವ್ಯ ಚಿತ್ರಮಯ ಶರಣರ ಹೊತ್ತಿಗೆಯಾಗುವದು. ಇದು ಒಂದು ದೊಡ್ಡ ಉಪಕಾರವೇ ಸರಿ. ಕಲಾಸಾಹಿತ್ಯ ಧರ್ಮ ಭಕ್ತಿ ಜ್ಞಾನ ಮೊದಲಾದವುಗಳ ಸಂಗಮವಾಗುವದು. ಈ ಸ್ಮಾರಕವು ಅವಕ್ಕೆ ಸ್ಮಾರಕದ ಕಮೀಟಿಯವರು ಇದನ್ನು ಇನ್ನೂ ಕೂಲಂಕುಷವಾಗಿ ವಿಚಾರಿಸಿ ಕಾರ್ಯ ಪ್ರವರ್ತರಾಗಬೇಕು. ಎಂದು ಸೂಚಿಸುವೆವು.

# ಪಂಚಾಚಾರ್ಯರ ಚರಿತ್ರೆಯೂ ಪುರಾಣವೂ

ಕೆಲವು ಗ್ರಂಥಗಳಿಗೆ 'ಚರಿತ್ರೆ' (ಚರಿತೆ) ಎಂದು ಹೆಸರಿಟ್ಟಿದ್ದರೂ ಈಗಿನ ಶಾಲೆಗಳಲ್ಲಿ ಬೋಧಿಸುವಂತಹ ನಿಜ ಸಂಗತಿಗಳನ್ನೊಳಗೊಂಡ ಚರಿತ್ರೆಯಂತೆ ಅವು ಇರುವದಿಲ್ಲ. ಉದಾಹರಣೆ:— ಪಂಡಿತಾರಾಧ್ಯ ಚರಿತೆ. ವೀರಶೈವರಲ್ಲಿ ಸರಿಯಾದ ಚರಿತ್ರೆಯನ್ನು ಬರೆದಿಡುವ ರೂಢಿಯಿಲ್ಲದುದರಿಂದ ಸಮಾಜದ ಮೂಲರಾದ ಮಹನೀಯರ ವಿಷಯವಾಗಿ ನಮಗೆ ನಿಶ್ಚಯವಾದ ಸಂಗತಿಳು ದೊರಕುವುದು ಕಷ್ಟವಾಗಿದೆ. ವ್ಯಾಸ ಋಷಿಗಳೇ ಮೊದಲಾದವರು ಪುರಾಣಗಳನ್ನು ಬರೆದಂತೆ ಲಿಂಗಾಯತರೂ ಪುರಾಣಗಳನ್ನು ಬರೆದಿರುತ್ತಾರೆ. ಈ ಪುರಾಣಗಳು ಉತ್ಪ್ರೇಕ್ಷೆ ಅತಿವರ್ಣನೆ (Exaggeration), ಕೌತುಕ, ಪವಾಡಗಳಿಂದ ತುಂಬಿಹೋಗಿ ಇರುತ್ತವೆ. ಯಥಾರ್ಥ ವಿಷಯವು ಹೀಗೆಯೇ ಎಂದು ನಿರ್ಣಯಿಸಲು ಕೆಲವು ಸಂದರ್ಭಗಳಲ್ಲಿ ಸುಲಭಸಾಧ್ಯವಿಲ್ಲದಂತೆ ಆಗಿದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ನಿಜವಲ್ಲದ ವಿಷಯಗಳೂ ಅವುಗಳಲ್ಲಿ ಸೇರಿಕೊಂಡಿವೆ. "ರವಿ ಕಾಣದುದ ಕವಿ ಕಂಡ" ಎಂಬ ಗಾದೆಯಂತೆ ಕವಿಗಳು ನಿಜವಲ್ಲದುದನ್ನೂ ಉತ್ಪ್ರೇಕ್ಷಿಸಿ ಬರೆಯುವುದೂ ಉಂಟು. ಉದಾಹರಣೆಗೆ:— ಒಂದು ಮದುವೆಯನ್ನು ವರ್ಣಿಸುವಾಗ ಒಬ್ಬ ಕವಿಯು ತಾನು ಮದುವೆಯ ಮಂಟಪ (ಚಪ್ಪರ) ವನ್ನು ನೋಡದಿದ್ದರೂ ಇತರ ಗ್ರಂಥಗಳಿಂದ ಅಥವಾ ಆಧಾರಗಳಿಂದ ನಿಜವನ್ನು ತಿಳಿವುದಕ್ಕೆ ಅವಕಾಶವಿಲ್ಲದಿದ್ದರೂ ತಾನೇ ತನ್ನ ಮನಸ್ಸಿನ ಊಹೆಯಿಂದ ಮನೆಯ ಲಕ್ಷಣ ಮೊದಲಾದವುಗಳನ್ನು ಕೂಡಾ ವೈಭವವುಳ್ಳ ರೀತಿಯಲ್ಲಿ ವರ್ಣಿಸುವುದಲ್ಲದೆ ಆ ಮನೆಯ ಮುಂದಿನ ಚಪ್ಪರವನ್ನು ಮನೋಹರವಾಗುವಂತೆ ವರ್ಣಿಸಿ ಬಿಡುವನು. ಬಸವೇಶ್ವರನ ಅರಮನೆಗೆ ವಜ್ರದ ಕಂಬಗಳಿದ್ದುವೆಂದು ಒಬ್ಬನು ಹೇಳಬಹುದು, ಬರೆಯಬಹುದು, ಆದರೆ ಅದು ನಿಜವೆಂದು ತೋರಿಸಿ ಕೊಡತಲಿಕ್ಕೆ ಅವನು ಸಿದ್ಧನಾಗಿ ಇರಲಾರನು, ಎಂಬುದು ಸ್ಪಷ್ಟವಾದ ವಿಷಯವಾಗಿದೆ. ಪ್ರಸಿದ್ಧನಾದ ಹರೀಶ್ವರ ಕವಿಯು ಮಹಾದೇವಿಯಕ್ಕನನ್ನು ಪರಮೇಶ್ವರ ಪಾರ್ವತಿಯರೆದುರಿಗೆ ಮಾತನಾಡುತ್ತಿರುವಂತೆ ತೋರಿಸಿ ಕೈಲಾಸದ ಸುಖ

ವನ್ನು ಜನರ ಮನಸ್ಸಿನಲ್ಲಿ ಅಚ್ಚೊತ್ತಿದ್ದಾನೆ. ಆದರೆ ಅವನು ಅದನ್ನು ನೋಡಿದವನೂ ಅಲ್ಲ, ಅಥವಾ ನಿಜಾಂಶವನ್ನು ಬೇರೆ ಗ್ರಂಥದಿಂದ ತಿಳಿದವನೂ ಅಲ್ಲ. ತನ್ನ ಹಿಂದಿನ ಪುರಾಣಗಳಲ್ಲಿ ಕೈಲಾಸ ವರ್ಣನೆಯನ್ನು ನೋಡಿ ಅದನ್ನನುಸರಿಸಿ ತನ್ನ ಊಹೆಯಲ್ಲಿ ಬರೆದನು. ಇದರಂತೆ ಕೆಲವು ಗ್ರಂಥಗಳಲ್ಲಿನ ಕೆಲವು ವಿಷಯಗಳು ನಿಜವಲ್ಲದವುಗಳು. ಹೀಗೆ ಇತ್ತು ಎಂದು ತಿಳಿಯಲು ಯಾವ ಅಭ್ಯಂತರವೂ ಬಾರದಂತೆ, ಅನೇಕ ಕವಿಗಳು ಕಾವ್ಯಗಳನ್ನು ಬರೆದಿಲ್ಲ. ಪುರಾಣಕಾರರೂ ಪುರಾಣಗಳನ್ನು ಬರೆದಿಲ್ಲ. ವ್ಯಾಸರ ಪುರಾಣಗಳೂ ಇಂತಹ ಅನೇಕ ಅದ್ಭುತಗಳನ್ನು ತುಂಬಿಕೊಂಡಿವೆ. ಅವರ ಆ ಪುರಾಣಗಳನ್ನು ಓದಿದ ಲಿಂಗಾಯತ ಕವಿಗಳು ಅವರಿಗಿಂತ ಹೆಚ್ಚಾಗಿ ಅದ್ಭುತಗಳನ್ನು ತೋರಿಸಿ ಬರೆದಿಟ್ಟಿರುತ್ತಾರೆ. ಆ ಗ್ರಂಥಗಳಿಂದ ನಿಜ ಸಂಗತಿಯನ್ನು ತಿಳಿವುದು ಬಹು ಕಷ್ಟತರವಾದ ಕೆಲಸವಾಗಿದೆ. ಮೇಲಾಗಿ ಒಬ್ಬರು ಜನಿಸಿದ ದಿನ, ಅವರ ಬಾಲ್ಯ ಯೌವ್ವನ ಮೊದಲಾದವುಗಳಲ್ಲಿ ಮಾಡಿದ ಕೆಲಸಗಳು ಅನುಕ್ರಮವಾಗಿ ಯಥಾಸ್ಥಿತವಾಗಿ ದೊರಕುವಂತೆಯೇ ಇಲ್ಲ.

೨೦೦–೩೦೦ ವರುಷಗಳಿಂದೀಚೆಗೂ ಕೆಲವು ಪುರಾಣಗಳು ಹುಟ್ಟಿವೆ. ಅವುಗಳಲ್ಲಿ ಶಿವಕೈಲಾಸ ಪುರಾಣ ಎಂಬುದೊಂದು. ಅದೂ ಪೂರ್ವ ಪದ್ಧತಿಯನ್ನೇ ಅವಲಂಬಿಸಿ ಇದೆ. ಈ ದೆಸೆಯಿಂದ 'ಪುರಾಣ' ಎಂಬ ಪದವನ್ನು ಕೇಳಿದೊಡನೆಯೇ ಈಗಿನ ತರುಣರು ಬೇಸರಗೊಳ್ಳುವರು. ಈಗಲೂ ಅನೇಕರು ಪುರಾಣಗಳನ್ನು ಬರೆಯುತ್ತಲಿದ್ದಾರೆ. ಯಾರಾದರೂ ಮಹನೀಯರು ಇನ್ನು ಮುಂದೆ ಪುರಾಣಗಳನ್ನು ಬರೆವುದು ಅವಶ್ಯಕವಿಲ್ಲವೆಂದೂ ಚರಿತ್ರೆಗಳನ್ನು ಮಾತ್ರ ಬರೆಯಬೇಕು ಎಂದೂ ಕಟ್ಟು ಮಾಡಿದರೆ ಆಗ ಪೂರ್ವದ ಮತ್ತು ಈಗಿನ ಮಹನೀಯರು ಮಾಡಿದ ನಿಜವಾದ ಅಂಶಗಳು ಹೊರಬಿದ್ದು ಮುಂದೆ ಕಥನಾಯಕರಾಗುವವರು ಪೂರ್ವಿಕ ಮಹನೀಯರ ನಡತೆಯಂತೆ ನಡೆಯಲಿಕ್ಕೆ ಅವಕಾಶವಾಗುತ್ತದೆ. ಶ್ರೀ ರೇವಣಸಿದ್ಧರು ಸ್ಥಾವರ ಲಿಂಗದಲ್ಲಿ ಹುಟ್ಟಿದರೆಂಬ ಪುರಾಣದ ಸಂಗತಿಯನ್ನು ನಿಜವೆಂದು ನಂಬಿದರೆ ಈಗ ಯಾರಾದರೂ ಅದರಂತೆ ಹುಟ್ಟಲಿಕ್ಕಾಗುತ್ತದೆಯೇ? ಎಂಬ ಪ್ರಶ್ನೆಯು ಮೇಲಕ್ಕೆ ಏಳುತ್ತದೆ. ಚರಿತ್ರೆಯಾದರೆ ನಡೆದ ದಿನ ಸಹಿತವಾಗಿ ಯಥಾರ್ಥವನ್ನೇ ಬೋಧಿಸುತ್ತದೆ. ಒಂದು ವೇಳೆ ಹೆಚ್ಚು ಕಡಿಮೆಯು

ಅದರಲ್ಲಿ ಇದ್ದರೆ ಅದನ್ನು ತಿದ್ದಿ ಪ್ರಕಟಿಸಲಿಕ್ಕೂ ಬರುತ್ತದೆ. ಪುರಾಣದ ಅದ್ಭುತವನ್ನು ನಂಬಿಕೊಂಡಿದ್ದ ಜನರ ಮೌಢ್ಯ ಭಾವನೆಯು ತೊಲಗುತ್ತದೆ. ಆದುದರಿಂದ ಚರಿತ್ರೆಯ ಶೋಧನೆಯೇ ಮುಖ್ಯವೆಂದು ತಿಳಿಯಬೇಕು.

ಮೇಲೆ ಕಂಡಂತೆ ಪುರಾಣಗಳು ಮತ್ತು ಗ್ರಂಥಗಳು ಅತಿವರ್ಣನೆ, ಅದ್ಭುತ, ಉತ್ಪ್ರೇಕ್ಷೆ ಮುಂತಾದವುಗಳಿಂದ ತುಂಬಿಕೊಂಡಿದ್ದರೂ ಸೂಕ್ಷ್ಮವಾಗಿ ಅಥವಾ ಮರ್ಮವನ್ನು ಭೇದಿಸಿ ವಿಚಾರಮಾಡಿದಾಗ ಕೆಲವು ಮಟ್ಟಿಗೆ ಚರಿತ್ರಾಂಶವು ಅವುಗಳಿಂದಲೇ ಹೊರಬೀಳುವುದೆಂಬುದನ್ನು ಇಲ್ಲಿ ಮರೆಯಲಾಗದು.

## ಈ ಚರಿತ್ರೆಯ ಆಧಾರ

ಪಂಚಾಚಾರ್ಯರ ಚರಿತ್ರೆಯನ್ನು ಬರೆಯುವುದು ಈಗ ಮುಖ್ಯವಾದ ಕೆಲಸವಾಗಿದೆ. ಈಗಿನ ಶೋಧಕರು ಇತಿಹಾಸವನ್ನು ನಂಬುತ್ತಾರೆ. ಮೂಢ ನಂಬುಗೆ, ಅದುತ್ಭವರ್ಣನೆ, ಉತ್ಪ್ರೇಕ್ಷೆ ಮುಂತಾದವುಗಳುಳ್ಳ ಪುರಾಣಗಳ ಮಾತನ್ನು ಗೊಡ್ಡು ಎನ್ನುತ್ತಾರೆ. ಅವುಗಳ ಕಡೆಗೆ ಗಮನಕೊಡುವುದಿಲ್ಲ. ಅವುಗಳನ್ನು ಓದಗೊಡುವುದಿಲ್ಲ. ಈಗಿನ ಶಾಲೆಗಳಲ್ಲಿ ಓದುವ ತರುಣರೂ ಚರಿತ್ರೆಯನ್ನೇ ಹುಡುಕುತ್ತಾರೆ. ಇಂತಹವರೆಲ್ಲರಿಗೂ ನಿಜಾಂಶವುಳ್ಳ ಚರಿತ್ರೆಯು ಗೊತ್ತಾದರೆ ಆಚಾರ್ಯರಿಂದ ಆದ ಉಪಕಾರವು ಸಮಾಜಕ್ಕೆಲ್ಲಾ ತಿಳಿದು ಆ ಪೂಜ್ಯರಲ್ಲಿ ಗೌರವ ಭಾವವು ಬೆಳೆದು ಸಮಾಜಕ್ಕೆ ಹಿತವಾಗುವುದು. ಈ ಉದ್ದೇಶದಿಂದ ಶೋಧಿಸಿದ ಅಂಶಗಳನ್ನು ಇದರಲ್ಲಿ ಬರೆಯಲು ಪ್ರಯತ್ನಪಟ್ಟಿದೆ. ಈ ಸಂಬಂಧವಾದ ಪುರಾಣಗಳು, ಕಾವ್ಯಗಳು, ಗ್ರಂಥಗಳು, ಶಾಸನಗಳು ಮೊದಲಾದವುಗಳ ಆಧಾರದಿಂದಲೇ ಇದು ಬರೆಯಲ್ಪಟ್ಟಿದೆ. ಇದರಲ್ಲಿ ಬರೆಯಲ್ಪಟ್ಟ ಅಂಶಗಳಲ್ಲಿ ಯಾವುದಾದರೂ ನಿಜವಲ್ಲವೆಂದು ಐತಿಹಾಸಿಕ (ಚರಿತ್ರೆಗೆ ಸಂಬಂಧಿಸಿದ) ಆಧಾರಗಳಿಂದ ಯಾರಾದರೂ ತೋರಿಸಿದರೆ ಅಂತಹ ಅಂಶಗಳನ್ನು ಪುನಃ ಶೋಧಿಸಿ ಪ್ರಕಟಿಸಲಿಕ್ಕೂ ಸಿದ್ಧತೆಯನ್ನು ಮಾಡಿಕೊಂಡಿದೆ. ಸರ್ವರಿಗೂ ನಿಜಾಂಶವು ಗೊತ್ತಾಗಿ ಸರ್ವರ ಅಭಿಪ್ರಾಯವೂ ಒಂದಾಗಿ ಇರಲಿ ಎಂಬುದೇ ಮುಖ್ಯ ಆಶಯವಾಗಿದೆ.

## ಆಚಾರ್ಯರು ಲಿಂಗೋದ್ಭವರು

ಪಂಚಾಚಾರ್ಯರಲ್ಲಿ ಮೊದಲನೆಯವರು ರೇವಣಸಿದ್ಧರು. ಇವರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ಹುಟ್ಟಿದರು. ಎರಡನೆಯವರು ಮರುಳು

ಸಿದ್ಧರು. ಸಿದ್ಧವಟಕ್ಷೇತ್ರ ಲಿಂಗದಲ್ಲಿ ಹುಟ್ಟಿದರು. ಮೂರನೆಯವರಾದ ಏಕೋರಾಮಾರಾಧ್ಯರು ದ್ರಾಕ್ಷಾರಾಮಕ್ಷೇತ್ರ ರಾಮನಾಥ ಲಿಂಗದಲ್ಲಿ ಹುಟ್ಟಿದರು. ನಾಲ್ಕನೆಯವರಾದ ಪಂಡಿತಾರಾಧ್ಯರು ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಲ್ಲಿ ಹುಟ್ಟಿದರು. ಐದನೆಯವರಾದ ವಿಶ್ವಾರಾಧ್ಯರು ಕಾಶಿ ವಿಶ್ವೇಶ್ವರ ಲಿಂಗದಲ್ಲಿ ಹುಟ್ಟಿದರು. ಈ ರೀತಿಯಾಗಿ ಕೆಲವು ಗ್ರಂಥಗಳೇ ಮೊದಲಾದವು ಹೇಳುತ್ತವೆ. ಈ ಸಂಗತಿಯನ್ನು ನಂಬಿಕೊಂಡು ಆಯಾ ದೇವಾಲಯಗಳಲ್ಲಿ ಸ್ಥಾಪಿಸಲ್ಪಟ್ಟ ಲಿಂಗದಿಂದ ಹುಟ್ಟಿದರೆಂದು ಕೆಲವರು ತಿಳಿದುಕೊಂಡು ಹಾಗೆ ತೋರಿಸುವ ಚಿತ್ರಪಟ (Picture) ಗಳನ್ನು ಬಹಿರಂಗವಾಗಿ ತಮ್ಮ ಮನೆ ಮಠಗಳಲ್ಲಿ ತೂಗಹಾಕಿರುತ್ತಾರೆ. ಈ ಪಟಗಳು ಸಿದ್ಧವಾದ ರೀತಿಯು ಹೀಗೆ:— ಒಬ್ಬ ಚಿತ್ರಕಾರನು ಗ್ರಂಥಗಳಲ್ಲಿ ಹೇಳಿದ ಸಂಗತಿಯಿಂದ ಹೀಗೆ ಇರಬಹುದು ಎಂದು ಊಹಿಸಿ ಭೂಮಿಯಲ್ಲಿನ ಲಿಂಗದಿಂದ ಆಚಾರ್ಯರ ರೂಪವು ಹುಟ್ಟಿದಂತೆ ಬರೆಯುವನು. ಆ ಮೇಲೆ ಅದನ್ನು ಛಾಯಾ ಯಂತ್ರ (Photograph) ಕ್ಕೆ ತೋರಿಸಲು ಅದು ಅಲ್ಲಿ ಮೂಡಿ ಅದರಂತಿರುವ ಅನೇಕ ಚಿತ್ರಪಟಗಳನ್ನು ಮಾಡಲು ಸಹಕಾರಿಯಾದ ಪ್ರತಿರೂಪನ್ನು (Photo) ಉಂಟುಮಾಡುತ್ತದೆ. ಇಂತಹ ಪ್ರತಿರೂಪವನ್ನು ಸಂಬಂಧಿಸಿ ಒಬ್ಬ ಕೆಲಸಗಾರನು ತಾಮ್ರ ಅಥವಾ ಸತುವು ಇವುಗಳ ತಗಡಿನಲ್ಲಿ ಅದನ್ನು ಮಾಡಿಸುವನು. ಅದು ಪಡಿಯಚ್ಚು (Block) ಎನ್ನಿಸಿಕೊಳ್ಳುವುದು. ಅದನ್ನು ಮುದ್ರಣಯಂತ್ರದಲ್ಲಿ ಇಟ್ಟು ಮುದ್ರಿಸುವುದರಿಂದ ಸಾವಿರಾರು ಪ್ರತಿಗಳು ಮೂಲ ಪ್ರತಿಯಂತೆ ಸಿದ್ಧವಾಗುತ್ತವೆ. ಹೀಗೆ ಮಾಡುವುದರಲ್ಲಿ ಚಿತ್ರವನ್ನು ಮೊದಲು ಬರೆದವರ ಊಹೆಯೇ ಮುಂದಕ್ಕೆ ಬಂದಿತಲ್ಲದೆ ಪೂರ್ವಿಕರ ನಿಜವಾದ ಚಿತ್ರವು ಮುಂದಕ್ಕೆ ಬರಲಿಲ್ಲ. ಪೂರ್ವದಲ್ಲಿ ಭೂಮಿಯ ಲಿಂಗದಿಂದ ಆಚಾರ್ಯರು ಹುಟ್ಟಿದರೆಂದು ತೋರಿಸುವಂತೆ ಕಟೆದಿರುವ ಪ್ರತಿಮೆಗಳು ದೊರೆಯುವುದಿಲ್ಲ. ರೇವಣಸಿದ್ಧರ ವಿಗ್ರಹಮೂರ್ತಿಗಳು ಕೆಲವುಕಡೆಗಳಲ್ಲಿ ಇವೆ. ಅವುಗಳಲ್ಲಿ ರೇವಣಸಿದ್ಧರು ಮನುಷ್ಯನ ಆಕಾರದಂತೆ ಕೂತಿರುವುದು ಕಂಡು ಬರುತ್ತದೆ. ಅವು ಈ ಚಿತ್ರಪಟದಂತಿಲ್ಲ. ಆದುದರಿಂದ ಪೂರ್ವಿಕರು ಹೀಗೆ ಯಾರೂ ಭಾವಿಸಿ ಇರಲಿಲ್ಲವೆಂದು ವ್ಯಕ್ತವಾಗುತ್ತದೆ. ಈಗಿನ ಚರಿತ್ರೆ ಶೋಧಕರೂ ಭೂಮಿಯ ಲಿಂಗದಲ್ಲಿ ಈಗ ಯಾರೂ ಹುಟ್ಟುವುದಿಲ್ಲವಾದುದರಿಂದ ಹಾಗೆ ಹಿಂದೆ

ಹುಟ್ಟಿದ್ದರೆಂದು ತಿಳಿದವರನ್ನು ಕೇವಲ ಮೂಢರೆಂದು ಭಾವಿಸುತ್ತಾರೆ. ಪೂರ್ವಿಕರ ಮತ್ತು ಆಧುನಿಕರ ಅಭಿಪ್ರಾಯಗಳಿಗೂ ಸಹಾ ಚಿತ್ರಪಟದಲ್ಲಿನ ಲಿಂಗೋದ್ಭವದ ಸಂಗತಿಯು ವಿರೋಧವಾಗಿರುವುದರಿಂದ ಭೂಮಿಯಲ್ಲಿನ ಲಿಂಗದಲ್ಲಿ ಹುಟ್ಟಿದರೆಂಬುದು ನಿಜವಾದ ಅಂಶವೆಂದು ನಂಬಲಾಗುವುದಿಲ್ಲ. ಕೆಲವರ ಪ್ರತಿಮೆಗಳು ಕಲ್ಲಿನಲ್ಲಿ ಕೆತ್ತಲ್ಪಟ್ಟವುಗಳು ಅವರ ಪ್ರತಿಬಿಂಬಗಳೇ ಎಂದು ನಂಬಲವಕಾಶವಿರುವುದರಿಂದ ದೇವಾಲಯಗಳಲ್ಲಿರುವ ರೇವಣಸಿದ್ಧರೇ ಮೊದಲಾದವರ ಪ್ರತಿಮೆಗಳು ಅವರ ಹೋಲಿಕೆಯ ಪ್ರತಿಬಿಂಬಗಳೇ ಎಂದು ತಿಳಿಯಲವಕಾಶವಿದೆ. ಪೂರ್ವಿಕರು ಪ್ರತಿಮೆಗಳನ್ನು ಕೆತ್ತಿಸುವಾಗ ಅವರ ನಿಜರೂಪವನ್ನು ಪ್ರಕಾಶಕ್ಕೆ ತರಲು ಶೋಧನೆ ನಡೆಸುತ್ತಿದ್ದರು ಎಂಬುದು ಆ ಮೂರ್ತಿಗಳಲ್ಲಿನ ಭಿನ್ನ ಭಿನ್ನ ಲಕ್ಷಣಗಳಿಂದಲೇ ವ್ಯಕ್ತವಾಗುತ್ತದೆ. ಆದುದರಿಂದ ಈಗ ಅಂತಹ ಪ್ರತಿಮೆಗಳ ಛಾಯೆ (Photo) ತೆಗಿಸಿ ಆ ಚಿತ್ರಗಳನ್ನು ಪಡಿಯಚ್ಚು ಮಾಡಿಸಿ ಅವುಗಳಿಂದಾದ ಚಿತ್ರಗಳನ್ನು ಆಚಾರ್ಯರ ಪ್ರತಿರೂಪಗಳೆಂದು ತಿಳಿದರೆ ಪೂರ್ವಿಕರ ಅಭಿಪ್ರಾಯಕ್ಕೂ ವಿಜ್ಞಾನ ಶಾಸ್ತ್ರಕಾರರ (Scientists) ಅಭಿಪ್ರಾಯಕ್ಕೂ ಸರಿಯಾಗುತ್ತದೆ.

ಆಚಾರ್ಯರು ಲಿಂಗದಲ್ಲಿ ಹುಟ್ಟಿದರು ಎಂಬುದಾಗಿ ಗ್ರಂಥಗಳೇ ಮೊದಲಾದವುಗಳಲ್ಲಿ ಹೇಳಲ್ಪಟ್ಟಿರುವುದು ಮೇಲೆ ಕಂಡಂತೆ ಭೂಮಿಯ ಲಿಂಗದಲ್ಲಿ ಹುಟ್ಟಿದರು ಎಂಬ ಅಭಿಪ್ರಾಯವುಳ್ಳದ್ದಲ್ಲ. ವೀರಶೈವರು ಲಿಂಗದಲ್ಲಿ ಹುಟ್ಟಿದ ವಿಷಯವಾಗಿ ಮೈಸೂರು ದೇಶದ ತುಮಕೂರು ಜಿಲ್ಲೆಯ ಎಡೆಯೂರು ಎಂಬಲ್ಲಿ ಸಮಾಧಿಯನ್ನು ಹೊಂದಿದ ಮಹಾಮಹಿಮರಾದ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗಸ್ವಾಮಿಗಳು ತಾವು ರಚಿಸಿದ ವಚನ (ಸಿದ್ಧೇಶ್ವರ ವಚನ) ಎಂಬ ಗ್ರಂಥ ೬೦ನೆಯದರಲ್ಲಿ ಹೀಗೆ ಅಪ್ಪಣೆ ಕೊಡಿಸಿರುತ್ತಾರೆ.

"ಲಿಂಗದಿಂದ ಶರಣರುದಯವಾಗದಿದ್ದರೆ ಬಸವ, ಚನ್ನಬಸವ, ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳೆಲ್ಲರೂ ಕ್ಷೀರ ಕ್ಷೀರವ ಬೆರಸಿದಂತೆ, ನೀರು ನೀರು ಬೆರಸಿದಂತೆ, ಘೃತ ಘೃತವ ಬೆರಸಿದಂತೆ, ಬಯಲು ಬಯಲ ಬೆರಸಿದಂತೆ ಲಿಂಗವ ಬೆರಸಿ ಮಹಾಲಿಂಗವೆಯಾದರು ಹೇಗೆ ನೋಡಾ? ಲಿಂಗದಿಂದ ಶರಣನುದಯವಾಗದಿದ್ದರೆ ನೀಲಲೋಚನೆಯಮ್ಮ ಲಿಂಗದೊಳಗೆ ತನ್ನಂಗವನೇಕೀಕರಿಸಿ ಕೇವಲ ಪರಂಜ್ಯೋತಿ ಲಿಂಗದಲ್ಲಿ ನಿರವಯವಾದಳು ಹೇಗೆ ನೋಡಾ? ಇಂತಪ್ಪ ದೃಷ್ಟವ ಕಂಡು ಕಂಡು ನಂಬದಿಪ್ಪುದು ಕರ್ಮದ

ಫಲ. ಅದು ಇವರ ಗುಣವೇ? ಶಿವನ ಮಾಯಾ ಪ್ರಪಂಚಿನ ಗುಣನೋಡಾ. ಈ ಪ್ರಪಂಚ ಜೀವಿಗಳು ಅಹುದೆಂಬುದೂ, ಅಲ್ಲವೆಂಬುದೂ ಪ್ರಮಾಣವಲ್ಲ ನೋಡಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ "

ಇದರಿಂದ ಯಾವನಾದರೂ ಶಿವಶರಣನು ಲಿಂಗದಲ್ಲಿ ಹುಟ್ಟಿದನೆಂಬು ತಿಳಿವುದು ಈ ಮಹಾಸ್ವಾಮಿಗಳ ಸಮ್ಮತವೆಂದು ದೃಢಪಡುತ್ತದೆ. ಆದುದ ರಿಂದ ಇದು ವೀರಶೈವ ಧರ್ಮ ಸಂಬಂಧದ ಒಂದು ಗೊತ್ತುವಳಿ (ಧಾರ್ಮಿಕ ಸಾಂಕೇತಿಕ) ಎಂದು ತಿಳಿಯಬೇಕಾಗಿದೆ. ಹೀಗೆ ಗೊತ್ತುಮಾಡುವುದಕ್ಕೆ ಬೇರೆ ಕೆಲವು ಕಾರಣಗಳೂ ಇವೆ.

೧. ದೇವಾಲಯದಲ್ಲಿ ದೀಕ್ಷೆಯಾದರೆ ಅಥವಾ ಏನಾದರೂ ಸಂಸ್ಕಾರ ವಾದರೆ ಆ ದೇವಾಲಯದ ಲಿಂಗದಲ್ಲಿ ಹುಟ್ಟಿದರೆಂದು ತಿಳಿಯುವುದು.

ರೇವಣಸಿದ್ಧರು ಲಿಂಗದಿಂದ ಹುಟ್ಟುವ ಕಾಲದಲ್ಲಿ ಬಹು ಜನರು ಸೇರಿದ್ದರು. ವಾದ್ಯಗಳು ಬಾರಿಸಲ್ಪಡುತ್ತಿದ್ದವು. ಉತ್ಸವವು ನಡೆದಿದ್ದಿತು. ಎಂಬಿವೇ ಮೊದಲಾದ ಸಂಗತಿಗಳಿಂದ ಅವರು ಲಿಂಗದಲ್ಲಿ ಹುಟ್ಟುವ ಸಮಾ ಚಾರವು ಮೊದಲೇ ಊರವರಿಗೆ ಗೊತ್ತಾಗಿ ಅವರು ವಾದ್ಯ ದೊದಲಾದವು ಗಳನ್ನು ಮೊದಲೇ ಬರಮಾಡಿಕೊಂಡು, ಉತ್ಸವಕ್ಕೆ ಸಿದ್ಧರಾಗಿದ್ದರೆಂದು ವ್ಯಕ್ತವಾಗುತ್ತದೆ. ಇಲ್ಲದಿದ್ದರೆ ಲಿಂಗದಲ್ಲಿ ಜನನವು ಮೊದಲೇ ಗೊತ್ತಾಗಿ ರುವುದು ಸಾಧ್ಯವೇ? ಮೊದಲು ಪ್ರಕಟಿಸಿದವರಾರು? ಎಂಬಿವೇ ಮುಂತಾದ ಪ್ರಶ್ನೆಯು ತರಂಗಗಳೇಳುತ್ತವೆ. ಈ ಕಾರಣಗಳಿಂದ ಅವರು ಲಿಂಗೋದ್ಭವವಾಗುವುದಕ್ಕೆ ಮುಂಚೆಯೋ ಕೆಲವು ದಿನಗಳ ಹಿಂದೆಯೋ ಆ ಸಂಗತಿಯು ಊರವರಿಗೆ ತಿಳಿದಿತ್ತೆಂದೂ ಅವರು ವಾದ್ಯ ಮೊದಲಾ ದವುಗಳೊಡನೆ ಆ ಉದ್ಭವವನ್ನು ನಿರೀಕ್ಷಿಸುತ್ತಿದ್ದರೆಂದೂ ಗೊತ್ತಾಗುತ್ತದೆ. ಇದರಿಂದ ದೇವಾಲಯದಲ್ಲಿ ರೇವಣಸಿದ್ಧರಿಗೂ ಒಂದು ಸಂಸ್ಕಾರವು ಪೂರ್ವಭಾವಿಯಾಗಿ ಗೊತ್ತುಮಾಡಲ್ಪಟ್ಟು ಆಮೇಲೆ ಅದು ನಡೆದಿರಬೇ ಕೆಂದೂ ಅದು ಲಿಂಗೋದ್ಭವವೆಂದು ತಿಳಿಯಲ್ಪಟ್ಟಿತೆಂದೂ ವ್ಯಕ್ತವಾಗುತ್ತದೆ.

೨. ದೇವಾಲಯದಲ್ಲಿ ಲಿಂಗಧಾರಣೆ ಅಥವಾ ಸಂಸ್ಕಾರವಾಗದಿದ್ದರೂ ಗುರುವಿನಿಂದ ದೀಕ್ಷೆಯಾಗಿ ಲಿಂಗಧಾರಣೆಯಾದರೆ ಗುರುವನ್ನೇ ಲಿಂಗವೆಂದು ಭಾವಿಸಿ ಲಿಂಗದಲ್ಲಿ ಹುಟ್ಟಿದರೆಂದು ತಿಳಿವುದೂ ಒಂದು ವಿಧ.

ಬಸವೇಶ್ವರನ ಗುರುವು ಸಂಗಮೇಶ್ವರನೆಂದು ಪ್ರಸಿದ್ಧವಷ್ಟೆ. ತನ್ನ ಲಿಂಗಕ್ಕೆ 'ಸಂಗಮೇಶ್ವರ' ಎಂಬ ಹೆಸರನ್ನಿಟ್ಟುಕೊಂಡು ಅದರ ಅಂಕಿತದಲ್ಲಿ ಬಸವೇಶ್ವರನು ವಚನಗಳನ್ನು ಬರೆದನೆಂದು ತಿಳಿಯಲಿಕ್ಕೆ ಬರುತ್ತದೆ.

"ಗುರುವನ್ನೂ ಮಹಾದೇವನನ್ನೂ ಒಂದೇ ಎಂದು ಭಾವಿಸಬೇಕು. ಎರಡೆಂಬ ಪ್ರತಿಭಾವನೆ ತೋರಿದರೆ ಅದು ಅಜ್ಞಾನ ನೋಡಾ. ಇದು ಕಾರಣ ಅವನಾರೊರ್ವನು ಎರಡೆಂದು ಭಾವಿಸಿದನಾದರೆ ಭವಬಂಧ ತಪ್ಪದು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ" ಎಂಬ ಸಿದ್ಧೇಶ್ವರ ವಚನದ ಅಭಿಪ್ರಾಯದ ಪ್ರಕಾರ ಗುರುವಿನಿಂದ ದೀಕ್ಷಿತರಾದ ವೀರಶೈವರು ಯಾವ ಗುರುವಿನಿಂದ ಉದಯಿಸಿದರೋ ಆ ಗುರುವಿನ ಹೆಸರನ್ನೇ ತಮ್ಮ ಲಿಂಗಕ್ಕೆ ಇಟ್ಟುಕೊಳ್ಳುವದೂ ಆ ಲಿಂಗದಿಂದ ಉದ್ಭವವಾದಂತೆ ತಿಳಿವುದೂ ರೂಢಿ. ಈ ವಿಧದಲ್ಲಿಯೂ ಲಿಂಗೋದ್ಭವವು ಸಂಭವಿಸೀಯುವು ಎಂಬುದು ವ್ಯಕ್ತವಾಗುತ್ತದೆ.

೩. ಊರಿಗೆ ಮುಖ್ಯವಾದ ದೇವಾಲಯದ ಲಿಂಗದಿಂದ ಹುಟ್ಟಿದಂತೆ ತಿಳಿವುದು.

"ಧಿಕ್‌ಗ್ರಾಮಮಶಿವಾಲಯಂ" ಎಂಬ ಉಪನಿಷದ್ ವಾಕ್ಯದ ಪ್ರಕಾರ ಪೂರ್ವದಲ್ಲಿ ಪ್ರತಿಯೊಂದು ಊರಿನಲ್ಲಿಯೂ ಮುಖ್ಯವಾಗಿ ಒಂದು ಶಿವಾಲಯವಿರಬೇಕೆಂಬುದು ಒಂದು ಕಟ್ಟಳೆ. ಆ ಊರಿಗೆ ಶಿವಾಲಯದ ಆ ಲಿಂಗವೇ ಮುಖ್ಯವಾದುದು. ಆ ಊರು ಆ ಲಿಂಗದ ಊರೇ ಎಂದು ತಿಳಿಯುತ್ತಿದ್ದರು. ಹೀಗೆ ಶಿವಾಲಯವಿದ್ದು ಕೇವಲ ಶಿವಭಕ್ತರೇ ವಾಸವಾಗಿರುವ ಊರಿಗೆ ಪೂರ್ವದಲ್ಲಿ 'ಪುರ' ಎಂಬ ಉಪಪದವನ್ನು ಸೇರಿಸುತ್ತಿದ್ದರು. ಉದಾ:— ಶೀಲವಂತಪುರ. (ಬ್ರಾಹ್ಮಣರು ಇದ್ದ ಊರಿಗ ಅಗ್ರಹಾರ ಎಂಬ ಉಪಪದವನ್ನು ಹೆಚ್ಚುವಂತೆ. ಉದಾ:— ಅಗ್ರಹಾರ ಮುಚಡಿ). ಇಂತಹ ಪುರದಲ್ಲಿ ಹುಟ್ಟಿದವರೆಲ್ಲರೂ ಆ ಲಿಂಗದಲ್ಲೇ ಹುಟ್ಟಿದರೆಂದೇ ತಿಳಿವುದು.

೪. ಊರಿನ ಲಿಂಗದ ಹೆಸರನ್ನು ಇಷ್ಟಲಿಂಗಕ್ಕೆ ಇಡುವುದು.

ಕೆಲವರು ತಮ್ಮ ಇಷ್ಟಲಿಂಗಕ್ಕೆ ತಮ್ಮ ಊರಿನಲ್ಲಿರುವ ಶಿವಾಲಯದಲ್ಲಿನ ಲಿಂಗದ ಹೆಸರನ್ನೇ ಇಡುತ್ತಿದ್ದರು. ಊರಿನವರು ಶಿವಾಲಯವನ್ನು ಮುಖ್ಯವಾಗಿ ಭಾವಿಸಿದಂತೆ ಮತ್ತು ಆ ಮುಖ್ಯ ದೇವಾಲಯದ ಭಕ್ತರೆಂದು

ಹೇಳಿಕೊಳ್ಳುತ್ತಿದ್ದಂತೆ ಆ ಊರಿನಲ್ಲಿ ಇದ್ದ ವೀರಶೈವರೂ ಆ ಲಿಂಗದ ಭಕ್ತರೆಂದು ಊರಿನ ಸಮಾಜದಲ್ಲಿ ಐಕ್ಯತೆಯನ್ನು ತೋರಿಸುವುದಕ್ಕಾಗಿ ಆ ಊರಿನ ಲಿಂಗದ ಹೆಸರನ್ನೇ ತಮ್ಮ ಇಷ್ಟಲಿಂಗಕ್ಕೆ ಇಟ್ಟುಕೊಂಡು ಆ ಮೂಲಕ ತಾವೂ ಆ ಲಿಂಗದ ಭಕ್ತರೇ ಎಂದು ಹೇಳುವುದು. ಈ ದೆಸೆಯಿಂದಲೂ ಆ ಲಿಂಗದಲ್ಲಿ ಹುಟ್ಟಿದವರೆಂದು ಹೇಳಿಕೊಳ್ಳುವುದೂ ಒಂದು ವಿಧ.

ಲಿಂಗದಲ್ಲಿ ಹುಟ್ಟಿದರೆಂದು ತಿಳಿವ ಕಾರಣಗಳು ಇನ್ನೂ ಇವೆ. ಅವುಗಳನ್ನು ಆಯಾ ಸಂದರ್ಭಾನುಸಾರ ತಿಳಿಯಬೇಕಾಗಿದೆ. ಒಟ್ಟಿನಲ್ಲಿ ಮೇಲೆ ಕಂಡ ಸಿದ್ಧೇಶ್ವರ ವಚನ ೬೦ ರ ಪ್ರಕಾರ ಲಿಂಗೈಕ್ಯರಾದರೆಂದು ಯಾವ ವಿಷಯದಲ್ಲಿ ತಿಳಿಯುವರೋ ಅವರು ಲಿಂಗದಲ್ಲಿ ಹುಟ್ಟಿದರೆಂದು ತಿಳಿವುದೂ ಮುಖ್ಯವಾದುದಾಗಿದೆ.

೫. ಅಧಿಕಾರ ಸಂಸ್ಕಾರವಾದಾಗ ಲಿಂಗದಿಂದ ಹುಟ್ಟಿದಂತೆ ತಿಳಿವುದು "ಕೊಲ್ಲಿಪಾಕಿ ಮಹಾತ್ಮೆ" ಎಂಬ ಕನ್ನಡ ಗ್ರಂಥದಲ್ಲಿ (೧ನೆಯ ಆಶ್ವಾಸ) ಶಿವನ ಸಭೆಯಲ್ಲಿ ಇದ್ದ ಸದಾಶಿವ, ಈಶ, ಮಹೇಶ್ವರ, ರುದ್ರ ಎಂಬುವರಿಗೆ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಉದ್ಭವರಾಗಿರಿ ಎಂದು ಅಪ್ಪಣೆ ಕೊಟ್ಟನೆಂತಲೂ ಆ ಪ್ರಕಾರ ಅವರು ಲಿಂಗದಲ್ಲಿ ಹುಟ್ಟಿದರೆಂದೂ ಆ ಮೇಲೆ ಶಿವನು ಜಂಗಮನಾಗಿ ಪ್ರಥಮರೊಡನೆ ಅವರಿಗೆ ದೀಕ್ಷೆಯನ್ನು ಮಾಡಿ ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಎಂದು ಹೆಸರಿಟ್ಟನೆಂದೂ ಬರೆಯಲ್ಪಟ್ಟಿದೆ. ಕೆಲವು ಗ್ರಂಥಗಳು ಈ ಆಚಾರ್ಯರು ಒಬ್ಬೊಬ್ಬರು ಒಂದೊಂದು ಲಿಂಗದಲ್ಲಿ ಉದ್ಭವಿಸಿದರೆಂದು ಹೇಳುತ್ತಿರುವಲ್ಲಿ ನಾಲ್ಕು ಆಚಾರ್ಯರೂ ಒಂದೇ ಲಿಂಗದಲ್ಲಿ ಹುಟ್ಟಿದರೆಂದು ಹೇಳುವ ಈ ಗ್ರಂಥದ ಮಾತು ಸುಳ್ಳಾದುದೆಂದು ಅನೇಕರು ಯೋಚಿಸಬಹುದು. ಅದು ಸುಳ್ಳಲ್ಲ. ಕೊಲ್ಲಿಪಾಕಿಯಲ್ಲಿ ಎಲ್ಲಾ ಪೀಠಾಚಾರ್ಯರ ಮಠಗಳಿರುವುದು ತಿಳಿದುಬಂದಿರುವದರಿಂದ ಒಮ್ಮೆ ಈ ಆಚಾರ್ಯರು ಎಲ್ಲರೂ ಅಲ್ಲಿ ತಮ್ಮ ಅಧಿಕಾರದ ಸಂಸ್ಕಾರವನ್ನು ಪಡೆದರೆಂದೂ ಅದನ್ನೇ ಲಿಂಗದಲ್ಲಿ ಉದ್ಭವವಾದಂತೆ ತಿಳಿದು ಆ ಗ್ರಂಥಕರ್ತನು ಬರೆದಿದ್ದಾನೆಂದೂ ತಿಳಿಯಬೇಕಾಗುತ್ತದೆ. ಪೀಠಾಕಾರ ಅಥವಾ ಮಠಾಧಿಕಾರವನ್ನು ವಹಿಸುವ ಕಾಲದಲ್ಲಿಯೂ ಕೆಲವು ಸಂಸ್ಕಾರಗಳು ನಡೆಯುತ್ತವೆ. ಇಂಥಹ ಸಂಸ್ಕಾರವನ್ನು ಹೊಂದಿದವರಿಗೂ ಲಿಂಗೋದ್ಭವರು ಎಂಬ ಭಾವನೆ ಬರುವುದುಂಟೆಂದು ನಂಬಲಿಕ್ಕೆ ಬರುವಂತಿದೆ.

ಶ್ರೀ ಪಂಡಿತಾರಾಧ್ಯರಿಗೆ ಭೀಮನ ಪಂಡಿತ ಎಂಬ ತಂದೆಯೂ ಗೌರಾಂಬೆ ಎಂಬ ತಾಯಿಯೂ ಇದ್ದರೆಂದು ತಿಳಿದುಬರುತ್ತದೆ. "ಭೀಮೇಶ್ವರ ಲಿಂಗದಿಂದ ಪಂಡಿತಾರಾಧ್ಯರ ಜನನ" ಎಂದೂ ಗ್ರಂಥದ ಆಧಾರವು ದೊರಕುವುದರಿಂದ ತಂದೆಯನ್ನು ಲಿಂಗ ರೂಪದಲ್ಲಿ ಭಾವಿಸುತ್ತಿದ್ದಂತೆ ತಿಳಿಯ ಬೇಕಾಗುತ್ತದೆ. ಆದರೆ ಶ್ರೀಶೈಲಮಲ್ಲಿಕಾರ್ಜುನಲಿಂಗದಿಂದ ಉದ್ಭವಿಸಿದರು ಎಂಬ ಸಂಗತಿಯು ಅನೇಕ ಗ್ರಂಥ ಮುಂತಾದವುಗಳಲ್ಲಿ ಇರುವದರಿಂದ ಅವರಿಗೆ ಶ್ರೀಶೈಲ ಮಲ್ಲಿಕಾರ್ಜುನಲಿಂಗ ಸನ್ನಿಧಿಯಲ್ಲಿ ಪೀಠದ ಅಧಿಕಾರ ಪ್ರಾಪ್ತವಾಗಿರಬೇಕೆಂದೂ ಆ ದೆಸೆಯಿಂದ ಆ ಲಿಂಗದಲ್ಲಿ ಉದ್ಭವಿಸಿದರು ಎಂದು ಬರೆಯಲ್ಪಟ್ಟಿತೆಂದೂ ತಿಳಿಯಬೇಕಾಗಿದೆ.

ಹೀಗೆ ಅನೇಕ ವಿಧಗಳಲ್ಲಿ ಲಿಂಗೋದ್ಭವರು ಎಂದು ಪೂರ್ವಿಕ ಮಹನೀಯರು ತಿಳಿಯುತ್ತಿದ್ದರು ಎಂದು ಗೊತ್ತುಮಾಡಲಿಕ್ಕೆ ಬರುವಂತೆ ಇದೆ.

ಒಟ್ಟಿನಲ್ಲಿ 'ಲಿಂಗೋದ್ಭವರು' ಎಂಬುದು ವೀರಶೈವರ ಸಾಂಕೇತಿಕಭಾವನೆಯಾಗಿದೆಯೇ ವಿನಾ ನಿಜವಾಗಿ ಸ್ಥಾವರ ಲಿಂಗದಲ್ಲಿ ಹುಟ್ಟಿದರೆಂಬ ಅಭಿಪ್ರಾಯವುಳ್ಳುದಲ್ಲ.

ಸಿದ್ಧೇಶ್ವರ ವಚನದಲ್ಲಿ (೬೧) "ಆದಿಯಲ್ಲಿ ಶಿವತತ್ವದಲ್ಲಿ ರೇಣುಕನು ದಯವಾಗದಿದ್ದರೆ ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿ ಎಂತೋ? ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ. ಅವಾಂತರ ಮುಕ್ತನೆಂದೆಂಬ ಅಜ್ಞಾನಿಗಳಿಗೆ ಏನೆಂಬೆ" ಎಂಬುದಾಗಿಯೂ 'ರುದ್ರಗಣಂಗಳು ಪರಶಿವನ ಊರ್ಧ್ವಮುಖದಲ್ಲಿ ಉದಯವಾದರು. ಅವರು ಮರ್ತ್ಯದಲ್ಲಿ ಅವತರಿಸಿದರು" ಎಂಬುದಾಗಿಯೂ ಶ್ರೀ ನಿ. ಜ. ತೋಂಟದ ಸಿದ್ಧಲಿಂಗಸ್ವಾಮಿಗಳು ಅಪ್ಪಣೆಕೊಡಿಸಿ ಶಿವತತ್ತ್ವವೇ ಲಿಂಗ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರಿಂದ ಸ್ಥಾವರ ಲಿಂಗದಲ್ಲಿ ಹುಟ್ಟಿದುದನ್ನು ಅವರೂ ನಿಷೇಧಿಸಿದಂತೆ ತಿಳಿಯಬರುತ್ತದೆ.

ಇವರ ಕಾಲಕ್ಕೆ (ಸು. ಕ್ರಿ. ಶ. ೧೪೭೦) ಹರೀಶ್ವರನು ಹೇಳಿದ ಪ್ರಕಾರ ರೇವಣಸಿದ್ಧರು ಶಾಪದಿಂದ ಸ್ಥಾವರಲಿಂಗದಲ್ಲಿ ಉದಯಿಸಿ ಮುಕ್ತರಾದರೆಂಬ ನಂಬುಗೆ ಪ್ರಬಲವಾಗಿ ವ್ಯಾಪಿಸಿ ಇರಬೇಕು. ಇದೇ ಅವಾಂತರ ಮುಕ್ತಿತ್ವ. ಶೂನ್ಯಸಂಪಾದನೆಯಲ್ಲಿಯೂ ಶಿವಶರಣರು ಶಾಪದಿಂದ ಭೂ

ಲೋಕಕ್ಕೆ ಬಂದರೆಂಬುದು ಸರಿಯಲ್ಲ ಎಂದು ಉಕ್ತವಾಗಿದೆ. ಈ ವಿಷಯದಲ್ಲಿ ಶ್ರೀ ನಿ. ಜ. ಅಲ್ಲಮಪ್ರಭು ಸ್ವಾಮಿಗಳೇ ಮುಂತಾದವರ ಬೋಧೆಯ ರೀತಿಯು ಹರೀಶ್ವರನಿಂದ ತಪ್ಪಿಸಲ್ಪಟ್ಟಿದ್ದಿತೆಂದೂ, ಆ ಹರಿಹರನ ಬೋಧೆಯು ೧೫ನೆಯ ಶತಮಾನದಲ್ಲಿ ಖಂಡಿಸಲ್ಪಟ್ಟಿತೆಂದೂ, ಇದರಿಂದ ತಿಳಿಯಲಿಕ್ಕೆ ಬರುವಂತೆ ಇದೆ. ಶಿವಶರಣರು ಅವತಾರಿಗಳು (ನಿತ್ಯಮುಕ್ತರು) ಎಂದು ತಿಳಿಯಲಿಕ್ಕೆ ಇದೊಂದು ಮುಖ್ಯ ಉದಾಹರಣೆಯಾಗಿದೆ.

## ಆಚಾರ್ಯರು ನಾಲ್ಕು ಯುಗದವರು

ಪಂಚಾಚಾರ್ಯರು ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳಲ್ಲಿಯೂ ಇದ್ದರೆಂದು ಕೆಲವು ಗ್ರಂಥಗಳಲ್ಲಿ ಇದೆ. ಅನಾದಿ ಕಾಲದಲ್ಲಿ ( ಕೃತಯುಗದಲ್ಲಿ ? ) ಘಂಟಾಕರ್ಣ, ಗಜಕರ್ಣ, ರೇಣುಕ, ದಾರುಕ, ವಿಶ್ವಕರ್ಣ ಎಂಬ ಹೆಸರಿನಿಂದಲೂ, ತ್ರೇತಾಯುಗದಲ್ಲಿ ಇವರೇ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂಬ ಹೆಸರಿನಿಂದಲೂ, ಕಲಿಯುಗದಲ್ಲಿ ಪುನಃ ಇವರೇ ಉದ್ಭವರಾಗಿ ಬೇರೆ ಹೆಸರಿನಿಂದ ಏಕೋರಾಮ, ಗಣೇಶ್ವರ, ಪಂಡಿತಾಚಾರ್ಯ, ರೇವಣಸಿದ್ಧೇಶ್ವರ, ಮರುಳುಸಿದ್ಧೇಶ್ವರ, ವಿಶ್ವಾರಾಧ್ಯ ಎಂದು ಕರೆಯಲ್ಪಟ್ಟರೆಂತಲೂ 'ವೀರಶೈವ ಧರ್ಮಸಿಂಧು' ಎಂದು ಗ್ರಂಥವು ಹೇಳುತ್ತದೆ. ಕೈಲಾಸದಲ್ಲಿ ಶಿವನ ಸಭೆಯಲ್ಲಿ ರೇಣುಕಾದಿಗಳು ಪ್ರಮಥರೆನಿಸಿಕೊಂಡು ಇದ್ದಂತೆ ಕೆಲವು ಪುರಾಣಗಳಿಂದ ತಿಳಿದು ಬರುವುದಾದರೂ ಅವರು ಆಚಾರ್ಯರೆಂದು ಅಲ್ಲಿ ಹೇಳಲ್ಪಟ್ಟಿಲ್ಲ. ಮೇಲೆಕಂಡ ತ್ರೇತಾಯುಗ, ದ್ವಾಪರಯುಗದ ಹೆಸರುಗಳುಳ್ಳವರು ಎಲ್ಲಿದ್ದರು, ಏನುಮಾಡಿದರೆಂಬುದನ್ನು ತಿಳಿಯಲಿಕ್ಕೆ ಯಾವ ಆಧಾರವೂ ಇಲ್ಲ. ಆದುದರಿಂದ ಕಲಿಯುಗದಲ್ಲಿ ಹೇಳಲ್ಪಟ್ಟ ಹೆಸರುಗಳುಳ್ಳವರ ಕಾಲಮಾನ ಮುಂತಾದವುಗಳೇ ಈ ಚರಿತ್ರೆಯಲ್ಲಿ ವಿಮರ್ಶಿಸಲ್ಪಟ್ಟಿವೆ.

"ಚತುರಾಚಾರ್ಯ ಪ್ರಬಂಧ" ಎಂಬ ಗ್ರಂಥದ ೧೯–೨೨ನೆಯ ಪದ್ಯಗಳಲ್ಲಿ ಯುಗಕ್ಕೆ ಒಬ್ಬೊಬ್ಬರು ಗುರುಗಳಾಗಿರಬೇಕೆಂದೂ ಕೊನೆಯಲ್ಲಿ ಯುಗಕ್ಕೆ ಒಬ್ಬೊಬ್ಬರು ನಮ್ಮಲ್ಲಿ ಬಂದು ಸೇರಬೇಕೆಂದೂ ಶಿವನು ಅಪ್ಪಣೆಮಾಡಿದನೆಂದಿದೆ, ಆ ಪ್ರಕಾರ ಶ್ರೀ ರೇವಣಸಿದ್ಧರು ಕೃತಯುಗದ ಗುರು, ಮರುಳುಸಿದ್ಧರು ತ್ರೇತಾಯುಗದ ಗುರು, ಏಕೋರಾಮರು ದ್ವಾಪರಯುಗದ ಗುರು,

ಪಂಡಿತಾರಾಧ್ಯರು ಕಲಿಯುಗದ ಗುರು ಆಗಬೇಕು. ಹಿಂದೂದೇಶದ ಪಂಚಾಂಗ ಕರ್ತರ ಬರೆವಣಿಗೆ ಪ್ರಕಾರ ಕಲಿಯುಗಕ್ಕೆ ೪೩೨೦೦೦ ವರುಷ, ದ್ವಾಪರ ಯುಗಕ್ಕೆ ಅದರ ಎರಡರಷ್ಟು, ತ್ರೇತಾಯುಗಕ್ಕೆ ದ್ವಾಪರದ ಎರಡರಷ್ಟು, ಕೃತಯುಗಕ್ಕೆ ತ್ರೇತಾಯುಗದ ಎರಡರಷ್ಟು, ವರ್ಷಗಳು ಎಂದು ಗಣನೆ ಮಾಡ ಬೇಕು. ಇದು ಆಚಾರ್ಯರ ಚರಿತ್ರೆಗೆ ಸರಿ ಬರುವದಿಲ್ಲ.

ಶ್ರೀ ರೇವಣಸಿದ್ಧರ ಸಂಬಂಧದ ಪುರಾಣಗಳಲ್ಲಿ ಹೇಳಿದ ಅಂಶಗಳನ್ನು ತಿಳಿಸುವ ಅವರ ಸಂಬಂಧದ ಸಿರಿವಾಳ ಶಾಸನವು ಕ್ರಿ. ಶ. ೧೧೫೭ರದು. ಪಂಡಿ ತಾರಾಧ್ಯರಿದ್ದುದು ಬಸವೇಶ್ವರನ ಸಮಕಾಲ. ಈ ಪ್ರಕಾರ ಲೆಖ್ಖ ಮಾಡಿದರೆ ಕೃತಯುಗದಲ್ಲಿ ರೇವಣಸಿದ್ಧರು, ಕಲಿಯುಗದಲ್ಲಿ ಪಂಡಿತಾರಾಧ್ಯರು, ಇದ್ದರು ಎಂಬುದು ಸರಿಬೀಳುವುದೇ ಇಲ್ಲ. ಆದುದರಿಂದ ಯುಗಗಳ ಗಣನೆಯು ವರ್ಷಗಳು ಈ ಆಚಾರ್ಯರಿಗೆ ಸಂಬಂಧಿಸುವುದಿಲ್ಲ. ಕಲಿಯುಗಕ್ಕಿಂತ ಪೂರ್ವದ ಯುಗಗಳಲ್ಲಿ ಇದ್ದವರ ಅವತಾರ ಎಂಬ ಭಾವನೆಯನ್ನೂ ಪ್ರಾಚೀನ ಭಾವನೆಯನ್ನೂ ತೋರಿಸಲು ಹೀಗೆ ಹೇಳಿದರೆಂದೇ ತಿಳಿಯಬೇಕಾಗಿದೆ. ಒಂದುವೇಳೆ ಅವರು ಇದ್ದರೆಂದು ನಂಬಿದರೂ ಅವರು ಆಚಾರ್ಯರಾಗಿ ಮಾಡಿದ ಕೆಲಸವು ವ್ಯಾಸರ ಯಾವ ಪುರಾಣದಿಂದಲೂ ಹೊರಪಟ್ಟಿಲ್ಲ.

ಡಾಕ್ಟರ್ ಶಾಮಾಶಾಸ್ತ್ರಿಗಳು "ಯುಗಾದಿ" ಹಬ್ಬದ ಹೆಸರಿನ ಮೇಲಿ ನಿಂದ ವರ್ಷಕ್ಕೆ ಒಂದು ಯುಗ ಎಂತಲೂ ಮತ್ತೊಂದು ವಿಧದ ಗಣನೆಯಿಂದ ಸುಮಾರು ಐದು ವರ್ಷಕ್ಕೆ ಒಂದು ಯುಗವೆಂತಲೂ ಹೇಳಿದ್ದಾರೆ.

ಇನ್ನೊಂದು ರೀತಿಯಲ್ಲಿಯೂ ಮೇಲೆಕಂಡಂತೆ ವರ್ಷಕ್ಕೆ ಒಂದು ಯುಗವೆಂದು ಹೇಳಲ್ಪಟ್ಟಿದೆ.

ಈ ಗಣನೆಗಳ ಪ್ರಕಾರವೂ ಆಚಾರ್ಯರ ವರ್ಷಗಳು ಸರಿಬೀಳುವುದಿಲ್ಲ.

ಒಂದು ವರ್ಷದಲ್ಲಿಯೇ ಕೃತಯುಗ, ತ್ರೇತಾಯುಗ, ದ್ವಾಪರಯುಗ ಕಲಿಯುಗ ಇರುವುದೆಂದೂ ಲೇಖನವು ಸಿಕ್ಕುತ್ತದೆ. ಇದೂ ಆಚಾರ್ಯರಿಗೆ ಸಂಬಂಧಿಸಿದುದಲ್ಲ.

ಶ್ರೀ ಸ್ವಾಮಿರಾಜ ನಾರಾಯಣ ಪಟ್‌ಶಾಸ್ತ್ರಿ ಎಂಬುವರು ಹಿಂದಿಯಲ್ಲಿ ಬರೆದಂತೆ ಕನ್ನಡದಲ್ಲಿ ಗುಂಟೂರು ಮಾರುತಿ ಬುಕ್ ಡಿಪೋದವರು ಪ್ರಕಟಿಸಿದ "ಚೇತಾವನಿ" ಎಂಬ ಗ್ರಂಥದಲ್ಲಿ ಒಂದು ಯುಗಕ್ಕೆ ಹೇಳಿದ ವರುಷ ಸಂಖ್ಯೆ

ಯಷ್ಟು ದಿನಗಳು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದೂ ಈ ಆಚಾರ್ಯರ ವರ್ಣಗಣನೆಗೆ ಸಂಬಂಧಿಸುವುದಿಲ್ಲ.

ಐವರೂ ಯುಗ ಯುಗದಲ್ಲಿ ಬೇರೆ ಬೇರೆ ಹೆಸರಿನಿಂದ ಇದ್ದರು ಎಂಬಲ್ಲಿ ಕೃತಯುಗ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಆ ಹೆಸರಿನ ವೀರಶೈವ ಆಚಾರ್ಯರಾಗಿ ಮಾಡಿದಕೆಲಸವು ಚಾರಿತ್ರಿಕವಾಗಿಹುಡುಕಿದರೆ ಸಿಕ್ಕುವುದೇ ಇಲ್ಲ.

ಈ ರೀತಿ ಯುಗಯುಗದಿಂದ ಬಂದರೆಂದು ಆಚಾರ್ಯರ ವಿಷಯವಾಗಿ ಬರೆದಂತೆ ವೀರಶೈವೇತರರಲ್ಲಿಯೂ ರೂಢಿಯು ಕಂಡುಬಂದಿದೆ. ಈ ಪದ್ಧತಿಯ ಅನು ಕರಣಮಾಡಿದುದು ಆಚಾರ್ಯರ ಪೂರ್ವವನ್ನು ವಿಚಾರ ಮಾಡಬಾರ ದೆಂಬ ರುದ್ರ ಪಶುಪತಿಯಂತಹ ಮುಗ್ಧ ಭಕ್ತರಿಗೆ ಬಲವಾದ ಭಕ್ತಿ ಹುಟ್ಟಲಿಕ್ಕೆ ಕಾರಣವಾಗಿ ಇದೆ. ಇರಲಿ, ಒಟ್ಟಿನಲ್ಲಿ ಪಂಚಾಚಾರ್ಯರು ಎಲ್ಲರೂ ಕಲಿಯುಗ ದಲ್ಲಿ (ನಮ್ಮ ಯುಗದಲ್ಲಿ) ಇದ್ದರೆಂದು ತಿಳಿಯುವುದಕ್ಕೆ ಬೇಕಾದಷ್ಟು ಚಾರಿ ತ್ರಿಕ ಆಧಾರಗಳಿರುವುದರಿಂದ ( ಈ ಚರಿತ್ರೆಯಲ್ಲಿ ಆ ವಿವರವಿದೆ.) ಅದೊಂದನ್ನೇ ನಂಬ ಬೇಕಾಗಿದೆ. ಅದಕ್ಕೆ ಯಾವ ಅಡ್ಡಿಯೂ ಇಲ್ಲ.

ವೀರಾಗಮ ಒನೆಯ ಪಟಲದಲ್ಲಿ "ರೇವಣಶ್ಚ ಗುರುಃ ಪೂರ್ವಂ ಮರು ಲಸ್ತದನಂತರಂ ರಾಮದೇವ ಮುನಿಃ ಶ್ರೀಮಾರ್ನ ಪಂಡಿತಾರಾಧ್ಯದೇಶಿಕಃ"

ಎಂಬ ಶ್ಲೋಕವಿದೆ. (ಶ್ರೀಶೈಲ ಇತಿಹಾಸ) ಈ ಶ್ಲೋಕದ ಪ್ರಕಾರ ಶ್ರೀ ರೇವಣಸಿದ್ಧರು ಮೊದಲನೆಯ ಆಚಾರ್ಯರಾಗಿಯೂ, ಮರುಳಸಿದ್ಧರು ಎರಡ ನೆಯ ಆಚಾರ್ಯರಾಗಿಯೂ, ಏಕೋರಾಮದೇವರು ಮೂರನೆಯ ಆಚಾರ್ಯರಾ ಗಿಯೂ ಪಂಡಿತಾರಾಧ್ಯರ ನಾಲ್ಕನೆಯ ಆಚಾರ್ಯರಾಗಿಯೂ ಇದ್ದರೆಂದು ತಿಳಿಯ ಬೇಕಾಗುತ್ತದೆ. ' ಪಂಚಬ್ರಹ್ಮೋದಯ ಭಾಷ್ಯದಿಂದಲೂ ಹೀಗೆ ತಿಳಿದು ಬಂದಿರುವದರಿಂದ ಶ್ರೀ ರೇವಣಸಿದ್ಧರು ಮೊದಲನೆಯವರು ಎಂಬುದಕ್ಕೆ ಬದ ಲಾಗಿ ಕೃತಯುಗದವರು ಎಂದೂ ಮರುಳಸಿದ್ಧರು ಎರಡನೆಯವರು ಎಂಬು ದಕ್ಕೆ ಬದಲಾಗಿ ತ್ರೇತಾಯುಗದವರು ಎಂದೂ ಹೀಗೆಯೇ ಏಕೋರಾಮರೇ ದ್ವಾಪರ ಯುಗದವರೆಂದೂ, ಪಂಡಿತಾರಾಧ್ಯರು ಕಲಿಯುಗದವರು ಎಂದೂ ಚತುರಾಚಾರ್ಯ ಪ್ರಬಂಧನ ಕವಿಯು ಹೇಳಿದ್ದಾನೆ ಎಂದೂ ತಿಳಿಯಬೇಕಾಗಿದೆ. ಪ್ರಭುಸ್ವಾಮಿಗಳು ಕ್ರಿ. ಶ. ೧೨ನೆಯ ಶತಮಾನದವರೆಂಬುದೂ ಅವರ ಗುರು ಅನಿಮಿಷರೆಂಬುದೂ ಪ್ರಸಿದ್ಧವಾದ ಸಂಗತಿ. ಪ್ರಭುಸ್ವಾಮಿಯವರನ್ನು ಕಲಿಯು ಗದವರನ್ನಾಗಿ ಭಾವಿಸಿ ಅವರ ಗುರು ಅನಿಮಿಷರನ್ನು ದ್ವಾಪರಯುಗದವರೆಂದು ಬರೆದ ಉದಾಹರಣೆ ಇರುವುದರಿಂದ ಅದರಂತೆಯೇ ಆಚಾರ್ಯರಲ್ಲಿ ಮೊದಲನೆ ಯವರು ಶ್ರೀ ರೇವಣಸಿದ್ಧರೆಂದು ತಿಳಿಯಬೇಕಾಗಿದೆ. ಉಳಿದವರು ಅವರ ತರುವಾಯದವರು.

—ಮುಂದುವರೆದುದು.



ಸಂಚಿಕೆ ೫, ೬, ೭, ೮.　　　　　　　　　　ಸಂಪುಟ ೩೩

Duplicate

# ಶಿವಾನುಭವ




ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.





ವಾರ್ಷಿಕ ಚಂದಾ　೫ ರೂ. ೭೫ ನ.ಪೈ.

ಮೇ, ಜೂನ, ಜುಲೈ, ಅಗಸ್ಟ　೧೯೫೯.

# ವಿಷಯಾನುಕ್ರಮಣಿಕೆ.





# ಶಿವಾನುಭವ ಆಫೀಸು ವಿಜಾಪುರ

## ಡಾ|| ಪಿ. ಜಿ. ಹಳಕಟ್ಟಿ ಸಂಪಾದಕ ಶಿವಾನುಭವ ವಿಜಾಪುರ

ಇವರ ಸವಿನಯ ವಿನಂತಿ ಏನೆಂದರೆ—

**ಮಹನೀಯರೇ,**

ಈಗ ನಾನು ೩೪ ವರ್ಷಗಳಿಂದಲೂ ಒಂದೇ ಸವನೆ ಈ ಪತ್ರಿಕೆಯನ್ನು ನಡಿಸುತ್ತ ಬಂದಿದ್ದು ಈ ಪತ್ರಿಕೆಯ ಮೂಲಕ ಈ ವರೆಗೆ ೮೧ ಶರಣವಾಙ್ಮಯ ಗ್ರಂಥಗಳು ಹೊರಪಟ್ಟಿರುತ್ತವೆ. ಇದಲ್ಲದೆ ೮-೧೦ ಬೇರೆ ಗ್ರಂಥಗಳು ಈಗ ಮುದ್ರಣದಲ್ಲಿರುತ್ತವೆ. ಇದರಿಂದ ಶರಣವಾಙ್ಮಯದ ಗ್ರಂಥಗಳು ಎಲ್ಲರ ಪರಿಚಯಕ್ಕೆ ಬರಹತ್ತಿವೆ. ಈ ಗ್ರಂಥಗಳಲ್ಲಿ ಅನೇಕವು ವಚನಗ್ರಂಥಗಳೂ, ರಗಳೆಗಳೂ ಈ ಕಾರ್ಯ ಮಾಡುವಲ್ಲಿ ನನಗೆ ಅನೇಕತರದ ಅಡೆತಡೆಗಳು ಒದಗಿದವು. ಆದರೆ ಪರಮಾತ್ಮನ ಕೃಪೆಯಿಂದ ಯಾವ ಬಗೆಯ ಚ್ಯುತಿಯನ್ನು ಹೊಂದದೆ ಈ ವರೆಗೂ ನಾನು ಈ ಕಾರ್ಯಮಾಡುತ್ತ ಬಂದದ್ದಾಯಿತು. ಇದರಲ್ಲಿ ನನಗೆ ಅನೇಕ ಜನ ಮಹನೀಯರು ಸಹಾಯ ಮಾಡುತ್ತ ಬಂದರು. ಅವರ ಹೆಸರುಗಳನ್ನು ಇಲ್ಲಿ ನಿರ್ದೇಶ ಮಾಡುವದು ಯುಕ್ತವೆನಿಸುವದಿಲ್ಲ. ಆದರೆ ಸಾರ್ವಜನಿಕರ ಪ್ರೇಮ ಮತ್ತು ಸಹಕಾರಗಳು ಇವು ನನಗೆ ಕಾಲಕಾಲಕ್ಕೆ ಉಂಟಾದ್ದರಿಂದ ನನಗೆ ಕೆಲಮಟ್ಟಿಗೆ ಕಾರ್ಯಮಾಡಲು ಶಕ್ಯವಾಯಿತು.

ಈಚೆಗೆ ನನ್ನ ಪ್ರಕೃತಿಯಲ್ಲಿ ಆರೋಗ್ಯವಿರಲಿಲ್ಲ. ಇದರ ಮೂಲಕ ಶಿವಾನುಭವವು ಕಾಲಕಾಲಕ್ಕೆ ಹೊರಟಿರುವದಿಲ್ಲ. ಇದಕ್ಕೋಸ್ಕರ ನಾನು ತಮ್ಮ ಕ್ಷಮಾಪಣೆಯನ್ನು ಕೋರುತ್ತೇನೆ. ಹಾಗೂ ಯುಕ್ತ ವೇಳೆಯಲ್ಲಿ ಕೆಲಸವನ್ನು ನಿರ್ವಹಿಸಿಕೊಂಡು ಹೋಗಲು ಯೋಗ್ಯ ಮ್ಯಾನೇಜರರೂ ದೊರೆಯಲಿಲ್ಲ. ಆದರೆ ಈಚೆಗೆ ನನ್ನ ಪ್ರಕೃತಿಯು ಸುಧಾರಿಸುತ್ತ ನಡೆದಿದ್ದು ಪ್ರತಿ ತಿಂಗಳು ಸಂಚಿಕೆಗಳು ಹೊರಡುವಂತೆ ತಕ್ಕ ವ್ಯವಸ್ಥೆಯನ್ನು ಮಾಡಿದ್ದೇನೆ. ಇನ್ನು ನಮ್ಮ ಆಫೀಸಿನಿಂದ ಅನೇಕ ಅವ್ಯವಸ್ಥೆಗಳಾಗಿದ್ದು ಅವುಗಳನ್ನು ಪತ್ರಮುಖಾಂತರ ಇಲ್ಲವೆ ಆಫೀಸಿನಲ್ಲಿ ಸಮಕ್ಷಮಾ ತಿಳಿಸಿದಲ್ಲಿ ನಾನು ಅವುಗಳನ್ನು ಸರಿಪಡಿಸುವೆನು. ತಾವು ಹಾಗೆ ಮಾಡಿದಲ್ಲಿ ನಾನು ತಮಗೆ ಬಹಳ ಕೃತಜ್ಞನಾಗುವೆನು.

ಕಾರಣ ತಾವು ಎಂದಿನಂತೆ ಶಿವಾನುಭವ ಪತ್ರಿಕೆಯ ಬಗ್ಗೆ ವಿಶ್ವಾಸವನ್ನು ತಾಳಿ, ಅದನ್ನು ಮುಂದುವರಿಸಲು ತಮ್ಮ ಸಲಹೆ ಪ್ರೋತ್ಸಾಹನೆಗಳನ್ನು ನೀಡಿದಲ್ಲಿ ನಾನು ತಮಗೆ ಬಹಳ ಆಭಾರಿಯಾಗುವೆನು.

ಕಾರಣ ಎಲ್ಲ ಚಂದಾದಾರರು ಪ್ರೇಮಪುರಸ್ಸರವಾಗಿ ಪತ್ರಿಕೆಯನ್ನು ಪೋಷಿಸುವದಲ್ಲದೆ ಹೆಚ್ಚು ಜನ ಚಂದಾದಾರರನ್ನು ಮಾಡಲು ಪ್ರಯತಿಸುವರೆಂದು ನಾನು ನಂಬಿದ್ದೇನೆ ಇತಿ.

ತಮ್ಮ ವಿಧೇಯ:

ವಿಜಾಪುರ

ಫ. ಗು. ಹಳಕಟ್ಟಿ,

೮-೮-೧೯೫೯

ಸಂಪಾದಕ-ಶಿವಾನುಭವ, ವಿಜಾಪುರ



# ೧. ಬಸವನ ಅವತಾರದ ಐತಿಹ್ಯ.

(ಬರೆದವರು:— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)

---

೧. "ಲೋಕದಲ್ಲಿ ಯಾವಾಗ ಧರ್ಮಕ್ಕೆ ಅಳಿಗಾಲ ಬಂದು; ಅಧರ್ಮಕ್ಕೆ ಬೆಳೆಗಾಲ ಬರುವದೋ: ಆಗ ಪರಮಾತ್ಮನು ಅವತರಿಸಿ ಶಿಷ್ಟರ ಪರಿಪಾಲನೆ ದುಷ್ಟರ ವಧೆಮಾಡಿ ಧರ್ಮದ ಉದ್ಧಾರವನ್ನು ಯುಗಯುಗದಲ್ಲಿ ಮಾಡುವನೆಂದು" ಗೀತೆಯಲ್ಲಿ ಹೇಳಲಾಗಿದೆ. ಅದರಂತೆ ೮೦೦ ವರ್ಷಗಳ ಹಿಂದೆ ಹೋಮ ಹವನ ಯಜ್ಞ ಯಾಗಗಳು ಹೆಚ್ಚಾಗಿ ಜಾತಿ ಜಾತಿಗಳಲ್ಲಿ ಭೇದ ತಲೆದೋರಿತ್ತು. ಹಿಂದುಳಿದ ಜಾತಿಗಳನ್ನು ಮುಂದುವರಿದ ಜಾತಿಗಳು ಸದಾ ತುಳಿಯುತ್ತಿದ್ದವು. ಬಡವರನ್ನು ಬಲ್ಲಿದರು ಬಹುವಾಗಿ ಬಾಧಿಸುತ್ತಿದ್ದರು. ಹಿಂಸೆ ಬಹಳೇ ಬೆಳೆದಿತ್ತು. ಆಚಾರ್ಯರು ಧರ್ಮದ ಹೆಸರಿನಿಂದ ಬಹುವಾಗಿ ಜನರನ್ನು ಸುಲಿಯುತ್ತಿದ್ದರು. ಗುರುವಿನ ಗುತ್ತಿಗೆಯು ಒಂದೇ ಜಾತಿಗೆ ಬಂದು ಅನ್ಯಾಯ ಹೆಚ್ಚಾಗಿ ನಡೆದಿತ್ತು. ಇವರ ಐಸಿರಿ ಮೆರವಣಿಗೆ ಹೆಚ್ಚಾಗಿದ್ದವು. ಎಂಥ ಅಧಮ ನೀಚನಿದ್ದರೂ ಅವನನ್ನೇ ಗುರು

ಎಂದು ಪೂಜಿಸಬೇಕೆಂಬ ಮೂಢನಂಬಿಗೆ ಬೆಳೆದಿತ್ತು. ಧಾರ್ಮಿಕ ಮೂಢ ನಂಬಿಗೆಗಳಿಗೆ ಲೆಕ್ಕವಿಲ್ಲದಾಗಿತ್ತು. ಲಿಂಗಾಯತರೆಲ್ಲ ವೈಷ್ಣವ ಶೈವರ ಆಚಾರ ಗಳನ್ನೇ ಅನುಸರಿಸುತ್ತ ವೀರಶೈವವನ್ನೇ ಸಂಪೂರ್ಣ ಮೂಲೆಗೊತ್ತಿದ್ದರು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳೆಲ್ಲ ಹೇಳಹೆಸರಿಲ್ಲದೆ ಹೋಗಿ ದ್ದವು. ಅನೇಕ ದೇವದೇವತೆಯರ ಮೂರ್ತಿಗಳನ್ನು ಮಾಡಿ ಪೂಜಿಸುತ್ತಿ ದ್ದರು. ಸಂಸಾರ ಸುಳ್ಳೆಂಬ ಗುಲ್ಲು ವಿಶೇಷವಾಗಿ ಬೆಳೆದು ಚಾರ್ವಾಕ, ಬೌದ್ಧ, ಜೈನರ ಪ್ರಾಬಲ್ಯ ಬೆಳೆದಿತ್ತು. ಯೋಗಬಿಟ್ಟು ಭೋಗಿಗಳಾಗಿ ದ್ದರು. ಕಾಯಕಬಿಟ್ಟು ತಿರುಗುತ್ತಿದ್ದರು. ಬರೇ ದುರುಳ ಶುಷ್ಕವೇದಾಂತಿ ಗಳ ಸಂಖ್ಯೆ ಹೆಚ್ಚಾಗಿತ್ತು. ನಡೆನುಡಿಗೆ ತಾಳಮೇಳು ಇಲ್ಲದಾಗಿತ್ತು. ಅನಾಚಾರ ಹೆಚ್ಚಾಗಿ ಬೆಳೆದಿತ್ತು. ಲಿಂಗಾಂಗಿಗಳಲ್ಲಿ ಅನೇಕ ಜಾತಿಗಳಾಗಿ ಮೇಲು ಕೀಳೆಂದು ಬಡಿದಾಡುತ್ತಿದ್ದರು. ಭಕ್ತಿ ಜ್ಞಾನ ಕರ್ಮಗಳಿಗೆ ಸೊನ್ನೆ ಬಂದಿತ್ತು. ದೇಶಕ್ಕೆ ಬಡತನದ ಭೂತ ಬಡಿದಿತ್ತು ಯಾರಲ್ಲಿಯೂ ನಿಜ ವಾದ ಧರ್ಮದ ಕಲ್ಪನೆ ದೇವರ ಕಲ್ಪನೆ ಇರಲಿಲ್ಲ. ಡಂಭಾಚಾರ ಡಂಭಿಕ ತನಗಳು ತಾಂಡವವಾಡುತ್ತಿದ್ದವು. ಹೀಗೆ ಯಾತರಲ್ಲಿಯೂ ಪದ್ಧತಿ ರೀತಿ ನೀತಿಗಳು ಇರದೆ ನಾಡು ಅಧರ್ಮದ ನೆಲೆ ಬೀಡಾಗಿತ್ತು. ಈ ವಿಷಮ ಪರಿಸ್ಥಿತಿಯಲ್ಲಿ ಪರಮಾತ್ಮನು ಅವತರಿಸುವದು ಸ್ವಾಭಾವಿಕವೇ ಸರಿ. ಅದಕ್ಕೆ ಬಾಗೇವಾಡಿಯಲ್ಲಿ ಬಸವನ ಅವತಾರವಾಯಿತು. ಅವತಾರಕ್ಕೆ ದೊಡ್ಡ ದೊಡ್ಡ ಪಟ್ಟಣ ನಗರಗಳ ಅವಶ್ಯಕತೆ ಇಲ್ಲ. ಬಹುತರ ಅವತಾರಗಳು ಹಳ್ಳಿಯಲ್ಲಿ ಹೆಚ್ಚಾಗಿ ಆದುದು ಕಂಡುಬರುವದು.

ರಾಮ, ಕೃಷ್ಣ, ಪ್ರಲ್ಹಾದ, ಧ್ರುವ, ನಾರದ ಮೊದಲಾದ ಅನೇಕ ಪೌರಾಣಿಕ ಅವತಾರಗಳಾಗಿವೆ. ಇವರ ಅವತಾರಗಳು ಐತಿಹಾಸಿಕವೆನಿಸು ವದಿಲ್ಲ. ಇವೆಲ್ಲ ವ್ಯಾಸ ಋಷಿಯ ಕಾಲ್ಪನಿಕ ಅವತಾರಗಳಾಗಿವೆ. ಇವುಗ ಳಿಗೆ ಐಹಿತಿಹಾಸಕ ಆಧಾರಗಳಿಲ್ಲ. ಹಿನ್ನೆಲೆಯೂ ಇಲ್ಲ. ಅಲ್ಲದೆ ಇವರ ಸಾಹಿತ್ಯವಿಲ್ಲ. ಇವರು ಸ್ವತಃ ಬರೆದ ಯಾವ ವಚನ, ಪದ, ಪದ್ಯ, ಉಪ ದೇಶ ತತ್ವಗಳು ಸಿದ್ಧಾಂತಗಳು ಇಲ್ಲ. ಅದಕ್ಕೆ ಇವೆಲ್ಲ ವ್ಯಾಸ ಮಹಾ ಕವಿಯ ಕಾಲ್ಪನಿಕ ಸೃಷ್ಟಿಯಲ್ಲಿ ನಿರ್ಮಾಣವಾದ ವ್ಯಕ್ತಿಗಳೆಂದೇ ತೋರು ವದು. ಇದರಂತೆ ಪಾಂಡವರ ಹಾಗೂ ಕೌರವರ ಚರಿತೆಗಳೂ ಭಾಗವತ ಕಥೆಗಳೂ ಸಹ ಐತಿಹಾಸಿಕವೆಂದು ತೋರುವದಿಲ್ಲ. ರಾಮಾಯಣದ ಕಥೆಯೂ ಹಾಗೇ ಇರುವದು. ಇವೆಲ್ಲ ಶರೀರದಲ್ಲಿಯ ಗುಣಗಳಿಗೆ ಹೋಲಿಸಿ ಬಿರು

ಸಾದ ಆಧ್ಯಾತ್ಮವನ್ನು ಸರಸಾಗಿ ಸರಿಯಾಗಿ ತಿಳಿದುಕೊಳ್ಳುವಂತೆ ಈ ಮಹಾ ಕವಿಗಳು ಈ ಮಹಾ ಗ್ರಂಥಗಳನ್ನು ರಚಿಸಿದ್ದಾರೆ ಹೊರತು ಇವರೆಲ್ಲ ಐತಿಹಾಸಿಕ ಅವತಾರಿಕರಲ್ಲ. ಇದರಂತೆ ಸಕಲ ಪುರಾಣಗಳ ಮಹಾನಾಯಕರ ಹಣೆಯು ಬರಹವಾಗಿದೆ. ಶಿವಪುರಾಣ, ವಿಷ್ಣುಪುರಾಣ, ಶಕ್ತಿಪುರಾಣ, ಗರುಡಪುರಾಣ ಪದ್ಮಪುರಾಣ ಮೊದಲಾದವುಗಳೆಲ್ಲ ಐತಿಹಾಸಿಕವಲ್ಲ. ಆದರೆ ಏಸು. ಪೈಗಂಬರ, ಬುದ್ಧ, ಬಸವ, ಗಾಂಧಿ, ಪುರಂದರದಾಸ, ಚನ್ನಬಸವ, ಪ್ರಭುದೇವರು, ಸಿದ್ಧರಾಮ, ಶಿವಾಜಿ, ರಾಮದಾಸ, ರಾಮಕೃಷ್ಣಪರಮಹಂಸ, ವಿವೇಕಾನಂದ, ಶಂಕರಾಚಾರ್ಯ, ಮಧ್ವಾಚಾರ್ಯ, ತುಕಾರಾಮ, ಚೈತನ್ಯ, ಸಾಕ್ರೆಟೀಸ ಕಾರ್ಲಮಾರ್ಸ, ಅರವಿಂದ, ರಾಮತೀರ್ಥ, ಅಕ್ಕಮಹಾದೇವಿ, ನೀಲಾಂಬಿಕೆ, ವಿದ್ಯಾರಣ್ಯ, ಲೆನಿನ್, ರಾಮಾನುಜಾಚಾರಿ, ಸಖುಬಾಯಿ, ಮೀರಾಬಾಯಿ, ಕಬೀರ, ಮೈತ್ರೇಯಿ, ಗಾರ್ಗೆಯಿ, ನಿಜಗುಣಶಿವಯೋಗಿಗಳು ಇಂಥ ಇನ್ನೂ ಅನೇಕರು ಐತಿಹಾಸಿಕ ಅವತಾರಗಳೆನಿಸುವರು. ಯಾಕಂದರೆ ಇವರ ಜನನವು ಸ್ವಾಭಾವಿಕ ರೀತಿಯಲ್ಲಿ ಆಗಿದೆ. ಮಂತ್ರತಂತ್ರಗಳಿಂದ ಆಗಿಲ್ಲ. ಇವರ ವಿವಾಹಗಳು ಸಹ ಸ್ವಾಭಾವಿಕ ಆಗಿವೆ. ಅಸ್ವಾಭಾವಿಕ ಚರಿತೆಗಳಿಂದ ಕೂಡಿಲ್ಲ. ಅಂಥ ಅಸತ್ಯ ಅದ್ಭುತ ಕೃತಿಗಳಿಂದ ಇವರ ಚರಿತೆ ಹೆಣೆದಿಲ್ಲ. ಅಲ್ಲದೆ ಈ ಎಲ್ಲರೂ ಕಾವ್ಯ, ಗ್ರಂಥ, ವಚನ, ತತ್ವ, ಸಿದ್ಧಾಂತ ಉಪದೇಶಗಳನ್ನು ಬರೆದದ್ದು ಕಂಡುಬರುವದು. ಕಲಿಯುಗದವರೂ ಕೂಡ ವಚನ, ಅಭಂಗ, ಪದ, ಪದ್ಯಗಳನ್ನು ಬರೆದಿದ್ದಾರೆ ಅದಕ್ಕಂತೆ ಇವರ ಅವತಾರಗಳು ಐತಿಹಾಸಿಕವೆಂದು ಹೇಳಲಿಕ್ಕೆ ಯಾವ ಅಡ್ಡಿ ಇಲ್ಲ. ಬಹುತರ ಎಲ್ಲ ಶರಣರೂ ವಚನಗಳನ್ನು ರಚಿಸಿದ್ದು ಕಂಡು ಬರುವದು. ಇದರಮೇಲಿಂದಲೇ ಇವರು ಇದ್ದರೆಂದು ಹೇಳಲಿಕ್ಕೆ ಯಾವ ಅಡ್ಡಿ ಆತಂಕಗಳಿಲ್ಲ. ಇವಲ್ಲದೆ ತಾಡವಾಲೆಯ ಗ್ರಂಥಗಳು ಶಿಲಾಲೇಖಗಳು ವೀರಗಲ್ಲುಗಳು ತಾಂಬ್ರಪಟಗಳು ದೇಗುಲಗಳು ಸಹ ಇವರೆಲ್ಲರ ಇರುವಿಕೆಯು ಐಹಿತಿಹಾಸಿಕವಾದವುಗಳೆಂದು ತಿಳಿಸಿಕೊಡುವವು. ಆದರೆ ಪುರಾಣಗಳಿಗೆ ಈ ಯಾವ ಆಧಾರಗಳಿಲ್ಲ. ಈ ಚರಿತೆಗಳು ಅಸ್ವಾಭಾವಿಕವಾಗಿ ಓದುವವರಿಗೆ ಕೇಳುವವರಿಗೆ ಅದ್ಭುತವಾಗುವಂತೆ ಹೆಣೆಗವುಗಳಿರುವವು. ಅವತಾರಿಕರು ಧರ್ಮದಲ್ಲಿ ಜಾಗ್ರತಿ ಮಾಡಲು, ಅಧರ್ಮವನ್ನು ತುಳಿಯಲು, ಧಾರ್ಮಿಕ ಸ್ವಾತಂತ್ರವನ್ನು ಜನಸಾಮಾನ್ಯರಿಗೆ ಕೊಡಲು, ಜನ್ಮತಾಳುವರು.

ಇದು ಅಲ್ಲದೆ ರಾಜಕೀಯ ಸ್ವಾತಂತ್ರ ಸಾಮಾಜಿಕ ಸ್ವಾತಂತ್ರ ಆರ್ಥಿಕ ಸ್ವಾತಂತ್ರ್ಯಗಳನ್ನೂ ಜನಸಾಮಾನ್ಯರಿಗೆ ಒದಗಿಸಿಕೊಡಲು ಸಹ ಅವತಾರಗಳು ಆಗುವದು ಸಹ ಸತ್ಯವಾಗಿರುವದು, ಇದನ್ನು ನಾವು ಐತಿಹಾಸಿಕವಾಗಿ ಕಂಡುಹಿಡಿಯಲು ಅನೇಕ ಆಧಾರಗಳಿರುವವು. ಮೇಲೆ ಬಂದ ಹೆಸರುಗಳ ವ್ಯಕ್ತಿಗಳಲ್ಲಿ ಧಾರ್ಮಿಕ ಹಾಗೂ ರಾಜಕೀಯ ಸ್ವಾತಂತ್ರಗಳೆರಡನ್ನು ಜನಕ್ಕೆ ಒದಗಿಸಿ ಕೊಟ್ಟವರಿರುವರು. ಅವರದೂ ಸಹ ಸಾಹಿತ್ಯವಿರುವದು. ಈ ಪ್ರಕಾರ ವಾಚಕರು ನಿಜವಾದ ಅವತಾರಿಕರನ್ನು ಅರಿತುಕೊಂಡು ನಡೆಯುವದು ಒಳಿತು. ಬರೇ ಮೂಢನಂಬಿಗೆಯಿಂದ ಈಗಿನ ವಿಜ್ಞಾನ ಯುಗದಲ್ಲಿ ನಮ್ಮ ಉದ್ಧಾರವಾಗಾವದು ಶಕ್ಯವಿಲ್ಲ. ಬರೆಯುವವರೂ ಕೂಡ ಬಹು ಜಾಗರೂಕತೆಯಿಂದ ಬರೆಯಬೇಕು. ಹಿಂದಿನ ಕವಿಗಳು ಬರೆದರೆಂದು ಎಂದೂ ಬರೆಯಬಾರದು. ಈ ವಿಜ್ಞಾನ ಯುಗದಲ್ಲಿ ಪ್ರತಿಯೊಂದಕ್ಕೂ ಕಾರಣ ಕೇಳುವರು. ಕವಿಗಳು ಜನವನ್ನು ಮೂಢನಂಬಿಗೆಗೆ ಎಳಿಸಬಾರದು. ನಿಜಸಂಗತಿಯಾವದು ಎಷ್ಟು ಎಂಗು ಕಂಡುಹಿಡಿಯುವದು ಈಗಿನ ಆಗಿನ ಕೆಲವು ಸಾಹಿತ್ಯಗಳಲ್ಲಿ ಬಹು ಕಠಿಣವೆನಿಸುವದು ಕಾದಂಬರಿ, ನಾಟಕ, ಪುರಾಣ, ಕಾವ್ಯ, ಕಥೆ, ಸಿನೇಮಾಗಳು ಬಹುತರ ಕಾಲ್ಪನಿಕವಾದವುಗಳೇ ಇರುವವು. ಅಲ್ಪ ಸ್ವಲ್ಪ ಸತ್ಯವಿದ್ದರೂ ಬಹುವಾಗಿ ವಿಶಾಲವಾಗಿ ಬೆಳಿಸಿ ಬರೆದವುಗಳೇ ಇರುವವು. ಕವಿಗಳು ತಮ್ಮ ಕೃತಿಗಳನ್ನು ಜನ ವಿಶೇಷವಾಗಿ ಮೆಚ್ಚಲೇಕೆಂಬ ಉದ್ದೇಶದಿಂದ ಬರೆದದ್ದೇ. ವಿಶೇಷ ಗೋಚರವಾಗುವದು. ಇದೆಲ್ಲ ಕವಿಯಾದವನಿಗೆ ಗೊತ್ತು. ಲೇಖಕ ಗ್ರಂಥಕಾರನಿಗೇ ಇದರ ಕೀಲ ಹೊಳೆಯುವದು.

ಈ ಬಸವನ ಅವತಾರವನ್ನು ವಿಚಾರಿಸಿದರೆ ಐತಿಹ್ಯ ಸಂಗತಿಗಳು ಕಂಡುಬರುವವು. ಧರ್ಮಕ್ಕೆ ಅಳಿಗಾಲಬಂದಿತ್ತು. ಅಂತೇ ಬ್ರಾಹ್ಮಣರಲ್ಲಿ ಜನಿಸಿ ಬ್ರಾಹ್ಮಣ್ಯಕ್ಕೇ ಕೊಡಲಿಯ ಪೆಟ್ಟನ್ನು ಬಾಲ್ಯದಿಂದಲೇ ಕೊಡಹತ್ತಿದನು. ಮುಂಜಿವೆಯನ್ನು ವಿರೋಧಿಸಿದನು. ಹೋಮ ಹವನಗಳ ವಿರುದ್ಧ ತಕರಾರು ಹೂಡಿದನು, ಹುಟ್ಟಿದ ಕೂಡಲೇ ಕಲ್ಲಿನಂತೆ ಬಿದ್ದು ಬಿಟ್ಟನು. ಬರೇ ಉಸುರು ಮಾತ್ರ ಆಡುತ್ತಿತ್ತು. ಉಳಿದ ಸಂಸ್ಕಾರಗಳು ಕೂಸಿಗೆ ಮಾಡಗೊಡಬಾರದೆಂದು ಪರಮಾತ್ಮನ ಸಂಕಲ್ಪವಿತ್ತೆಂದು ತೋರುವದು. ಬ್ರಾಹ್ಮಣರಲ್ಲಿ ಜನಿಸಿ ಅದನ್ನು ಗೀಳುಗಳೆಯಲು ಹೆಣಗಲು ಆಗಿನಿಂದಲೇ

ಪರಮಾತ್ಮನು ಯೋಚಿಸಿದಂತೆ ಅನಿಸುವದು. ಅದಕ್ಕೆ ಅನೇಕ ಸಾಧು ಸತ್ಪುರುಷರಿಗೆ ಜೋಗಿ ಜಂಗಮರಿಗೆ, ಜ್ಯೋತಿಷ್ಯಗಾರರಿಗೆ, ಭವಿಷ್ಯವಾದಿಗಳಿಗೆ, ಕರೆದುಕೇಳುತ್ತಿರಲು, ಯಾರಿಗೂ ಬಗೆಹರಿಯಲಿಲ್ಲ. ಕರ್ಮಧರ್ಮ ಸಂಯೋಗದಿಂದ ಜಾತವೇದಮುನಿಗಳು ಪಯಣ ಮಾಡುತ್ತ ಬಾಗೇವಾಡಿಗೆ ಬಂದರು. ಇದರಂತೆ ಅವರಿಗೂ ಈ ಕೂಸಿನ ಬಗ್ಗೆ ವಿಚಾರಿಸಲಾಗಿ ಕೂಸಿಗೆ ಲಿಂಗಧಾರಣ ಮಾಡಿ ಭಸ್ಮವನ್ನು ಧರಿಸಿ ಮಂತ್ರೋಪದೇಶ ಕಿವಿಯಲ್ಲಿ ಮಾಡಲಾಗಿ ಕೂಸು ಜಾಗ್ರತವಾಯಿತು. ಇವುಗಳನ್ನು ದೇಹದಿಂದ ಅಗಲಿಸಿದರೆ ಕೂಸಿಗೆ ಮೊದಲಿನ ಸ್ಥಿತಿಯೇ ಪ್ರಾಪ್ತವಾಗುವದೆಂದೂ ಕೂಸು ಧರ್ಮಕ್ರಾಂತಿಯನ್ನು ಮಾಡಲು ಅವತರಿಸಿದ ಪರಾತ್ಪರ ಪರಮಾತ್ಮನೆಂದೂ ಹೇಳಿಹೋದನು. ಇದಕ್ಕೆ ತಾಯಿತಂದೆಗಳು ನಿರುಪಾಯರಾಗಿ ಸುಮ್ಮನೆ ಇದ್ದರು. ಇವೆಲ್ಲ ಸಂಗತಿಗಳು ಸ್ವಾಭಾವಿಕವಾಗಿರುವವು. ಅದ್ಭುತಗಳಲ್ಲ, ಅಲ್ಲದೆ ಅವತಾರಿಕರ ಕಾರ್ಯಕ್ರಮಗಳು ಸೂಕ್ಷ್ಮವಾಗಿ ಬಾಲ್ಯದಲ್ಲಿಯೇ ಪ್ರಾರಂಭವಾದುದು ಕಂಡುಬರುವದು. ಶಂಕರಾಚಾರ್ಯ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಚೈತನ್ಯ ಮೊದಲಾದವರಿಗೆ ಬಾಲ್ಯದಲ್ಲಿ ಇವರಂತೆ ಘಟನೆಗಳು ಆದುದು ಕಂಡುಬರುವದು.

ಪರಮಾತ್ಮನ ಪೂರ್ವ ಯೋಜನೆಯಂತೆ ಬಸವನ ಅವತಾರವಾಗಿರುವದು. ಇದರಂತೆ ಶ್ರೀ ರಾಮಕೃಷ್ಣ ಪರಮಹಂಸರ ಅವತಾರವೂ ಕೂಡ ಪರಮಾತ್ಮನ ಪೂರ್ವ ಯೋಜನೆಯ ಪ್ರಕಾರವೇ ಆಗಿರುವದೆಂದು ಸಹಜ ತೋರುವದು. ರಾಣಿರಾಸಮಣಿಯು ಗಂಡತೀರುವದು, ಆಕೆ ಕೋಟ್ಯಾಧೀಶಳಿರುವದು, ಕಾಶೀವಿಶ್ವನಾಥನ ದರ್ಶನಕ್ಕೆ ಹೋಗುವ ತಯಾರಿ ಮಾಡಿದ್ದು ಪರಮಾತ್ಮನು ಸ್ವಪ್ನದಲ್ಲಿ ಬಂದು ಮಹಾಕಾಲಿಯ ಮಂದಿರವನ್ನು ದಕ್ಷಿಣೇಶ್ವರದಲ್ಲಿ ಗಂಗಾನದಿಯ ದಂಡೆಯಲ್ಲಿ ನಿರ್ಮಿಸಲು ಆಜ್ಞಾಪಿಸಿ ಕಾಶಿಗೆ ಬರದಂತೆ ವಿಧಿಸಿದ್ದು ಬಡ ಬ್ರಾಹ್ಮಣರ ಮನೆಯಲ್ಲಿ ತತ್ಪೂರ್ವದಲ್ಲಿಯೇ ರಾಮಕೃಷ್ಣರು ಜನಿಸಿದ್ದು, ಕಾಲಿ ಪೂಜೆಗೆ ರಾಮಕೃಷ್ಣರನ್ನು ಅಣಿಮಾಡಿದ್ದು, ವಿವೇಕಾನಂದ ಮೊದಲಾದ ಅನೇಕ ಬಿ, ಎ. ಎಮ್. ಎ. ಸನ್ಯಾಸಿಗಳು ಅದೇ ಸಮಯದಲ್ಲಿ ಬಂಗಾಲದಲ್ಲಿ ಜನಿಸಿದ್ದು ಈ ಎಲ್ಲ ಘಟನೆಗಳು ಪರಮಾತ್ಮನ ಪೂರ್ವಯೋಜನೆಯಂತೆ ಜರಗಿರುವವೆಂದು ಸಹಜ ಅನಿಸುವಂತೆ ಬಸವನ ಅವತಾರವೂ ಕೂಡ ಇದರಂತೆ ಆಗಿರುವದೆಂದು ಚಿಕ್ಕಂದಿನ ಘಟ

ನೆಗಳಿಂದಲೇ ಅನಿಸುವದು. ವಯಸ್ಸಾಗಿ ಸಂಸಾರದಲ್ಲಿ ಪೆಟ್ಟುತಿಂದು ಅನುಭವ ಮಾಡಿಕೊಂಡು, ಸಂಸಾರ ತ್ಯಾಗ ಮಾಡಿ ಸನ್ಯಾಸಿ ಆಗಿ ಕೆಲಕಾಲ ಅರಣ್ಯದಲ್ಲಿ ತಪಗೈದು, ಪುನಃ ಜನದಲ್ಲಿ ಬಂದು ಸುಧಾರಣೆ ಮಾಡಿದಂಥ ಅವತಾರವೂ ಅಲ್ಲ. ಶೈ ಸವಾವಸ್ಥೆಯಲ್ಲಿಯೇ ಅವತಾರದ ಚಿನ್ಹಗಳು ತೋರಿವೆ. ಬಾಲ್ಯದಲ್ಲಿಯಂತೂ ಅವು ಪ್ರತ್ಯಕ್ಷ ಕಾರ್ಯಮಾಡುವಂತಾಗಿವೆ. ಎಂಟನೇ ವರ್ಷಕ್ಕೆ ಮನೆಯನ್ನು ತಂದೆತಾಯಿಯನ್ನು ಬಿಟ್ಟುಹೊರಟು ಬಾಗೇವಾಡಿಯಿಂದ ಕೂಡಲಸಂಗಮದ ತನಕ ಬರೇ ಕಾಲುನಡಿಗೆಯಿಂದ ಪಯಣ ಮಾಡುತ್ತ ಹೋದಸಂಗತಿಯಿಂದ ಅವತಾರಿಕರಿಗೆ ಇದೆಲ್ಲ ಶಕ್ಯವೇ ಹೊರತು ಸಾಮಾನ್ಯರಿಗೆ ಶಕ್ಯವಿಲ್ಲೆಂದು ತೋರುವದಿಲ್ಲವೇನು? ಈ ಏಳು ವರ್ಷಗಳ ತನಕ ಮನೆಯವರಿಗೆ ಬಸವನು ಎಷ್ಟು ವಿರೋಧ ಮಾಡಿರಬೇಕು? ಸಮಾಜದವರಿಗೂ, ಬಂಧುಬಾಂಧವರಿಗೂ ಕೂಡ ಇವನು ವಿರೋಧ ಮಾಡಿದ್ದರಿಂದಲೇ ಹೀಗೆ ಚಿಕ್ಕ ಬಾಲಕನಿಗೆ ಮನೆ ಬಿಟ್ಟು ಊರು ಬಿಟ್ಟು ಸಮಾಜ ಬಿಟ್ಟು ಹೋಗಲು ಅಪ್ಪಣೆ ಕೊಟ್ಟಿರಬೇಕು. ತಮ್ಮ ಸಮಾಜದ ಯಾರಿಗೂ ಇವನು ಬೇಕಾಗಿದ್ದಿಲ್ಲೆಂದೇ ಇದರಮೇಲಿಂದ ಸಹಜ ಅನಿಸುವದಿಲ್ಲವೇ! ಇವನು ಬೇಕಾಗಿದ್ದರೆ ಯಾರೂ ಇಂಥ ಚಿಕ್ಕ ವಯಸ್ಸಿನಲ್ಲಿ ಮನೆಹೊರಗೆ ಎಂದೂ ಹೋಗಗೊಡಿತ್ತಿರಲಿಲ್ಲ. ಬುದ್ಧನಂತೆ ಇವನೇನು ರಾತ್ರಿ ಮಲಗಿದ ಹೆಂಡತಿ ಮಗನನ್ನು ಬಿಟ್ಟು ೨೯ನೇ ವಯಸ್ಸಿಗೆ ಕುದುರೆ ತಕ್ಕೊಂಡು ಹೇಳದೆ ಕೇಳದೆ ಹೋಗಲಿಲ್ಲ. ಆದಕ್ಕೆ ಬುದ್ಧನ ತ್ಯಾಗಕ್ಕಿಂತ ಬಸವನ ತ್ಯಾಗವು ಶುದ್ಧವೂ, ಪವಿತ್ರವೂ, ಶ್ರೇಷ್ಠವೂ ಎಂದು ಅನಿಸುವದಿಲ್ಲವೆ? ಶಂಕರಾಚಾರ್ಯರು ಮೊಸಳಿಯ ಬಾಯಿಯಲ್ಲಿ ತನ್ನ ಕಾಲನ್ನು ಕೊಟ್ಟಂತೆ ಮಾಡಿ ತಾಯಿಯ ಪರವಾನಿಗಿಯನ್ನು ಜೋರುಜುಲುಮೆಯಿಂದ ಪಡೆದು ಹೊರಟು ಹೋದನು. ಆದರಂತೆ ಇದಾಗಿಲ್ಲ. ಇವನ ವಿರೋಧಕ್ಕಾಗಿ ಮನೆಯವರೂ ಬಂಧುಬಾಂಧವರೂ ಸಮಾಜದವರೂ ಬೇಸತ್ತು ಮನೆ ಬಿಡಿಸಿದಂತೆ ತೋರುವದು. ಮನೆಯವರಿಗೆ ಮುಂಜಿಪಿಯೇ ಇವನು ಮಾಡಿದ ಕಟ್ಟಕಡೆಯ ವಿರೋಧವೆಂದು ತೋರುವದು ಎಲ್ಲಿಯಾದರೂ ಸತ್ತುಹೋಗೆಂದೇ ಎಲ್ಲರೂ ಶಪಿಸಿ ಹೊರಗೆ ಹಾಕಿದ್ದರಿಂದು ಧಾರಾಳವಾಗಿ ಹೇಳಬಹುದು. ಈ ಘಟನೆಯು ಸ್ವಾಭಾವಿಕವೂ ನಿಜವಾದುದೂ ಎಂದು ತೋರುವದು. ಆದಕ್ಕೆ ಬಸವನ ಅವತಾರವು ಪರಮಾತ್ಮನ ಪೂರ್ವಯೋಜನೆಯಂತೆ ಆಗಿರುವದೆಂದು ಧಾರಳವಾಗಿ ಅನಿಸುವದು.

ಅನೇಕ ಕವಿಗಳೂ ಗ್ರಂಥಕಾರರೂ ಬಸವನ ಅವತಾರದ ಚರಿತೆಯನ್ನು ಬೇರೆ ಬೇರೆಯಾಗಿ ಬರೆದಿದ್ದಾರೆ. ಇದು ಸರಿಯಲ್ಲ, ಸತ್ಯವನ್ನು ಶೋಧಿಸಿ ಬರೆಯುವದು ಒಳಿತು. ಮೊದಲು ಅವತಾರವೆಂದರೆ ಏನೆಂದು ಅರಿಯುವದು ಒಳಿತು. ಯಾಕಂದರೆ ಜನ ಧರ್ಮಭ್ರಷ್ಟರಾಗುತ್ತಾರೆ. ಹೆಚ್ಚು ನೀಚರಾಗುತ್ತಾರೆ. ಸಂಭಾವಿತರಿಗೆ ಮತ್ತು ಬಡವರಿಗೆ ತ್ರಾಸು ಕೊಡುತ್ತಾರೆ. ಸತ್ಯವನ್ನು ತುಳಿಯುತ್ತಾರೆ. ಆ ನೊಂದ ಸಂಭಾವಿತರು, ಬೆಂದ ಬಡವರು, ತುಳಿಸಿಕೊಂಡವರು ಆ ದುಷ್ಟರಿಗೆ, ದುರ್ಜನರಿಗೆ, ನೀಚರಿಗೆ ಶಪಿಸುತ್ತಾರೆ. ಇವರು ತೀವ್ರ ಹಾಳಾಗಲಿ, ಸತ್ಯ ಏಳಲಿ, ಬಾಳಲಿ, ಉಳಿಯಲಿ ಎಂದು ಹೃದಯದಲ್ಲಿ ಸದಾ ನುಡಿಯುವರು. ಆ ಶಾಪಗಳದೊಂದು ಮೊತ್ತವಾಗುವದು. ಆಗ ಪರಮಾತ್ಮನು ಸಜ್ಜನರ ಮೊರೆಯನ್ನು ಆಲಿಸಿದನೆನ್ನುವಂತೆ ಶಾಪಗಳ ಮೊತ್ತವೇ ಬಲಿಯುತನ, ಬಲ್ಲಿದನ, ಬಲ್ಲವನ ರೂಪದಿಂದ ಉದಯನಾಗುವನೊಬ್ಬನು. ಅವುಗಳೆಲ್ಲ ಕೂಡಿ ಅವನನ್ನು ಕಾರ್ಯಪ್ರವೃತ್ತನನ್ನಾಗಿ ಮಾಡಿ ಧರ್ಮೋದ್ಧಾರ, ದೇಶೋದ್ಧಾರ ಸಮಾಜೋದ್ಧಾರ ನುಡಿನಾಡಿನುದ್ಧಾರಗಳನ್ನು ಮಾಡಿಸುವವು. ಒಂದು ನಾಡಿನಲ್ಲಿ ಒಬ್ಬ ದುಷ್ಟನು ನೀಚನು ಸದಾ ಜನರನ್ನು ಹಿಂಸಿಸುವನು. ಅಪಮಾನಗೊಳಿಸುವನು, ಕಾಡುವನು, ಪೀಡಿಸುವನು, ಸುಲಿಗೆ ಮಾಡುವನು ಸ್ತ್ರೀಯರನ್ನೂ ಸಹ ಕೆಡಿಸುವನೆಂದು ಇಟ್ಟುಕೊಳ್ಳೋಣ. ಇವರೆಲ್ಲರೂ ಅವನಿಂದ ಪೀಡೆ ಹೊಂದಿ ಮನದಲ್ಲಿಯೇ ನೊಂದರು. ಅಂತರಂಗದಲ್ಲಿಯೇ ಶಪಿಸಿದರು. ಬಹಿರಂಗದಲ್ಲಿ ಇವರ ಆಟವೇನೂ ಯಾವ ರೀತಿಯಿಂದ ನಡೆಯದಕ್ಕಾಗಿ ಸುಮ್ಮನೆ ಬೆಪ್ಪಾಗಿ ಕುಳಿತುಬಿಡುವರು. ಇವರ ಹೃದಯದ ಕಳವಳಗಳ ಶಾಪಗಳು ನೊಂದ ನೋಟಗಳು ಒಟ್ಟುಗೂಡುವವು. ಅವುಗಳನ್ನು ಪರಮಾತ್ಮನು ಲಾಲಿಸಿದನೆನ್ನುವಂತೆ ಆಗುವದು. ಆಗ ಇವನಿಗಿಂತ ಹೆಚ್ಚಿನ ಬಲವಂತನೂ, ಸತ್ಯಸಂಧನೂ, ನ್ಯಾಯವಂತನೂ, ತ್ಯಾಗಿಯೂ, ಚಟಗಳಿಲ್ಲದವನೂ ಜನಿಸುವನು. ಇದೇ ಅವತಾರದ ಗುಟ್ಟು. ಪರಮಾತ್ಮನೇ ಇಳಿದು ಬರುವನೆಂದು ಇದಕ್ಕೆ ಕೆಲವರು ಅನ್ನುವರು ನಾವೆಲ್ಲರೂ ಪರಮಾತ್ಮರೇ ಸರಿ. ಆದರೆ ಇವನೂ ಕೂಡ ಪರಮಾತ್ಮನೆಂದು ಯಾಕೆ ಹೇಳಬಾರದು? ಇವನಿಗೆ ಅವತಾರಿಕನೆನ್ನಬಹುದು ಮತ್ತೇನಾದರೂ ಅನ್ನಬಹುದು, ಒಟ್ಟಿನಲ್ಲಿ ಅನೇಕರ ಬಯಕೆಯಿಂದ ಹುಟ್ಟಿದ ಒಂದು ಶ್ರೇಷ್ಠ ವ್ಯಕ್ತಿ ಅನೇಕರು ಬಯಸಿ ಬೇಡಿದ್ದರಿಂದ ಇವನಲ್ಲಿ ಸ್ವಾಭಾವಿಕ

ವಾಗಿ ವಿದ್ಯ, ಜ್ಞಾನ, ಬಲ, ಶಕ್ತಿ, ಯುಕ್ತಿ, ತ್ಯಾಗ, ಸೇವೆ, ಪ್ರೇಮ ಭಕ್ತಿ ಮೊದಲಾದ ಸದ್ಗುಣಗಳು ಹೆಚ್ಚಾಗಿ ಪ್ರಕಾಶವಾಗಿ ಇರಲೇಬೇಕು. ಇದೇ ಅವತಾರದ ಗುಟ್ಟು ಬಸವನು. ಇದರಂತೆ ಅನೇಕ ಜನರು ಬಯಸಿದ್ದರಿಂದ ಜನಿಸಿದ ಮಹಾ ವ್ಯಕ್ತಿ ಎಂದು ಹೇಳಬೇಕು. ಎಲ್ಲ ಅವತಾರಿಕರೂ ಇದರಂತೇ ಇರುವರೆಂದು ಧಾರಾಳವಾಗಿ ಹೇಳಬಹುದು.

ಸಿಂಗಿರಾಜನು ಬೇರೆ ರೀತಿಯಿಂದ ಬಸವನ ಅವತಾರವನ್ನು ಹೇಳಿದರೆ ಹರಿಹರನು ಬೇರೆ ರೀತಿಯಲ್ಲಿ ಹೇಳಿದ್ದಾನೆ. ಭೀಮ ಕವಿಯೂ ಮತ್ತೂ ಬೇರೆ ರೀತಿಯಲ್ಲಿ ಬಸವನ ಅವತಾರವನ್ನು ಹೇಳಿದ್ದಾನೆ. ಹೀಗೆ ಕವಿಗಳು ತಾಳಮೇಳ ಇಲ್ಲದೆ ಸಿದ್ಧಾಂತಕ್ಕೆ ತತ್ವಕ್ಕೆ ಒಪ್ಪಿತ ಇಲ್ಲದ ಸಂಗತಿಗಳಿಂದ ಪುರಾಣ ಬರೆಯಬಾರದು. ಮೇಲಿನ ಕಾರಣವು ಅವತಾರಕ್ಕೆ ಕಾರಣವಾಗುವದೆಂದು ಗೀತೆಯಲ್ಲಿಯೂ ಕೂಡ ಹೇಳಿದ್ದನ್ನು ವಿಚಾರಿಸಿದರೆ ಮೇಲಿನ ಅವತಾರದ ಸಿದ್ಧಾಂತ ಸಮಂಜಸವೆನಿಸುವದು.

ಸಿಂಗರಾಜನು— ನಂದೀಶನು ಆನಿಮಿಷಯ್ಯನಿಗೆ ತನ್ನ ಇಷ್ಟಲಿಂಗ ಕೊಟ್ಟು ಕೈಲಾಸಕ್ಕೆ ಹೋಗಲು ದ್ವಾರಪಾಲಕರು ಲಿಂಗವನ್ನು ತೋರಿಸೆಂದರು. ಲಿಂಗವಿಲ್ಲದ್ದು ಪರಮೇಶ್ವರನಿಗೆ ತಿಳಿಯಿತು. ಲಿಂಗವನ್ನು ಮರಳಿ ಹೊಂದಲು ಭೂಲೋಕದಲ್ಲಿ ಹುಟ್ಟಲು ನಂದಿಗೆ ಹೇಳಲು ಬಾಗೇವಾಡಿಯಲ್ಲಿ ಬಸವನೆಂಬಭಿದಾನದಿಂದ ಜನಿಸಿದನು ಎಂದು ಬರೆದಿರುವನು. ಹರಿಹರನು— ವೃಷಭನೆಂಬವನು ಷಣ್ಮುಖನಿಗೆ ಪ್ರಸಾದ ಹಂಚುವದನ್ನು ಮರೆತನು. ಷಣ್ಮುಖನಿಗೆ ಅಪಮಾನವಾಗಿ ಚಿಂತೆಯಾಯಿತು. ಇದನ್ನು ಕಂಡು ತಂದೆತಾಯಿಗಳು ಅವನಿಗೆ ಪ್ರಸಾದ ಕೊಡಲು ಹೇಳಿದರು. ಆಗ ಅವನು ಕೊಟ್ಟಿದ್ದೇನೆಂದು ಸುಳ್ಳು ಹೇಳಿದ ಕಾರಣಕ್ಕಾಗಿ ಭೂಲೋಕದಲ್ಲಿ ಜನಿಸಲು ತಿಳಿಸಿದನೆಂದು" ಬರೆದಿದ್ದಾನೆ. ಭೀಮ ಕವಿ ಮೊದಲಾದವರು ಭೂಲೋಕದಲ್ಲಿ ಧರ್ಮಜ್ಞಾನಿಯಾಗಿರುವದನ್ನು ಶಂಕರನು ನಾರದನ ಮುಖದಿಂದ ತಿಳಿದುಕೊಂಡು ನಂದಿಯನ್ನು ಕರೆದು ಭೂಲೋಕದಲ್ಲಿ ಅವತರಿಸಿ ಧರ್ಮೋದ್ಧಾರ ಮಾಡಿ ಬರಬೇಕೆಂದು ಹೇಳಿದನು ಎಂದು ಬರೆದಿದ್ದಾನೆ. ಮೇಲಿನ ಎರಡೂ ಕಾರಣಗಳಂತೂ ಶುದ್ಧ ತಪ್ಪುಗಳಾಗಿರುವವು. ಮೂರನೇ ಕಾರಣವು ಅರ್ಧ ಸರಿ, ಅರ್ಧ ತಪ್ಪು ಎಂದು ಹೇಳಬಹುದು. ಸ್ವರ್ಗಲೋಕ ಪರಶಿವ, ಪಾರ್ವತಿ, ನಂದಿ, ವೀರಭದ್ರ, ಷಣ್ಮುಖ, ಗಣಪತಿ ಭೂತಗಣ,

ಪರ್ವತ ರಾಜನ ಮಗಳು ಮೊದಲಾದವುಗಳನ್ನು ನೋಡಿದರೆ ಇದೆಲ್ಲ ಕಾಲ್ಪನಿಕ ಸಾಮ್ರಾಜ್ಯವೆಂದೆನಿಸುವದು. ಕೈಲಾಸವು ಹಿಮಾಲಯದಲ್ಲಿ ಎಂದು ಹೇಳುವರು. ಗೌರೀ, ಶಂಕರ ಎವ್ಹರೆಸ್ಟ ಶಿಖರಗಳನ್ನು ಏರಿಹತ್ತಿ ಚಿತ್ರ ತಕ್ಕೊಂಡು ಬಂದಿದ್ದಾರೆ. ಅಲ್ಲಿ ಎಲ್ಲಿಯೂ ಕೈಲಾಸ, ವೈಕುಂಠಗಳೇ ಇಲ್ಲ. ಅವೆಲ್ಲ ಈ ಲೋಕದಲ್ಲಿ ನಮ್ಮ ಶರೀರದಲ್ಲಿ ಇರುವವು. ಅದಕ್ಕಾಗಿ ಬಸವನು—
ದೇವಲೋಕ, ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೆ ಮತ್ತನಂತಲೋಕ ಶಿವಲೋಕ ಶಿವಾಚಾರವಯ್ಯ. ಶಿವಭಕ್ತನಿದ್ದ ಠಾವೇ ದೇವಲೋಕ. ಭಕ್ತನಂಗಣವೇ ವಾರಣಾಸಿ, ಕಾಯವೇ ಕೈಲಾಸ ಇದು ಸತ್ಯ ಶಿವನಾಣೆ ಕೂ. ಸಂ. ದೇ. ಎಂದು ಹೇಳಿದ್ದಾನೆ. ಇಲ್ಲಿ ನಾರದನೆಂಬ ವ್ಯಕ್ತಿಯೂ ಕಾಲ್ಪನಿಕನೇ ಸರಿ. ಬ್ರಹ್ಮ, ವಿಷ್ಣು, ಮಹೇಶ್ವರರೆಲ್ಲರೂ ನಮ್ಮ ಶರೀರದ ಗುಣಗಳಿಗೆ ಹೋಲಿಸಿದ್ದಾರೆ. ಇದೆಲ್ಲ ಪುರಾಣದ ಮಾತಾಗಿರುವದು. ಭೂಲೋಕದಲ್ಲಿ ಧರ್ಮಕ್ಕೆ ಆಳಿಗಾಲ ಬಂದಾಗ ಮಾತ್ರ ಅವತಾರಗಳು ಬರುವದು ಸತ್ಯ ಸಿದ್ಧಾಂತವಾಗಿರುವದು. ಬಸವನು ಮಾತ್ರ ಅನೇಕರಂತೆ ಅವತರಿಸಿದ ಮಹಾ ವ್ಯಕ್ತಿಯೇ ಸರಿ. ಅವತಾರ ಆಗಿ ಬಂದರೂ ಕೂಡ ಮಾನವರಂತೆ ಸಾಧನ ಮಾಡಿ ಸಿದ್ಧಿ ಪಡೆದು ಕಷ್ಟನಷ್ಟಗಳನ್ನು ಅನುಭವಿಸಿ ಧರ್ಮ ಸಮಾಜ ದೇಶ ಸುಧಾರಣೆಯನ್ನು ಮಾಡಬೇಕಾಗಿರುವದು. ಆದರೆ ಅವತಾರಿಕರು ತಮ್ಮ ಗುರಿಯನ್ನು ಸಂಸಾರಿಕರಂತೆ ಮರೆಯುವದಿಲ್ಲ. ಕಷ್ಟ ನಷ್ಟ ದುಃಖ ತ್ರಾಸುಗಳಿಗೆ ಬಗ್ಗುವದಿಲ್ಲ. ಸಾಧನ ಸಿದ್ಧಿಗಳಿಂದ ಹಿಂದೆ ಜಗ್ಗುವದಿಲ್ಲ. ಸಹಜ ಜೀವನವನ್ನು ಸಾಗಿಸುತ್ತಿರುವರು. ಬಸವನಿಗೆ ಬಾಲ್ಯದಲ್ಲಿ ಶೈಶವಾವಸ್ಥೆಯಲ್ಲಿ ಕಷ್ಟಗಳು ಬಂದರೂ ಅಂಜಲಿಲ್ಲ. ಸಾಧನದಿಂದ ಹಿಂಜರಿಯಲಿಲ್ಲ. ಗುರಿಯನ್ನು ಯಾವಾಗಲೂ ಮರೆಯಲಿಲ್ಲ. ಪೂಜೆ ಧ್ಯಾನ, ಜಪ ಬ್ರಹ್ಮಚರ್ಯ ಪಾಲನ ವಿನಯ ಭಕ್ತಿ ಮೊದಲಾದ ಗುಣಗಳು ಅವತಾರಿಕರಲ್ಲಿ ದಿನೆದಿನೆ ಹೆಚ್ಚೆಚ್ಚಾಗಿ ಬೆಳೆಯುತ್ತ ಪ್ರಕಟವಾಗುತ್ತಲೇ ಹೋಗುವವು. ಆದರೆ ಸಾಮಾನ್ಯರ ಪರಿಸ್ಥಿತಿ ಹೀಗಿರುವದಿಲ್ಲ. ಸದಾ ಮಹಾಮಾಯೆಯ ಹೊಡತಕ್ಕೆ ಜರ್ಜರಿತರಾಗಿ ಆಕೆಯ ಉಡಿಯಲ್ಲಿಯೇ ಬಿದ್ದು ಸರ್ವಸ್ವಗಳನ್ನು ಕಳೆದುಕೊಂಡು ಹಾಳಾಗುವರು: ಅವತಾರಿಕರು ಇದಕ್ಕೆ ವಿರೋಧವಾಗಿರುವರು. ಇದು ಬಸವನಲ್ಲಿ ಸಹಜ ಪ್ರವೃತ್ತಿಯಾಗಿತ್ತು. ಅವತಾರಿಕರಲ್ಲಿ ಇರಬೇಕಾದ ಸಕಲ ಶ್ರೇಷ್ಠ ಗುಣಗಳು ಬಸವನಲ್ಲಿ ಹೆಚ್ಚಾಗಿಯೇ ಇದ್ದವೆಂದು ಇವರ ಚರಿತೆಯಿಂದ ಸಹಜ ಅನಿಸುವದು. ಇವರ ಚರಿತೆ ಸಹಜ ಐತಿಹಾಸಿಕವಿರುವದು.

ದೇಶದಲ್ಲಿ ಒಂದು ಹೊಸ ಮತ, ಧರ್ಮವನ್ನು ಸ್ಥಾಪಿಸಬೇಕಾದರೆ ಇಲ್ಲವೆ ಇದ್ದುದನ್ನೇ ಸರ್ವಾಂಗ ಸುಂದರವಾಗಿ ಮಾಡಬೇಕಾದರೆ ಅವತಾರಿಗಳ ಅವಶ್ಯಕತೆ ಇರುವದು ಇತಿಹಾಸಗಳಿಂದ ಕಂಡುಬರುವದು. ಬಸವನು ಮೊದಲಿದ್ದ ಕುಂದುಕೊರತೆಯು ಅವ್ಯವಸ್ಥೆಯು ವೀರಶೈವ ಮತವನ್ನು ತಿದ್ದಿ ಸುಧಾರಿಸಲು ಉದ್ಧಾರ ಮಾಡಲು ಇವನ ಅವತಾರವಾಯಿತು. ಆಗಿನ ವೀರಶೈವರಲ್ಲಿಯು ಆಚಾರ, ವಿಚಾರ, ನಡೆ ನುಡಿ, ಪದ್ಧತಿ ರೀತಿ, ತತ್ವ ಸಿದ್ಧಾಂತಗಳಿಗೆ ಬೇಜಾರಾಗೊಂಡು ಯೋಗ್ಯ ಆಚಾರ ಯೋಗ್ಯ ವಿಚಾರ ಯೋಗ್ಯ ನಡೆ ಯೋಗ್ಯ ನುಡಿ ಯೋಗ್ಯ ಪದ್ಧತಿ ರೀತಿಗಳನ್ನು ಪ್ರಸಾರ ಮಾಡಿ ನೆಲಗೊಳಿಸಿ ಪರಿಪೂರ್ಣ ಸಿದ್ಧಾಂತ ತತ್ವಗಳನ್ನು ಧರ್ಮಕ್ಕೆ ಆಸರವಾಗಿ ಮಾಡಲು ಬಸವನು ಅವತರಿಸಿದನು. ಜನತೆಯಲ್ಲಿಯು ವಿಷಮತೆಗಳನ್ನು ಹೋಗಲಾಡಿಸಿ ಸಮತೆಯನ್ನು ಸಮಾಜದಲ್ಲಿ ಧರ್ಮದಲ್ಲಿ ನೆಲಗೊಳಿಸಲು ಬಸವನ ಅವತಾರವಾಯಿತು. ಜನತೆಯ ಬೇಡಿಕೆ, ಕಾತರತೆ ಆಶೋತ್ತರಗಳು ಈಡೇರಿಸುವ ಸಲುವಾಗಿ ಬಸವನ ಅವತಾರವಾಯಿತು ಕಾಪಾಲಿಕ ಪಾಶುಪತ ಲಕುಲೀಶ ಕಾಳಾಮುಖ ಬೈರವನು ಮೊದಲಾದ ಶೈವ ಪಂಗಡಗಳಲ್ಲಿ ತಾಳು ಮೇಳು ಇಲ್ಲದೆ ಸಿಕ್ಕಂತೆ ಕುಣಿದಾಡುವಾಗ ಬಸವನ ಅವತಾರವಾಯಿತು. ಈ ಪ್ರಸಂಗದಲ್ಲಿ ಈ ಐದು ನಾಲ್ಕು ಪಂಗಡಗಳ ಆಚಾರ ವಿಚಾರಗಳನ್ನು ವಿಚಾರಿಸುವದು ಅವಶ್ಯವೆನಿಸಿದ್ದರಿಂದ ಅವುಗಳನ್ನು ಕ್ರಮವಾಗಿ ವಿವರಿಸುವೆವು.

(೧) ಕಾಪಾಲಿಕರು:— ಶಿವನ ಭಕ್ತರು ಶಿವನಿಗೆ ಎಲುಬಿನ ಮಾಲೆಯನ್ನು ಹಾಕಿ ಪೂಜಿಸುವರು. ಬೀಭತ್ಸವಾದ ಭಯಂಕರವಾದ ದೇವರ ವರ್ಣನೆಯ ಸ್ತೋತ್ರಗಳನ್ನು ಶಿವನಿಗೆ ಹೇಳುವರು. ಮನುಷ್ಯನ ಎಲುಬುಗಳಿಂದಲೂ ಸಹ ಶಿವನಿಗೆ ಆಭರಣ ಮಾಲೆಗಳನ್ನು ಮಾಡುವರು. ಪ್ರೇತ ಭಸ್ಮವನ್ನು ಬಳಿದುಕೊಂಡು ನರಕಪಾಲದಲ್ಲಿ ಆಹಾರ ದೇವರಿಗೆ ನೈವೇದ್ಯ ಮಾಡಿ ತಿನ್ನುವರು. ನರಕಪಾಲದಲ್ಲಿಯೇ ದೇವರಿಗೆ ಮದ್ಯಪಾನ ನೈವೇದ್ಯ ಮಾಡಿ ಅದನ್ನು ಕುಡಿಯುವರು. ಯಜ್ಞದಲ್ಲಿ ಕುರಿ ಕೋಳಿ ಕೋಣ ಮನುಷ್ಯರನ್ನು ಬಲಿ ಕೊಟ್ಟು ಅವರ ಮಾಂಸ ತಿನ್ನುವರು. ಶಿವನ ಕೊರಳಲ್ಲಿ ಅವುಗಳ ಕರುಳನ್ನು ಮಾಲೆ ಮಾಡುವರು.

(೨) ಪಾಶುಪತರು:— ಶಿವನ ಭಕ್ತರು ಸದಾ ಹೆಚ್ಚಾಗಿ ಎಲ್ಲರೂ ಶಿವನಿಗೆ ಭಸ್ಮವನ್ನೇ ಉಪಯೋಗಿಸುವರು. ಯಾವ ರೀತಿ ಪದ್ಧತಿಗಳಿಲ್ಲದ ಧರ್ಮವಾಗಿತ್ತು.

(೩) ಕಾಳಾಮುಖರು:— ಪಟಿಕ ರುದ್ರಾಕ್ಷಿಗಳಿಂದ ಶಿವನ ಮಾಲೆಯನ್ನು ಅಲಂಕರಿಸಿ ನಾಟ್ಯವಾಡಿ ಪೂಜಿಸುವರು.

(೪) ಲಕುಲೀಶ:— ಇವರು ಶಿವಭಕ್ತರು ಇವರೂ ಶಿವನನ್ನು ಇದೇ ಬಗೆಯಿಂದ ಪೂಜಿಸುವರು. ಬಹುತರ ಎಲ್ಲರೂ ಯಜ್ಞ ಹೋಮ ಹವನ ಮಾಂಸ ಭಕ್ಷಣ ಮಾಡುತ್ತಿದ್ದರು.

(೫) ಭೈರವರು ಕೂಡ ಶಿವನಿಗೆ ಯಜ್ಞೋಪವೀತ ಹಾಕಿ ಶಿವನ ಒಂದು ಕೈಯಲ್ಲಿ ಬೆಂಕಿಯನ್ನು ಇರಿಸಿ ಪೂಜಿಸುವರು. ಇವರಲ್ಲದೆ ಜೈನರು ವೈಷ್ಣವರು ಶಿವನ ವಿರೋಧ ವರ್ತಿಸುತ್ತಿದ್ದರು. ಬೌದ್ಧರು ದೇವರೇ ಇಲ್ಲೆಂದು ಗುಲ್ಲನ್ನು ಎಬ್ಬಿಸಿ ಸನ್ಯಾಸಿಗಳಾಗಿ ಬಿಕ್ಷೆ ಬೇಡುತ್ತ ಊರೂರ ತಿರುಗುತ್ತ ದುರಾಚಾರಿಗಳಾಗಿ ಹಿಂಸಾ ಚಾರಿಗಳಾಗಿ ವಿರೋಧ ಬೋಧಿಸುತ್ತಿದ್ದರು. ಹಿಂದುಗಳಲ್ಲಿ ಅನೇಕ ಮತಪಂತಗಳು ತಲೆದೋರಿ ಅನಾಚಾರದಿಂದ ನಡೆದು ಶಿವನನ್ನು ಮರೆತು ಉಳಿದ ಅನೇಕ ದೇವದೇವತೆಗಳನ್ನು ಹೀನ ಬಗೆಯಿಂದ ಪೂಜಿಸುತ್ತಿದ್ದರು. ಶಿವಮೂರ್ತಿಗಳನ್ನು ಜೈನ ಬೌದ್ಧರು ಭಗ್ನಗೊಳಿಸುತ್ತಿರುವದು ಹೆಚ್ಚಾಗಿತ್ತು. ಜೈನ ಶೈವರ ಕಲದಗಳು ಬೆಳೆದಿದ್ದವು. ಇಂಥ ವಿಪರೀತ ಸಮಯದಲ್ಲಿ ಬಸವನು ಅವತರಿಸಿದನು. ಈ ಪ್ರಕಾರ ಜನ ಬಹಳ ಕಳವಳಗೊಂಡು ದಿಕ್ಕೆಟ್ಟು ಗೋಳಾಡುವಾಗ ಬಸವನ ಅವತಾರವಾಯಿತು. ಇವೆಲ್ಲ ಸಂಗತಿಗಳು ಹೆಚ್ಚಾಗಿ ಐತಿಹಾಸಿಕವಾದವುಗಳೇ ಇರುವವು. ಇಂಥ ವಿಪರೀತ ಐತಿಹಾಸಿಕ ಹಿನ್ನೆಲೆ ಇದ್ದ ಪರಿಸ್ಥಿತಿಯಲ್ಲಿ ಬಸವನ ಅವತಾರವಾಯಿತು. ಇಂಥ ಹೀನ ಪರಿಸ್ಥಿತಿಯಲ್ಲಿ ಸ್ವಾಭಾವಿಕವಾಗಿ ಜನರು ಒಬ್ಬ ಯೋಗ್ಯ ಸಮರ್ಥ ಬಲ್ಲಿದ ನಾಯಕನನ್ನು ಅರಸುತ್ತ ಕಾತರಗೊಂಡಾಗ ಬಸವನ ಅವತಾರವಾಯಿತು ಇಂಥ ವಿಪರೀತ ಪರಿಸ್ಥಿತಿಯಲ್ಲಿ ಅತಿ ಅಲ್ಪಸಂಖ್ಯಾಕರರಾದ ವೀರಶೈವರ ಗತಿಯನ್ನು ವಾಚಕರೇ ವಿಚಾರಿಸಿರಿ. ವೀರಶೈವರಲ್ಲಿಯೂ ಕೂಡ ಶೈವರ ಆಚಾರಗಳೇ ಮನೆಮಾಡಿಕೊಂಡಿದ್ದವು. ಇದಕ್ಕೆ ಬೇಸತ್ತು ಪರಮಾತ್ಮನು ಬಸವನ ಅವತಾರ ಮಾಡಿಸಿದನು. ಹೀಗಾಗಿ ಯಾವ ರೀತಿಯಿಂದ ವಿಚಾರಿಸಿದರೂ ಬಸವನ ಅವತಾರವು ಐತಿಹಾಸಿಕ ಸತ್ಯವಾಗಿರುವದೆಂದು ಯಾವ ಅಂಜಿಕೆ ಇಲ್ಲದೆ ಹೇಳಬಹುದು.

## ೨. ಬಸವನ ಬಾಲ್ಯ ಜೀವನ,

ಬಸವನೇ ತನ್ನ ವಚನದಲ್ಲಿ ತನ್ನ ಜನ್ಮಗಳೆಲ್ಲವನ್ನು ಹೇಳಿಕೊಳ್ಳುವನು- ನೀನು ನಿರಾಕಾರವಾಗಿರ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ನೀನು ನಾಂಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ. ನೀನು ಆಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ. ನೀನೆನ್ನ ಭವವ ಕೊಂದಿಹೆನೆಂದು ಜಂಗಮಲಾಂಛನವಾಗಿ ಬಂದರೆ ನಾನು ಭಕ್ತನೆಂಬ ವಾಹನ ವಾಗಿರ್ದೆ ಕೂ. ಸಂ. ದೇ.

ಈ ವಚನದಲ್ಲಿ ಶಿವನೊಡನೆ ಸದಾ ಬೇರೆ ಬೇರೆ ರೂಪದಿಂದ ಇದ್ದೆನೆಂದು ಹೇಳುವನು. ಇದು ಶಿವಶಕ್ತಿಯರ ಅವಿನಾಭಾವ ಸಂಬಂಧವನ್ನು ಹೇಳುವದು. ಜ್ಞಾನಶಕ್ತಿ, ಚೈತನ್ಯಶಕ್ತಿ, ವೃಷಭಶಕ್ತಿ, ಭಕ್ತ ಅಂದರೆ ಶಕ್ತಿಯು ರೂಪದಿಂದ ಶಿವನೊಡನೆ ಸದಾವಕಾಲದಲ್ಲಿಯೂ ಇದ್ದನೆಂದ ಇದರ ಭಾವ ಒಂದು ರೀತಿಯಿಂದ ಬಸವನೆಂದರೆ ಶಕ್ತಿ ಎಂದೇ ಅರ್ಥಹೊರಡುವದು. ಪರಮಾತ್ಮನ ಶಕ್ತಿಯೇ ಲೋಕದಲ್ಲಿ ಅವತಾರ ತಾಳುವದು ಸಹಜವಿದೆ. ಸ್ವತಃ ಪರಮಾತ್ಮನು ಎಂದೂ ಅವತಾರ ತಾಳುವದಿಲ್ಲ. ಆದರೆ ಅವನ ಶಕ್ತಿಗಳು ಮಾತ್ರ ಅವತಾರತಾಳಿ ಅವನ ಕಾರ್ಯಗಳನ್ನು ಮಾಡುವವು. ಇದು ಅಬಾಧಿತವಾಗಿ ನಡೆದು ಬಂದ ಸಿದ್ಧಾಂತವಾಗಿರುವದು. ಇನ್ನೂ ಒಂದು ಅವನ ವಚನವನ್ನು ನೋಡಿರಿ.

ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿರ್ದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯ. ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಭೃತ್ಯನನ್ನಾಗಿ ಮಾಡಿದಿರಿ. ಎರಡನೇ ಭವಾಂತರದಲ್ಲಿ ನೀಲಲೋಹಿತನೆಂದು ಮಾಡಿ ನಿಮ್ಮ ಕಾರುಣ್ಯವ ಮಾಡಿದಿರಿ. ಮೂರನೇ ಭವಾಂತರದಲ್ಲಿ ಲೀಲೆಲೋಹಿತನೆಂದು ಕರೆದು ಲೀಲಾ ವಿನೋದದಿಂದ ಇರಿಸಿದಿರಿ. ನಾಲ್ಕನೇ ಭವಾಂತರದಲ್ಲಿ ಮನೋಹರನೆಂದು ಕರೆದು ನಿಮ್ಮ ಮನಃ ಪ್ರೇರಕನಾಗಲೆಂದು ಇರಿಸಿದಿರಿ. ಐದನೇ ಭವಾಂತರದಲ್ಲಿ ಕಾಲಲೋಚನನೆಂದು ಕರೆದು ಸರ್ವಕಾಲ ಸಂಹಾರವ ಮಾಡಿಸುತ್ತಿದ್ದಿರಿ. ಆರನೇ ಭವಾಂತರದಲ್ಲಿ ವೃಷಭನೆಂದು ಕರೆದು ನಿಮ್ಮ ವಾಹನ ಮಾಡಿಕೊಂಡಿರಿ. ಏಳನೇ ಭವಾಂತರದಲ್ಲಿ ಬಸವನೆಂದು ಕರೆದು ನಿಮ್ಮ ವಕ್ಕುದ ವಿಕ್ಕುದಕ್ಕೆ ಯೋಗ್ಯನಾಗಲೆಂದು ಇರಿಸಿದಿರಿ. ಇದುಕಾರಣ ನೀವು ಬರಿಸಿದ

ಭವಾಂತರದಲ್ಲಿ ನಾನು ಬರುತ್ತಿರ್ದೆನಯ್ಯಾ ಕೂ. ಸಂ. ದೇ. ಎಂದು ಹೇಳಿದ್ದಾನೆ. ಇದರ ಮೂಲಿಂದ ಬಸವನು ಶಿವನ ಶಕ್ತಿಯಿಂದೇ ಹೇಳಬೇಕು. ಶಿವನ ಕಾರ್ಯವಮಾಡುವದಕ್ಕಾಗಿ ಶಿವನ ಆಜ್ಞೆಯಿಂದ ಹಿಂದೆ ಅನೇಕ ಸಲ ಜನಿಸಿದ್ದಾನೆ. ಮುಂದೆ ಅನೇಕ ಸಲ ಜನಿಸಿ ಬರುವೆನೆಂದು ಸಹ ಹೇಳಿದ್ದಾನೆ. ಇದು ಅವನ ಅವತಾರಗಳ ಪರಂಪರೆ. ಅವತರಿಸಿ ಶಿವಭಕ್ತಿಯನ್ನೇ ಪ್ರಚಾರ ಮಾಡುವೆನೆಂದು ಸಹ ಹೇಳಿದ್ದಾನೆ. ಶಿಲಾದನಾಗಿ ಭೃತ್ಯನಾದ ನೀಲಲೋಹಿತನಾಗಿ ಕರುಣೆ ದಯವನ್ನು ಪ್ರಚಾರ ಮಾಡಿದನು. ಲೀಲೆ ಲೋಹಿತನಾಗಿ ಶಿವನಿಗಾಗಿ ಲೀಲಾವಿನೋದಗಳನ್ನು ಆಡಿದನು. ಮನೋಹರನಾಗಿ ಜನರ ಮನಸ್ಸುಗಳನ್ನು ಹರಣ ಮಾಡಿದನು. ಅಂದರೆ ಜನರಲ್ಲಿ ಭಕ್ತಿ ಪ್ರೀತಿಗಳನ್ನು ಬೀರಿದನು. ಕಾಲಲೋಚನನಾಗಿ ಎಲ್ಲವನ್ನು ಸಂಹಾರ ಮಾಡಿದನು. ವೃಷಭನಾಗಿ ಧರ್ಮವನ್ನು ಪ್ರಚಾರ ಮಾಡಿದನು. ಅಂದರೆ ನಿಷ್ಕಾಮ ಕಾಯಕ ನಿಷ್ಕಾಮ ಸಂಸಾರವನ್ನು ಜನಕೆ ಬೋಧಿಸಿದನೆಂದು ಇದರ ಭಾವ. ಇವುಗಳಿಗೆ ಗೂಢಾರ್ಥವಿರುವದನ್ನು ಲಕ್ಷಿಸಬೇಕು. ಅಂದರೆ ಇದರ ಅರ್ಥ ಹೊಳೆಯುವದು. ಒಂದೊಂದು ಅವತಾರದಲ್ಲಿ ಯಾವ ಯಾವ ಕಾರ್ಯ ಮಾಡಿದನೆಂದು ಈ ವಚನವು ಸೂಚಿಸುವದು. ಇದು ಏಳು ಅವತಾರಗಳ ಕಥೆಯಾಯಿತು. ಉಳಿದ ಅವತಾರಗಳ ಕಥೆಯನ್ನು ವಾಚಕರೇ ಊಹಿಸಲೋಸುಗ ಹೇಳಿಲ್ಲ. ಬಸವನು ತನ್ನ ಕಡೆಯ ಅವತಾರವನ್ನೇ ತಾನೇ ಹೇಳಿದ್ದಾನೆ. ಇದೇ ಬಾಗೇವಾಡಿಯಲ್ಲಿ ಅವತರಿಸಿ ಬಂದುದನ್ನೇ ಈ ವಚನ ಸೂಚಿಸುವದು.

ಈಪ್ರಕಾರ ಧರ್ಮಗ್ಲಾನಿಯಾದಾಗ ಬಾಗೇವಾಡಿ ಗ್ರಾಮದಲ್ಲಿ ಸಾಮಾನ್ಯ ಬ್ರಾಹ್ಮಣರ ಕುಟುಂಬ ಒಂದಿತ್ತು. ಅವರ ಹೆಸರುಗಳು ಮಾದರಸ ಮಾದಲಾಂಬಿಕೆ ಇವರಿಬ್ಬರೂ ಒಳ್ಳೇ ಪ್ರೇಮದ ದಂಪತಿಗಳು. ಧಾರ್ಮಿಕ ವೃತ್ತಿಯವರು. ದೇವಭಕ್ತರು, ಅಥಿತಿ ಅಭ್ಯಾಗತರನ್ನು ಮನ್ನಿಸುವರು. ಆದರೂ ಇವರಿಗೆ ಗಂಡುಮಕ್ಕಳಿರಲಿಲ್ಲ. ಹೆಣ್ಣುಮಗಳನ್ನು ಮಾತ್ರ ಹಡೆದಿದ್ದರು. ಆಕೆಯ ಹೆಸರು ನಾಗಲಾಂಬೆ. ಆದರ ಚಿಂತೆ ಬಹುವಾಗಿ ಇವರನ್ನು ಬಾಧಿಸುತ್ತಿತ್ತು. ಆದಕ್ಕಾಗಿ ಅನೇಕ ಭವಿಷ್ಯವಾದಿಗಳನ್ನು ಕೇಳುತ್ತಿದ್ದರು ಯಾವದೂ ಸಫಲವಾಗಲಿಲ್ಲ. ಮಾದಲಾಂಬೆಯು ಒಂದು ದಿನ ಒಂದು ಸುಖ ಸ್ವಪ್ನವನ್ನು ಕಂಡಳು. ಅದರಲ್ಲಿ ಶಿವನು ಬೇರೆ ರೂಪದಿಂದ ಒಂದು ನಿತ್ಯ ನಂದಿಯ ವ್ರತವನ್ನು ಸತಿಪತಿಗಳಿಬ್ಬರೂ ಹಿಡಿದು ಪಾಲಿಸುತ್ತ ಬಂದರೆ

ನಂದಿಯ ಅನುಗ್ರಹದಿಂದ ನಿನುಗೆ ಒಬ್ಬ ಗಂಡು ಮಗನು ಜನಿಸುವನೆಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಈ ಮೊದಲೇ ಅವರ ಹೊಟ್ಟೆಯಲ್ಲಿ ನಾಗಮ್ಮನೆಂಬ ಹೆಣ್ಣುಮಗಳು ಜನಿಸಿದ್ದಳು. ಆಕೆಗೆ ಈಗ ೮-೧೦ ವರ್ಷಗಳಾಗಿದ್ದವು. ಗಂಡು ಮಕ್ಕಳಿಗಾಗಿ ಇವರು ಹಂಬಲಿಸುತ್ತಿದ್ದರು. ಅದಕ್ಕಾಗಿ ಶಿವನ ಹೇಳಿಕೆಯಂತೆ ನಂದಿಯ ವ್ರತವನ್ನು ಹಿಡಿದ ಕೆಲವೇದಿನಗಳಲ್ಲಿ ಮಾದಲಾಂಬಿಕೆಯು ಗರ್ಭವತಿಯಾದಳು. ನವಮಾಸ ತುಂಬಿದವು. ಕ್ರಿ. ಶ. ೧೧೩೨ ರಲ್ಲಿ ಅಕ್ಷಯ ತ್ರಿತಿಯಾ ದಿನ ರೋಹಿಣಿ ನಕ್ಷತ್ರದಲ್ಲಿ ಬಸವನ ಜನನವಾಯಿತು. ಇದೊಳ್ಳೆ ಬಲಯುತವಾದ ಸುಮೂಹರ್ತವಾಗಿರುವದು ಹೀಗೆ ಬಸವನ ಜನನವಾದುದನ್ನು ಕೆಲವರು ಹೇಳದೆ, ಜೋಳದ ಹೊಡೆಯಲ್ಲಿ ಜನಿಸಿದನೆಂದು ಹೇಳುವರು. ಅಯೋನಿಜನೆಂದು ಹೇಳಿದರೆ ಒಳ್ಳೇ ದೊಡ್ಡವರೆಂದು ಇವರ ತಿಳುವಳಿಕೆಯಾಗಿದೆ. ಕಲ್ಲಲ್ಲಿ ಹುಟ್ಟಿದ ಕಿವಿಯಲ್ಲಿ ಹುಟ್ಟಿದ ಮಾತ್ರದಿಂದ ಹುಟ್ಟಿದ ಬರೇ ಪ್ರಸಾದದಿಂದ ಜನಿಸಿದನೆಂದು ಪುರಾಣಿಕರು ಬರೆದು ಜನರನ್ನು ಮೂಢ ನಂಬಿಗೆಯಲ್ಲಿ ಹಾಕುತ್ತಿರುವರು ಈ ವಿಜ್ಞಾನ ಯುಗದಲ್ಲಿ ಇದೆಲ್ಲ ಜನರಿಗೆ ಸತ್ಯವೆನಿಸುವದಿಲ್ಲ ಅಲ್ಲದೆ ಅಸಹ್ಯವೆನಿಸುವದು. ಲಿಂಗದಿಂದ ಜನಿಸಿದನೆಂದು ಬರೆಯುವರು. ಕಲ್ಲಿನ ಲಿಂಗದಿಂದ ಯಾರೂ ಜನಿಸುವದು ಶಕ್ಯವಿಲ್ಲ. ಆದರೆ ಎಲ್ಲರೂ ಪುಲ್ಲಿಂಗ ಸ್ತ್ರೀಲಿಂಗಗಳಿಂದಲೇ ಜನಿಸುವದು ಶಕ್ಯವಿದೆ; ಸತ್ಯವಿದೆ. ಇದೇ ಸೃಷ್ಟಿಯ ಸತ್ಯ ಸಿದ್ಧಾಂತವಾಗುವದು. ಎಲ್ಲರೂ ಎಲ್ಲ ಅವತಾರಿಗಳು ತಾಯಿಯ ಗರ್ಭದಿಂದಲೇ ಜನಿಸಿರುವರು. ಇದರಲ್ಲಿ ಯಾವ ಸಂಶಯವೂ ಇಲ್ಲ. ಈ ಪ್ರಕಾರ ಬಸವನು ಮಾದಲಾಂಬಿಕೆಯ ಗರ್ಭದಿಂದಲೇ ನವಮಾಸ ತುಂಬಿದ ಬಳಿಕ ಜನಿಸಿದ್ದಾನೆ.

ಜನಿಸಿದ ಬಳಿಕ ಶಿಸು ಶಿಲೆಯಂತೆ ಬಿದ್ದುಬಿಟ್ಟಿತು ನಗಲೊಲ್ಲ, ಅಳಲೊಲ್ಲ, ಆಡಲೊಲ್ಲ. ಅವಯುವಗಳನ್ನು ಚಲನವಲನವನ್ನೂ ಸಹ ಮಾಡಲೊಲ್ಲ. ಬರೇ ಉಸಿರಾಡುತ್ತಿತ್ತು. ಹೊರತು ಉಳಿದ ಯಾವತರದ ವಿಕಾರಗಳು ಶಿಸುವಿಗಿರಲಿಲ್ಲ. ತಂದೆತಾಯಿಗಳು ಬಂಧುಬಾಂಧವರು ನೆರೆಹೊರೆಯವರು ನೋಡಿ ಅಚ್ಚರಿಬಟ್ಟರು. ಗಡಬಡಿಸಹತ್ತಿದರು. ದೇವರಿಗೆ ಹರಿಕೆ ಹೊತ್ತರು. ನಂದಿಯ ವ್ರತದಲ್ಲಿ ತಪ್ಪಿರಬಹುದೆಂದು ಬಗೆದು ಅವನಿಗೂ ಹರಿಕೆ ಹೊತ್ತರು. ಬಗೆಹರಿಯಲಿಲ್ಲ. ಸಾಧು ಸನ್ಯಾಸಿ ಜೋಗಿ ಜಂಗಮರನ್ನು ಕೇಳಿದರು. ಹೊಳೆಯಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಕೂಡಲಸಂಗಮದಲ್ಲಿ ಆಶ್ರಯಮಾಡಿಕೊಂಡಿದ್ದ ಜಾತವೇದ ಮುನಿಗಳು ಅನಾಯಾಸ ಇಲ್ಲಿಗೆ

ಬಂದರು. ಅವರಿಗೂ ಕೂಸನ್ನು ತೋರಿಸಿದರು. ಆಗ "ಇವನು ನಂದಿಯ ಅವತಾರನೆಂದು" ಹೇಳಿ ಲಿಂಗಧಾರಣ ಮಾಡಿ ಹಣೆಯಲ್ಲಿ ಭಸ್ಮಲೇಪಿಸಿ ಕಿವಿಯಲ್ಲಿ ಮಂತ್ರ ಹೇಳಲು ಕೂಸು ಆಲ್ಹಾದದಿಂದ ಆಡಹತ್ತಿತು. ಆದರ ರೋಗವೇ ಸಂಪೂರ್ಣ ತತ್‌ಕ್ಷಣ ಮಾಯವಾಯಿತು. "ನಿತ್ಯ ಭಸ್ಮ ಧರಿಸ ಬೇಕು. ಅಲ್ಲದೆ ಕೊರಳಲ್ಲಿಯ ಲಿಂಗವನ್ನು ಅವನಿಂದ ಎಂದೂ ಯಾವ ಕಾರಣದಿಂದಲೂ ಅಗಲಿಸಬಾರದು. ಅಗಲಿಸಿದರೆ ಮೊದಲಿನಂತೇ ಕಲ್ಲಾಗಿ ಬೀಳುವನೆಂದು ಹೇಳಿದನು. ಅದಕ್ಕೆ ತಾಯಿತಂದೆಗಳು ಅಂಜಿ ಅದನ್ನು ತೆಗೆಯುವ ಗೋಜಿಗೆ ಹೋಗಲಿಲ್ಲ. ಸಮಾಜಕ್ಕೂ ಯಾವ ಉಪಾಯ ತೋರದೆ ನಿರುಪಾಯರಾಗಿಬಿಟ್ಟಿದ್ದರು. ಶಾಲಿಗ್ರಾಮ ಲಿಂಗ ಎರಡೂ ಒಂದೇ ಎಂದು ಹೇಳಿಕೊಂಡು ಸುಮ್ಮನಾದರು. ದೊಡ್ಡವನಾದಬಳಿಕ ಅದು ತಾನೇ ಹೋಗುವದೆಂದು ಕೆಲವರು ಬಗೆದರು. ಹೀಗಾಗಿ ಬಸವನಿಗೆ ಜನಿಸಿದಾಗಲೇ ಲಿಂಗಧಾರಣವಾಯಿತು. ಹೀಗಾಗುವದು ಐತಿಹಾಸಿಕವಾಗಿ ಸತ್ಯವಿರುವದು. ಅವತಾರಿಕರಲ್ಲಿ ಇದೆಲ್ಲ ಶಕ್ಯವಿದೆ. ಇದೇನು ಅಸಾಧ್ಯ ಸಂಗತಿಯಲ್ಲ. ರಾಮ, ಕೃಷ್ಣರು ಕೂಸಿದ್ದಾಗ ನೆಲಬಿಟ್ಟು ಏಳಲಾರದಷ್ಟು ಜಡವಾಗಿದ್ದರು. ಇನ್ನೊಮ್ಮೆ ಸೊಳ್ಳೆಪರದೆಯೊಳಗೆ ಮಲಗಿಸಿದಾಗ ಕೂಸು ಒಳ್ಳೇ ತೇಜಸ್ವಿಯಾದ ಯುವ ನೆರು ಮಹಾಪುರುಷನಂತೆ ತಾಯಿತಂದೆಗೆ ಕಂಡರು. ವಿವೇಕಾನಂದರು ಕೂಸಿದ್ದಾಗ ಅಳಹತ್ತಲು ತಾಯಿ ಶಿವಶಿವಾ ಶಿವಶಿವಾ ಎಂದು ಮಂತ್ರ ಹೇಳಲು ಸುಮ್ಮನಾಗಿ ತಾಯಿಯ ಕಡೆಗೆ ನೋಡುತ್ತ ಕಣ್ಣು ಪಿಳಕಿಸದೆ ಬಹಳ ಹೊತ್ತು ಮಂತ್ರಮುಗ್ಧನಾಗಿ ಸುಮ್ಮನೆ ಬಾಯಿತೆರೆದುಕೊಂಡಿರು ತ್ತಿತ್ತು. ಹೀಗೆ ಅನೇಕರ ಐತಿಹಾಸಿಕ ಚರಿತೆಗಳಲ್ಲಿಯೂ ಸಹ ಘಟನೆಗಳು ಆಗಿರುವವು. ಘಟಸರ್ಪವು ಹೆಡೆದೆಗೆದು ಕೂಸಿನ ಸುತ್ತು ಆಡಿದ್ದೂ ಉಂಟು ಇವೆಲ್ಲ ಅವತಾರಿಕ ಶಿಶುಗಳಿಗೆ ಶಕ್ಯವಿದೆ ಹೊರತು ಸಾಮಾನ್ಯ ಶಿಶುಗಳಿಗೆ ಶಕ್ಯವಿಲ್ಲ. ಬಸವನಿಗೆ ಲಿಂಗಧಾರಣೆ ಆಗುವ ಸಲುವಾಗಿ ಪರಮಾತ್ಮನು ಇದೊಂದು ಘಟನೆಯನ್ನು ನಿರ್ಮಿಸಿದನೆಂದು ತೋರುವದು. ಇವನಿಗೆ ಜಾತ ವೇದ ಮುನಿಯ ಆದೇಶದಂತೆ ಬಸವನೆಂದು ಬಸವೇಶ್ವರನೆಂದು ಬಸವರಸ ನೆಂದು ಬಸವರಾಜನೆಂದು ಬಸವದೇವನೆಂದು ನಾಮಕರಣ ಮಾಡಿದರು. ಈ ಪ್ರಕಾರ ಬಸವನು ವರ್ಷಾರುತಿಂಗಳುಗಳನ್ನು ಕಳೆದನು. ಈ ಸಮಯ ದಲ್ಲಿ ಬಸವನ ತಾಯಿ ಶಿವಾಧೀನಳಾದಳು. ಕೂಸು ಪರದೇಶಿಯಾಯಿತು. ಆಗ ಮಾದಲಾಂಬಿಕೆಯ ತಾಯಿಯವರು ಕೂಡಲಸಂಗಮದಿಂದ ಬಂದಿ

ದ್ದರು. ಅವಳು ತಾಯಿ ಇಲ್ಲದ ಬಸವನನ್ನು ಜೋಪಾನ ಮಾಡಲು ಸಂಗಮಕ್ಕೆ ಕರಕೊಂಡು ಹೋದಳು. ಯಾಕಂದರೆ ಮಾದರಸನ ಮನೆಯಲ್ಲಿ ಬಸವನನ್ನು ಸಂರಕ್ಷಿಸಲು ಯಾವ ದೊಡ್ಡ ಕಾಳಜಿಯುಳ್ಳ ಸ್ತ್ರೀಯರಿರಲಿಲ್ಲ. ಆಗ ನಾಗಮ್ಮನು ೭-೮ ವರ್ಷದವಳಿದ್ದಳು. ಆಗ ತಾಯಿಯ ತಾಯಿಯಾದ ಆಯಿಯ ಮನೆಗೆ ಸಂಗಮಕ್ಕೆ ಹೋಗಲು ಹಟಹಿಡಿದದ್ದರಿಂದ ಅವಳನ್ನೂ ಸಹ-ಅಲ್ಲಿಗೆ ಕಳಿಸಿಕೊಟ್ಟರು. ೩-೪ ವರ್ಷಗಳತನಕ ಬಸವನು ತಾಯಿಯ ತವರ ಮನೆಯಲ್ಲಿಯೇ ಬೆಳೆದನು. ಆಗ ಅವನಿಗೆ ಅಲ್ಲಿಯ ಪ್ರಸಿದ್ಧ ಕೂಡಲಸಂಗಮದೇವನ ಮೇಲೆ ಭಕ್ತಿ ಬಲಿತಿತು. ಸದಾ ಅಣ್ಣತಂಗಿಯರು ಕೂಡಿ ಆಡುವರು. ಭಕ್ತಿ ಮಾಡುವರು ಅಲ್ಲಿ ಜಾತವೇದ ಮುನಿಗಳಿಗೆ ಹೋಗಿ ನಮಿಸಿ ಬರುವರು. ಅವರ ಪ್ರೇಮದ ಮಾತುಗಳನ್ನು ಲಾಲಿಸುವರು. ಈ ಪ್ರಕಾರ ಬಸವನು ಬೆಳೆಯಹತ್ತಿದನು. ನಲಿಯಹತ್ತಿದನು ಸಬಲನಂತೆ ತಿರುಗಾಡಹತ್ತಿದನು. ಗಿಳಿಯಂತೆ ಮಾತಾಡಹತ್ತಿದನು. ಕೋಗಿಲೆಯಂತೆ ಸ್ವರವಿಡಹತ್ತಿದನು. ಬಿದಿಗೆಯ ಚಂದ್ರನಂತೆ ಬೆಳೆಯಹತ್ತಿದನು. ಆಯಿ ಮನೆಯವರಿಗೆ ಮುದ್ದಾಗಿ ನೆರೆಯವರಿಗೆ ಸದ್ದಾಗಿ ಬಡವರಿಗೆ ದಯೆಯಾಗಿ ಸ್ತ್ರೀಯರಿಗೆ ಮಣಿಯಾಗಿ ಬೆಳೆಯಹತ್ತಿದನು. ೩-೪ ವರ್ಷಗಳವರೆಗೆ ಬೆಳೆದನು. ಗೆಳೆಯರಲ್ಲಿ ಕಣ್ಮಣಿಯಾಗಿ ಹಿರೇಮಣಿಯಾಗಿ ಕಾಣಹತ್ತಿದನು. ಎಲ್ಲದರಲ್ಲಿ ಬಸವನೇ ಬಸವನಾದನು. ಗೆಳೆಯರು ಬಸವನನ್ನು ಬಿಟ್ಟು ಅಗಲುವದೆಂದರೆ ತಮ್ಮ ಪ್ರಾಣವನ್ನೇ ತೊರೆದಂತೆ ಕಷ್ಟವಾಗುತ್ತಿತ್ತು. ಸದಾ ಗೆಳೆಯರು ಇವನನ್ನು ಅಗಲದಂತೆ ಇರುತ್ತಿದ್ದರು. ಎಲ್ಲರಿಗೂ ಹೀಗೆ ಪ್ರೇಮದ ಖಣಿಯಾಗಿ ತೋರಿದನು.

ಬಾಲಕರಿಗೆ ಬಾಲ್ಯದಲ್ಲಿ ಆಟಗಳೇ ಪ್ರಾಣಸ್ವರೂಪವಾಗಿರುವವು. ಸಾಮಾನ್ಯ ಬಾಲಕರಂತೆ ಬಗರಿ, ಚಿಣಿದಾಂಡ, ಸರಿಗೆರಿ ಮೊದಲಾದವುಗಳನ್ನು ಆಡಲಿಲ್ಲ. ಹಸಿವೆಯ ಪರಿವೆ ಇಲ್ಲದೆ ಶಿವನು ಗೆಳೆಯರ ಕೂಡ ಆಟವಾಡುತ್ತಿದ್ದನು. ಇವನು ಲೌಕಿಕರಂತೆ ಲೌಕಿಕ ಆಟಗಳನ್ನಾಡದೆ ಪಾರಲೌಕಿಕ ಅಲೌಕಿಕ ಆಟಗಳನ್ನೇ ಆಡುವನು. ಸಂಗಮದಲ್ಲಿ ಇದ್ದಾಗ ಅವನ ಆಟದ ರೀತಿಕೆಳಗಿನಂತೆ ಇತ್ತು.

ಬಸವನು ಒಂದು ವಚನದಲ್ಲಿ ಹೇಳಿದ್ದಾನೆ—

ಬಿಳಿಯ ಕರಿಕೆಯ ಕಣಿಗಿಲೆಲೆಯ ತೊರೆಯ ತಡೆಯ ಮಳಲ ತಂದು ।
ಗೌರಿಯ ನೋನುವ ಬನ್ನಿರೇ । ಚಿಕ್ಕ ಚಿಕ್ಕ ಮಕ್ಕಳೆಲ್ಲರು ನೆರೆದು
ಅನುಪಮುದಾನಿ ಕೂಡಲಸಂಗಮದೇವನೆ ಗಂಡನಾಗಬೇಕೆಂದು ॥

ಈ ಪ್ರಕಾರ ಚಿಕ್ಕ ಬಾಲಕರಿಗೆ ಕರೆದು ಗೌರಿಯ ವ್ರತವನ್ನು ಅಂದರೆ ಗೌರಿ ಮಾಡಿ ಪೂಜಿಸಿ ನಮಗೆ ಶಿವನೆ ಗಂಡನಾಗಬೇಕೆಂದು ಬೇಡಿಕೊಂಡು ಗೌರಿಯನ್ನು ಕರಿಕೆ ಕಣಗಿಲ ಮಳಲು ನೀರು ವಗೈರೆ ತಂದು ಪೂಜಿಸೋಣ ಬರ್ರಿ ಎಂದು ಚಿಕ್ಕಮಕ್ಕಳಿಗೆ ಕರೆಯುವನು. ಆಗಲೇ ಲಿಂಗಪತಿ ಶರಣ ಸತಿ ಭಾವವನ್ನು ಅಳವಡಿಸಿಕೊಂಡಿದ್ದನು. ಸಣ್ಣವನಿದ್ದಾಗಲೇ ಶ್ರೀರಾಮಕೃಷ್ಣ ಪರಮಹಂಸರಂತೆ ಮಧುರಭಾವವನ್ನು ಕಲಿತಿದ್ದನು. ತಳನೇ ಗೌರಿಯಂತೆ ನಟನೆ ಮಾಡಿ ಶಿವನನ್ನು ಪೂಜಿಸಿ ಶಿವನೇ ತನಗೂ ಗಂಡನಾಗಬೇಕೆಂದು ಬೇಡಿಕೊಳ್ಳುತ್ತಿದ್ದನು.

ಮನಕ್ಕೆ ಮನೋಹರನಲ್ಲದೆ ಗಂಡರು ಮನಕ್ಕೆ ಬಾರರು ಕೇಳವ್ವ ಕೆಳದಿ ।
ಪನ್ನಗ ಭೂಷಣನಲ್ಲದ ಗಂಡರು, ಇನ್ನೆನಗಾಗದ ಮೊರೆ ನೋಡವ್ವಾ ।
ಕನ್ನೆಯಂದಿನ ಕೂಟ ಚಿಕ್ಕಂದಿನ ಬಾಳುವೆ ನಿಮ್ಮಾಣೆಯಯ್ಯ ಕೂ.ಸಂ.ದೇ.

ಹೀಗೆ ಬಸವನು ೪-೫ ವರ್ಷದಲ್ಲಿ ಬಾಲಕರಿಗೆ ಕೆಳದಿಯರೆಂದೂ ತಾನು ಹೆಣ್ಣು ಕನ್ಯೆ ಎಂದು ತಿಳಿದು ಶಿವನೇ ಗಂಡನೆಂದು ಭಾವಿಸಿ ಮಧುರ ಭಾವದಿಂದ ನಿತ್ಯ ಸತಿಪತಿಗಳ ಪಾರಮಾರ್ಥದ ಆಟಗಳನ್ನು ಆಡುತ್ತಿದ್ದನು.

ಎಲ್ಲರ ಗಂಡರ ಪರಿಯಂತಲ್ಲ ನೋಡೆಲಗವ್ವ ನಮ್ಮ ನಲ್ಲನು ।
ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ ಕೂಡಲ ಸಂಗಮ
ದೇವಾ ತನ್ನಲ್ಲಿ ಬೈಚಿಟ್ಟನಾಗಿ

ನಿತ್ಯ ಸತಿಪತಿ ಭಾವದಿಂದ ಲಿಂಗದೇವರ ಕೂಡ ಕೆಳೆಯರನ್ನು ಕರಕೊಂಡು ಆಡುವನು. ಬಾಲ್ಯದ ಆಟಗಳೆಲ್ಲ ಇದೇ ರೀತಿಯವಿದ್ದವೆಂದು ವಚನಗಳಿಂದ ಹೇಳಬಹುದು. ಗೆಳೆಯರೊಡನೆ ಸದಾ ಗೆಳತಿಯರೆಂಬ ಭಾವದಿಂದ ಆಡುತ್ತಿದ್ದಾಗ ಗೆಳತಿಯರ ಮೇಲೆ ಒಮ್ಮೊಮ್ಮೆ ಮುನಿಸು ತಲೆದೋರುವದು ಪ್ರತಿಯೊಬ್ಬರಿಗೂ ಸಹಜವದೆ.

ಕಣ್ಣಾ ಕೋಪಕ್ಕೆ ಮುಂದರಿಯದೆ ನುಡಿದು ।
ಮನವರಿಯದೆ ಮರುಳಾದೆ ನೋಡವ್ವ ಕೇಳ ಕೇಳವ್ವಕೆಳದಿ ।
ಸಖಿಯರಿಲ್ಲದ ಸುಖವ ಬಯಸಿದರೆ ದೊರಕೊಂಬುವದೇ ಹೇಳಾ ।
ಎನ್ನ ಮುನಿಸು ಎನ್ನಲಡಗಿತ್ತು ಇನ್ನು ಬಾರವ್ವಾ ಕೂ. ಸ. ದೇ.

ಆಟದಲ್ಲಿ ಭೇದಬಂದು ಒಬ್ಬ ಗೆಳತಿ ಶಟಗೊಂಡು ಮುನಿಸಿನಿಂದ ಹೋಗ ಹತ್ತಲು ಆಕೆಯನ್ನು ಸಂತೈಸಿ ಪುನಃ ಈ ವಚನ ಹೇಳಿ ಕರೆಯುವನು. ಇದು ಸಣ್ಣವರಿದ್ದಾಗಿನ ಬಸವಣ್ಣನವರ ಆಟಗಳಾಗಿದ್ದವು. ಬಾಲ್ಯದಲ್ಲಿಯೇ ಬಸವನು ಸತ್ಯದನರಸುವನು ದಿಟವನುಡಿಯುವನು ನ್ಯಾಯ ನಿಷ್ಠುರನಾಗಿದ್ದನು. ಶಾಂತ ಸ್ವಭಾವ ಸರಳಜೀವಿ ಸ್ನೇಹಪರನೂ ಆಗಿದ್ದನು.

ಈ ಪ್ರಕಾರ ಸಂಗವುದಲ್ಲಿ ಇರುವಾಗ ೫ ವರ್ಷದವನಾದ ಬಳಿಕ ಬಸವನನ್ನು ಮಾದರಸನು ಬಾಗೇವಾಡಿಗೆ ಕರಗೊಂಡು ಬಂದು ಶಾಲೆಗೆ ಹಾಕಿದನು. ನಾಗಮ್ಮನೂ ಬಸವನ ಕೂಡ ಬಂದಳು ಬಾಗೇವಾಡಿಯು ಬ್ರಾಹ್ಮಣರ ಅಗ್ರಹಾರವಿತ್ತು. ಬ್ರಾಹ್ಮಣರು ಪ್ರಬಲರಾಗಿದ್ದರು. ಇಲ್ಲಿಯೂ ಕೂಡ ಬಸವನು ದೇವರಿಗೆ ಸಂಬಂಧಿಸಿದ ಆಟಗಳನ್ನೇ ಆಡುತ್ತಿದ್ದನು. ಆಸನ ಹಾಕಿ ಏಕಾಂತದಲ್ಲಿ ಬಹುಕಾಲ ಧ್ಯಾನಿಸುತ್ತ ಕೂಡ್ರುವನು. ಊಟದ ಪರಿವೆ ಇಲ್ಲ. ನಿದ್ರೆಯ ಪರಿವೆ ಇಲ್ಲ. ಜನರಲ್ಲಿ ಬೆರೆಯನು. ಮನೆಯಲ್ಲಿ ಬ್ರಾಹ್ಮಣ್ಯದ ಕರ್ಮಗಳ ಬಗ್ಗೆ ಸದಾ ತಂಟೆ ಎಬ್ಬಿಸುವನು. ನೆರೆಹೊರೆಯುವರೂ, ಬಂಧು ಬಾಂಧವರೂ ನೆರೆದು ಅವನೊಡನೆ ವಾದಿಸುವರು. ಆದರೂ ಬಸವನು ವಿದ್ವತ್ಪೂರ್ಣವಾದ ಉತ್ತರಗಳನ್ನು ಹೇಳಲು ನಿರುತ್ತರರಾಗಿ ಸುಮನಾಗುವರು. ಹೋಮ ಹವನಗಳನ್ನು ಬ್ರಾಹ್ಮಣರು ತಮ್ಮ ಮನೆಯಲ್ಲಿ ಪ್ರಾರಂಬಿಸಿದರೆ ಅಲ್ಲಿಗೆ ಹೋಗಿ ವಾದ ಮಾಡುವನು. ಅನ್ನ ತುಪ್ಪಗಳನ್ನು ಅಗ್ನಿಯಲ್ಲಿ ಹಾಕಿ ವ್ಯರ್ಥ ಸುಟ್ಟರೆ ಏನು ಪ್ರಯೋಜನ? ಇದು ಅನ್ನತುಪ್ಪಗಳ ಅಪವ್ಯಯವಾಗುವದು. ಅದೇ ಅನ್ನ ತುಪ್ಪನ್ನು ಬಡವರ ಜಠರಾಗ್ನಿಯಲ್ಲಿ ಹಾಕಿದರೆ ಅವರ ಹಸಿವೆ ಹಿಂಗಿ ಶಾಂತರಾಗಿ ಹಾಡಿಹರಿಸುವರು ಹೀಗಾದರೆ ಈ ಅನ್ನದಾನ ಒಳ್ಳೇ ಸಾರ್ಥಕ ವಾಗುವದೆಂದು ಹೇಳುವನು.

ದಕ್ಷಯಾಗವ ಮಾಡಲೆಂದು ಅಜಮುಖ್ಯರಾದ ಸುರರೆಲ್ಲ
ನೆರೆದು ಬಂದು ಉಂಬುವ ಬಾಯ ನೋಡಾ । ಬಾಯ ತಪ್ಪಿಸಿ
ಉಣಬಂದ-ಬಂದ ದೈವದ ಬಾಯನೋಡಾ ಉಣದೆ ಉಡದೆ
ಹೊಗೆಯ ಕೈಯಲ್ಲಿ ಸತ್ತಅಣ್ಣಗಳ ಕೇಡ ನೋಡಾ ಕೂ. ಸ. ದೇ.

ಇಂಥಾ ದಕ್ಷನ ಯಾಗವು ಹಾಳಾಗಿ ಅವನಿಗೆ ಕುರಿದಲೆ ಬಂದಿದೆ. ಯಾಗದಿಂದ ದೇವತೆಗಳು ತೃಪ್ತಿಬಡುವದು ಶಕ್ಯವೇ ಇಲ್ಲ. ಇಂಥ ಯಾಗದಿಂದ ಪವಿತ್ರ ಅನ್ನದ ಹಾನಿ ಅಪವ್ಯಯುವಲ್ಲದೆ ಬೇರೆ ಇಲ್ಲ. ಅದಕ್ಕೆ ಯಾಗಗಳನ್ನು ಮಾಡ ಬಾರದೆಂದು ಬೋಧಿಸುವನು. ಆದರೂ ಕೆಲವರು ಅದರ ಬಗ್ಗೆ ವಾದ ಹೂಡು ವರು. ಆಗ ಪುನಃ ಬಸವನು–

ಕಿಚ್ಚುದೈವವೆಂದು ಹವಿಯು ಸಿಕ್ಕುವ ಹಾರುವರ
ಮನೆಯು ಕಿಚ್ಚೆದ್ದು ಸುಡುವಾಗ ಬಚ್ಚಲನೀರು ಬೀದಿಯ
ಧೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ ಕೂ. ಸ. ದೇ.
ವಂದನೆಯು ಮರೆದು ನಿಂದಿಸುತಿರ್ದರಯ್ಯಾ

ಎಂದು ಹೋಮಗಳನ್ನು ಬಸವನು ಗೇಲಿಗಳೆಯುವನು. ಬ್ರಾಹ್ಮಣರು ನಿರು ತ್ತರರಾಗುವರು. ತಂದೆತಾಯಿಗಳು ಛೀ ಹಾಕಿ ಮನೆಗೆ ಕರೆದುಕೊಂಡು ಬರುವರು. ಬಸವನಿಗೆ ಮಮತೆಯಿಂದ ಬುದ್ಧಿ ಹೇಳುವರು. ಅವರ ಉಪದೇಶಗಳಿಗೆ ಪರಿ ಹಾಸ್ಯಮಾಡಿ ನಕ್ಕು ಪುನಃ ಗೆಳೆಯರೊಡನೆ ಆಡಲಿಕ್ಕೆ ಹೋಗುವನು. ಇವನ ಜ್ಞಾನ ಶಕ್ತಿಗೆ ಬಹು ಜನರು ಬೊಟ್ಟು ಕಚ್ಚುವರು. ಗೆಳೆಯರು ಬಸವನಿಗಾಗಿ ಹುಚ್ಚರಾದರು. ಸದಾ ಅವನನ್ನು ಅಗಲದೆ ಬೆಂಬತ್ತಿ ಬಿಡುತ್ತಿದ್ದರು. ಹೀಗೆ ಬಾಗೇವಾಡಿಯಲ್ಲಿ ಒಬ್ಬ ಬ್ರಾಹ್ಮಣನು ಕುರಿಯ ಯಜ್ಞವನ್ನು ಪ್ರಾರಂಭಿಸಿದನು ಬ್ರಾಹ್ಮಣರು ಮಂತ್ರ ಘೋಷ ನಡಿಸಿದ್ದಾರೆ. ಹೋತನ್ನು ತಂದ ಯಜ್ಞ ಕುಂಡ ದಲ್ಲಿ ಇರಿಸಿದ್ಧಾರೆ. ಜನರೆದ್ದಿದ್ದಾರೆ ವಾದ್ಯಗಳನ್ನು ಬಾರಿಸುತ್ತಿದ್ದಾರೆ. ಇದನ್ನು ಕಂಡು ಬಸವ ಬಾಲನೂ ಅವನ ಗೆಳೆಯರೂ ಅಲ್ಲಿಗೆ ಹೋದರು ಇವರು ಯಜ್ಞವನ್ನು ನೋಡಲಿಕ್ಕೆ ಹೋದವರಲ್ಲ ತಿಳಿಗೇಡಿಗಳಿಗೆ ಬುದ್ಧಿಗಲಿಸಲು ಅಲ್ಲಿಗೆ ಹೋದರು. ಆ ಹೋತಿನ ಕರುಣಾಜನಕ ಸ್ಥಿತಿಯನ್ನು ನೋಡಿ ಬಸವನು ಕಣ್ಣೀರು ಸುರಿಸುತ್ತ ಹೋತಿನ ಕತ್ತನ್ನು ತೆಕ್ಕೆಯಲ್ಲಿ ಹಿಡಿದು ಗೋಳಾಡಿ ಕೆಳ ಗಿನ ವಚನವನ್ನು ಹೇಳುವನು.

ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳುಕಂಡ್ಯಾ
ವೇದವ ನೋದಿದವರ ಮುಂದೆ ಅಳುಕಂಡ್ಯಾ।
ಶಾಸ್ತ್ರವ ಕೇಳಿದವರ ಮುಂದೆ ಅಳುಕಂಡ್ಯಾ। ನೀಸತ್ತುದಕ್ಕೆ ತಕ್ಕುದ
ಮಾಡುವ ಕೂಡಲ ಸಂಗಮದೇವಾ॥

ಹೀಗೆ ಹೇಳಿ ಹಾರುವರು ಹಿಂಸಾವಾದಿಗಳಾಗಿ ಮಾಂಸ ತಿನ್ನ ಹತ್ತಿದರು. ಇವರಿಗೆ ಯಾವ ಜ್ಞಾನವಿಲ್ಲ. ವಿಪ್ರರು ಅತಿ ಅನಾಚಾರದಿಂದ ನಡೆಯ ಹತ್ತಿದರು. ಹೀನ ಸ್ಥಿತಿ ಅವರಿಗೆ ಬಂದಿದೆ.

ಏನಯ್ಯಾ ವಿಪ್ರರು ನುಡಿದಂತೆ ನಡೆಯರು । ಇದೆಂತಯ್ಯಾ
ತಮಗೊಂದು ಬಟ್ಟೆ ಶಾಸ್ತ್ರಕೊಂದು ಬಟ್ಟೆ । ಕೂ. ಸ. ದೇವಯ್ಯಾ

ಹೊಲೆಯರ ಬಸಿರಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬರೆಂಬುದಕ್ಕೆ ಇದೆ ದೃಷ್ಟ. ಈ ಪ್ರಕಾರ ಬ್ರಾಹ್ಮಣರು ಕುರಿ ಕೋಳಿ ಆಕಳುಗಳನ್ನು ಯಜ್ಞದ ನೆವದಿಂದ ಅವುಗಳನ್ನು ಕೊಂದು ಮಾಂಸ ತಿನ್ನುವದನ್ನು ಬಸವನು ಬಾಲನಿದ್ದಾಗಲೇ ಖಂಡಿಸುತ್ತ ನಡೆದನು. ಹೀಗಾಗಿ ಇವನು ಬ್ರಾಹ್ಮಣರಲ್ಲಿ ಹುಟ್ಟಿ ಬ್ರಾಹ್ಮಣರಿಗೆ ವೈರಿಯಾದನೆಂದು ಅವರು ಬಗೆಯಹತ್ತಿದರು. ಹೀಗಾದರೆ ತಮ್ಮ ಮತಕ್ಕೆ ಅಪಮಾನವೆಂದು ಬಗೆದರು. ಇಂಥ ಪೂಜೆ ಯಜ್ಞಗಳಿಂದ ದೇವರು ಸಂತುಷ್ಟನಾಗಿ ಮೋಕ್ಷಕೊಡುವನು. ಅಲ್ಲದೆ ಸಕಲ ಸಂಪತ್ತುಗಳನ್ನೂ ಸಹ ಕೊಡುವನೆಂದು ಅವರು ವಾದಿಸುವರು. ಆಗ ಬಸವನು ದೇವರನ್ನು ಪೂಜಿಸಲಿಕ್ಕೆ ಕುರಿ ಕೋಳಿ ಆಕಳುಗಳು ಬೇಡ ಎಂದು ಹೇಳಿ—

ಮೊರನ ಗೊಟ್ಟಿಗೆ ಬಪ್ಪ ಕಿರುಕುಳ ದೈವಕ್ಕೆ ಕುರಿಯನಿಕ್ಕಿಹೆನೆಂದು ನಲಿನಲಿದಾಡುವರು । ಕುರಿ ಸತ್ತು ಕಾಯುವದೇ! ಹರವುಳಿದವರ । ಕುರಿ ಬೇಡ ಮರಿಬೇಡ ಬರಿಯ ಪತ್ರಿಯ ತಂದು ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವ.

ಈ ಪ್ರಕಾರ ಬ್ರಾಹ್ಮಣರಿಗೆ ಹರನ ಪೂಜೆಯ ಸುಲಭ ರೀತಿಯನ್ನು ಹೇಳಿ ಅವರ ಮುಖಭಂಗವನ್ನು ಮಾಡಿದನು. ದೇವರಿಗೆ ಭಕ್ತಿಯಿಂದ ಪತ್ರಿ ಹೂಗಳನ್ನು ಅರ್ಪಿಸಿ ಪೂಜಿಸಿದರೆ ಸಾಕೆಂದು ಗೀತೆಯ ತತ್ವವನ್ನೇ ಇವನೂ ಬಾಲ್ಯದಲ್ಲಿಯೇ ಹೇಳಿದನು. ಹೀಗೆಲ್ಲ ಬಸವನು ಬಾಲ್ಯದಲ್ಲಿಯೇ ಸಮಾಜದಲ್ಲಿ ಕ್ರಾಂತಿಯನ್ನು ಎಬ್ಬಿಸಿದನು. ಹೋಮಹವನ ಯಜ್ಞಗಳ ಬಗ್ಗೆ ಹೆಚ್ಚಿನ ಜ್ಞಾನವನ್ನು ಜನಕ್ಕೆ ತಿಳಿಸಿ ಹೇಳಹತ್ತಿದನು. 'ನಾರಾಯಣ ಹರಿ' ಎಂದು ದೇವರ ಹೆಸರಿನಿಂದ ಯಜ್ಞಯಾಗ ಹೋಮಹವನ ಮಾಡುವಿರಿ ನಾರಾಯಣನು ಶಿವನಂತೆ ಅಲ್ಲ ನಾರಾಯಣನ ನಂಬಿದವರು ಬಹು ಜನರು ಕೆಟ್ಟುಹೋದರು. ಅವನನ್ನು ನಂಬಲಾಗದೆಂದು ವಾದಿಸುತ್ತ ಕೆಳಗಿನ ವಚನವನ್ನು ಹಾಡುವನು —

(ಮುಂದೆವರಿದುದು.)

# ಮಹಾತ್ಮಾ ಬಸವೇಶ್ವರರು
## ( ವೀರಶೈವ ಮತ ಜೀರ್ಣೋದ್ಧಾರಕರು )

ಲೇಖಾಂಕ ೯.

ಲೇಖಕರು:- ಡಾ॥ ಎಸ್. ಬಿ. ಪಾಠಕ, ವಿಜಯಪುರ.



ಭಾರತೀಯ ಪೂರ್ವಜರಾದ ಋಷಿಮುನಿಗಳು ತಮ್ಮ ತಪಃಪ್ರಭಾವದಿಂದ ದೇವತ್ವವನ್ನು ಪ್ರಸನ್ನೀಕರಿಸಿಕೊಂಡಿದ್ದರಿಂದ ಅಂತಹ ದಿವ್ಯ ಹಾಗೂ ಪರಮಪೂಜ್ಯರಿಂದ ಪ್ರಣೀತವಾದ ವೇದೋಪನಿಷತ್ತುಗಳು, ಮಾನವ ಕುಲೋದ್ಧಾರಕ್ಕೆ ಅನಂತಾನಂತವಾದ, ಶಕ್ತಿಯುತ ತೇಜೋಲ್ಲಾಸ ಬೋಧಾಮೃತ ಸಾಗರದಂತೆ ನಮಗೆ ಕಾಣಿಕೆಯಾಗಿಯೂ ಅಕ್ಷಯವಾಗಿಯೂ ಅಂದಿನಿಂದಿಂದಿನವರೆಗೂ ಜಗದ್ವಂದನೀಯವಾಗಿವೆ. ಕಾಲಕ್ರಮೇಣ ಅದರಲ್ಲಿ ಮುಖ್ಯವಾಗಿ 'ಶಿವೋಪಾಸನೆ' ಮತ್ತು 'ವಿಷ್ಣೋಪಾಸನೆ' ಎಂಬ ಎರಡು ಭಿನ್ನವಾದ ತತ್ವಪ್ರಣಾಲಿ ರಚನೆಯಾಯಿತು. ಆಯಾ ಪಂಗಡಗಳಲ್ಲಿ ಉದಯಿಸಿದ ತತ್ವನಿಷ್ಠರು ತಮ್ಮ ಧರ್ಮವು ರಹಸ್ಯಮಯವಾಗುವಂತೆ ಕಾಲ ಪ್ರವಾಹಕ್ಕನುಸರಿಸಿ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತ ಪ್ರಚಾರ ಮಾಡುತ್ತ ಬಂದಿರಲಿಕ್ಕೆ ಸಾಕು.

ಹೀಗೆ ಮೂಲ ಶಿವನಲ್ಲಿ ಹಂಚಿಕೆ ಹಾಕಿದ ಪೂರ್ವಾಚಾರ್ಯರು ಕಣ್ಮರೆಯಾದನಂತರ ಮತ ತತ್ವ ಸಿದ್ಧಾಂತಗಳಲ್ಲಿ ಹಾಗೂ ಮೂಲ ವಸ್ತುವಿನಲ್ಲಿ ಭಕ್ತಿನಿಷ್ಠೆಗೆ ಅನೈಕ್ಯತೆ ಬೆಳೆದದ್ದರಿಂದ ನಾಮ ರೂಪ ಆಕಾರಗಳನ್ನು ವಿಚಿತ್ರವಾಗಿ ಚಿತ್ರಿಸತೊಡಗಿದ್ದರಿಂದ ಎಲ್ಲೆಲ್ಲಿಯೂ ಮತಾಂತರದ ಆವಿರ್ಭಾವವಾಯಿತು. ಸರ್ವಾರ್ಪಣ ಭಾವದ ಶಿವಭಕ್ತಿಯೇ ಇನ್ನುಳಿದ ಮಾರ್ಗಗಳಿಗಿಂತ ಪವಿತ್ರತಮ ಹಾಗೂ ಅಮಿತಾನಂದವನ್ನೀಯುವ ರಾಜಮಾರ್ಗವಾಗಿದ್ದ ಶಿವಭಕ್ತರಿಗೆ ಆದರಲ್ಲಿಯೂ ನಾನಾ ಬಗೆಯ ಅಡೆತಡೆಗಳನ್ನುಂಟು ಮಾಡುವ ತತ್ವಗಳನ್ನು ತ್ಯಜಿಸಿ ಪರಶಿವನಲ್ಲಿ ತನ್ನನ್ನು ತಾನು ಸಮರ್ಪಿಸಿಕೊಳ್ಳುವ 'ಶಿವಶರಣೈಕ್ಯ' ಶಿವಭಕ್ತಿಯೇ ಶ್ರೇಷ್ಠ ಮಹಾಮಂತ್ರವಾಗಿದ್ದಿತು. ಶಿವಪಥದ ಆಚಾರ ವಿಚಾರವನ್ನರಿತು ಮಾರ್ಗ ದರ್ಶನ ಮಾಡಿದ ಪೂರ್ವಾಚಾರ್ಯರಾದ "ಪಂಚ ಸಿಂಹಾಸನಾಧೀಶ್ವರರು ಕರ್ನಾಟಕದಲ್ಲಿ ಪ್ರಖ್ಯಾತಿ ಪಡೆದ ಶ್ರೀ ವೀರಶೈವ ಧರ್ಮ ಸಂಸ್ಥಾಪಕರೆಂಬುದು ಸರ್ವ ಜನ ವಿದಿತವಿದೆ.

ಅನಾದಿ ಕಾಲದಿಂದಲೂ ಎಲ್ಲ ದೇಶ ಹಾಗೂ ಧರ್ಮಗಳಲ್ಲಿ, ಧರ್ಮ ಗ್ಲಾನಿಯಾದಾಗ ಧರ್ಮೋದ್ಧಾರಕರು ಜನಿಸುವಂತೆ ಶ್ರೀ ವೀರಶೈವ ಮತೀಯರಲ್ಲಿಯೂ ಅವತಾರಿಕರೂ ಶಿವಲಿಂಗ ಮಹಿಮೆಯನ್ನು ತೋರಿಸುವ ಮಹಾ ಪುರುಷರೂ ಅವತರಿಸುತ್ತ ಬಂದಿರುವರು, ಬರಲಿರುವರು. ಅಂತಹ ದಿವ್ಯ ಮತ್ತು ಮಹಾನ್ ವ್ಯಕ್ತಿಗಳೊಲ್ಲಬ್ಬರು ಮಹಾತ್ಮಾ ಬಸವೇಶ್ವರರು, "ಜಗ ಜ್ಯೋತಿ ಬಸವಣ್ಣನವರು." ೧೨ನೆಯ ಶತಮಾನದ ಮಧ್ಯಂತರದಲ್ಲಿ ದಕ್ಷಿಣ ಭಾರತದ ವಿಜಾಪೂರ ಜಿಲ್ಹೆಯ ಬಾಗೇವಾಡಿ ಎಂಬಲ್ಲಿ "ಶೈವ ಬ್ರಾಹ್ಮರ" ಮಂಡಿಗೆಯ "ಮಾದರಸ" ಮಾದಲಾಂಬಿ ಎಂಬ ಶ್ರೇಷ್ಠ ಶಿವಭಕ್ತಿ ನಿಷ್ಠರಾದ ಪವಿತ್ರ ದಂಪತಿಗಳಲ್ಲಿ ಜನ್ಮಿಸಿದರು ಮಹಾತ್ಮಾ ಬಸವೇಶ್ವರರು.

ಮಾದರಸ ಮಾದಲಾಂಬೆಯರ ಮದುವೆಯಾಗಿ ವರುಷ ವರುಷಗಳುರುಳಿದವು. ಕಾಲದ ಜೊತೆಗೆ ಸಂತಾನ ಚಿಂತಿಯೂ ಬಲಗೊಂಡಿತು. "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ಮಾತನ್ನು ನೆನೆಸಿ ಭಯ ವ್ಯಾಕುಲರಾಗಿ ಆದರಿಂದ ಮುಕ್ತರಾಗಲು, ಭಕ್ತರಕ್ಷಕ, ಮೋಕ್ಷದಾಯಕ, ದಯಾನಿಧಿಯ ಅಪರಾವತಾರವೆನಿಸಿದ ಅಲ್ಲಿಯೇ ನೆಲೆಸಿದ ಸಂಗಮನಾಥನ ದೇವಾಲಯಕ್ಕೆ ಹೋಗಿ ಅತ್ಯಂತ ಭಕ್ತಿ ಭಾವನೆಯಿಂದ ವ್ರತಾದಿಗಳನ್ನು ಆಚರಿಸಿ ನಂದೀಶ್ವರನ ಪೂಜಾಸ್ತೋತ್ರ ಪ್ರಾರ್ಥನೆಗಳನ್ನು ಬಹುವಾಗಿ ಮಾಡಹತ್ತಿದರು. ದಂಪತಿಗಳಿಬ್ಬರ ಅನನ್ಯ ಭಕ್ತಿಯನ್ನು "ವಿಶ್ವಕರ್ತಾರನು" ಅರಿತು "ಭಕ್ತವತ್ಸಲಶಿವನು ಭಕ್ತಾಧೀನ" ಎಂಬ ಉಕ್ತಿಯ ಪ್ರಕಾರ ವ್ರತ ನಿಯಮ ನಿಷೆಗಳಿಗೆ ತಕ್ಕಂತೆ ಕೃಪಾಫಲಗಳನ್ನೀಯುನ ಸದಾಶಿವನು ನಂದೀಶ್ವರನಿಗೆ "ನೀನು ಈ ಸದ್ಭಕ್ತರ ಹೊಟ್ಟೆಯಿಂದ ಹುಟ್ಟಿ ಬರಬೇಕಾಗುತ್ತದೆ ಮತ್ತು ನಿನ್ನ ಸಹಾಯಕ್ಕೆ ಶಿವಭಕ್ತರು ಶಿವಲಿಂಗನಿಷ್ಠರು ಸರ್ವ ಶಿವಗಣವು ಸರ್ವ ಕಾಲದಲ್ಲಿಯೂ ಶಿವಸಂಗಮ ಸಂಪದಾ ಭಕ್ತಿ ಉತ್ತರೋತ್ಕರ್ಷವಾಗುವಂತೆ ಮತ್ತು ಲಿಂಗಮಯ ತತ್ವವು ನಿನ್ನಿಂದ ಪುನಃ ಪಾವನಗೊಂಡು ವೈಶಾಲ್ಯತೆಯನ್ನು ಹೊಂದುವ ಯೋಗವಿದೆ. ಮುಂತಾದ ಸುಸಂಗತಿಗಳನ್ನುರುಹಿ ಸರ್ವದಾ ನಿನ್ನನ್ನು ಸಲುಹಲು ಪಂಚಪ್ರಸಾದ ಸಿದ್ಧಿ ಪಂಚಪುರುಷವಾಗಿ ಅಕ್ಷಯವಾಗುವಂತೆ ನೋಡಿಕೊಳ್ಳುವೆನೆಂದು ಅನುಗ್ರಹಿಸಿದನು.

ಭಕ್ತಿಯ ಮೈವೆತ್ತು ಬಂದಂತಿರುವ ತಮ್ಮ ಮಗುವಿನ ಬಗೆಗಿರುವ ಮಾದರಸ ಮಾದಲಾಂಬೆಯರ ಪುತ್ರ ವಾತ್ಸಲ್ಯವು ವರ್ಣಿಸಲಸದಳವು. ಸರ್ವ ಸದ್ಗುಣ ಶೀಲಗಳಿಂದ ಮೈಗೂಡಿದ ಮಹಾತಾಯಿ ಮಾದಲಾಂಬೆಯು ತನ್ನ

ಕೂಸನ್ನು ಬಹುವಾಗಿ ಪ್ರೀತಿಸಿ ಮುದ್ದಾಡುವಾಗ ತನ್ನ ಪೂರ್ವ ಸಂಕಲ್ಪ ದಂತೆ ಶಿವನ ಶ್ರೇಷ್ಠ ಭಕ್ತನಾದ ನಂದೀಶ್ವರನೇ ತನ್ನ ಉದರದಲ್ಲಿ ಅವ ತರಿಸಿದ್ದಾನೆ, ಲಿಂಗ, ವಿಭೂತಿ ರುದ್ರಾಕ್ಷಿ ಧರಿಸುವ ಈ ಕೂಸು ಶಿವಾಚಾರ್ಯರ ಶ್ರೇಷ್ಠ ಪ್ರಭಾವಿ. ತೇಜೋರಾಶಿ ಈ ನನ್ನ ಕೂಸು ಹೀಗೆ ಆಗಾಗ್ಗೆ ಅನ್ನುತ್ತ ಶಿವಸ್ತೋತ್ರ ಹಾಡುತ್ತ ಹಿಗ್ಗಿನಿಂದ ವೈದಡವುತ್ತ ಮುದ್ದಿಡುತ್ತಿರುವ ಶಿವ ಸಂಭ್ರವನೇ ದಿನಚರ್ಯೆಯಾಯಿತು.

ಶುಭಮುಹೂರ್ತದ ಒಂದುದಿನ ಬ್ರಾಹ್ಮಣ ಪದ್ಧತಿಗನುಸಾರವಾಗಿ ಪಾಂಡಿತ್ಯ ಭೂಷಣ, ವೈದಿಕರು, ಗುರುಹಿರಿಯರು ಸ್ವಜನ ಸುಜನ ಸಮೇತ ನಾಗಿ ಸಂಗಮೇಶ್ವರನ ದೇವಸ್ಥಾನಕ್ಕೆ ಹೋಗಿ ವೃಷಭೇಶ್ವರನ ಮುಂದೆ ದಿನಕರನನ್ನು ಮೀರಿಸುವ ತೇಜಃಪುಂಜವಾದ ಕೂಸನ್ನು ಮಲಗಿಸಿ ಶೋಡ ಶೋಪಚಾರ ಪೂಜಾ ವಿಧಿಗಳನ್ನು ಮುಗಿಸಿದನಂತರ ನಾಮಕರಣದ ವಿಷ ಯವಾಗಿ ಕೂಡಿದ ಜನವೆಲ್ಲ ತಮ್ಮತಮ್ಮೊಳಗೆ ವಿಚಾರ ಮಾಡಿ, ಚರ್ಚಿಸಿ, ಲೋಕವಾಡಿಕೆಯಂತೆ ಮಾದರಸ ಮಾದಲಾಂಬಿಗೆ ಓರ್ವ ಪಂಡಿತನು. "ತಂದೆಗೆ" ಯಾವ ಹೆಸರನ್ನಿಡಬೇಕೆಂದು ನಿರ್ಧರಿಸಿಕೊಂಡಿರುವಿರಿ? ಎಂದು ಪ್ರಶ್ನಿಸಲಾಗಿ ಆ ಶಿಸುವಿನ ತಂದೆಯು ಎದ್ದು ನಿಂತು ವಿನಯ ಪೂರ್ವಕ ಕೈ ಜೋಡಿಸಿ ಗುರುಹಿರಿಯರೆ, ವಿದ್ವನ್ಮಣಿಗಳೇ ಹಾಗೂ ಪಂಡಿತರೆ, ತಾಯಿಯ ಅನಂತ ನಿಷ್ಠೆ ವ್ರತಶೀಲಗಳ ಮಹಾಭಕ್ತಿಯ ಪುಣ್ಯಾಂಶದಿಂದ ಗುರುಸಂಗಮೇ ಶ್ವರನ ಕರುಣೆಯಿಂದ ನಮ್ಮೀರ್ವರ ಬಹುದಿನಗಳ ಕನಸು ನನಸಾಗುವಂತೆ ವೃಷಭೇಂದ್ರನು ಈ ಪುಣ್ಯಾತ್ಮಳ ಉದರದಿಂದ ಉದ್ಭವಿಸಿದನೆಂಬುದು ನನ್ನ ಧೃಡಭಾವನೆ. ಆ ಗೋಸುಗ ನಾಮಕರಣವನ್ನು ತಮ್ಮೆಲ್ಲರ ಸಮ್ಮತಿ ಇದ್ದಲ್ಲಿ ಕೂಸಿನ ತಾಯಿಯೇ ತಿಳಿಸುವದು ವಿಹಿತವೆಂದು ನನ್ನ ಅಭಿಪ್ರಾಯ. ಇದನ್ನು ಕೇಳಿ ಸಮಾರಂಭಕ್ಕೆ ಆಗಮಿಸಿದ ಆಪ್ತರು, ನೆರೆದ ನೆಂಟರಿಷ್ಟರು. ಗುರು ಹಿರಿಯರು ಒಪ್ಪಿಕೊಂಡು ತಾಯಿಯನ್ನು ಕೇಳಿರಿ ತಾಯಿಯನ್ನು ಕೇಳಿರಿ. ಅನ್ನುತ್ತ ಹರ್ಷಾನಂದ ಲಹರಿಯಲ್ಲಿ ಶುಭಸಮಯದಲ್ಲಿ ಜೈ ಜೈಕಾರ ಝೇಂಕಾರ ಘೋಷಿಸಿ ಸರ್ವಜನ ಸಮುದಾಯವು ಸಂತೋಷ ಭರಿತವಾಗಿ ಆ ತಾಯಿಯ ಕಡೆಗೆ ಹೊರಳಿ ಕೇಳುವ ಕುತೂಹಲ ಪೂರ್ಣವಾಗಿದ್ದಿತು. ಅಷ್ಟರಲ್ಲಿ ತಾಯಿ ಮಾದಲಾಂಬೆಯು ಓಂಕಾರ ಸ್ವರೂಪಿ ಶಿವನಲ್ಲಿ ತನ್ಮಯಗೊಂಡವಳಾಗಿ ದೇವ ನನ್ನು ನಮಿಸಿ "ಬಸವ" ಎಂದು ತಟ್ಟನುತ್ತರಿಸಿದಳು. ಈ ಮಾತು ಎಲ್ಲ ರಿಗೂ ಸಮ್ಮತವೆನಿಸಿ ಆನಂದಭರಿತರಾಗಿ ಸರ್ವರೂ ಕೂಸಿನ ಮನೆಗೆ ಬಂದು

ಶಿವನಾಮಾಮೃತವನ್ನು ಪಾಡುತ್ತ ತೊಟ್ಟಿಲಲ್ಲಿ ಹಾಕಿ ಬಸವನೆಂದು ಹೆಸರಿಸಿದ ನಂತರ ಜೋಗುಳ ಪದಗಳು, ದಾನದಕ್ಷಿಣೆ ಹಾಗೂ ಪೂಜಾವಿಧಿಗಳು ಬಹು ಸಂಭ್ರಮದಿಂದ ಜರುಗಿದವು. ಕೂಸು ಬಿದಿಗೆಯ ಚಂದ್ರನಂತೆ ಬೆಳೆಯುತ್ತ ನಡೆದ ಹಾಗೆ ಶಿವಲಿಂಗ ಮಹಿಮೆಯೂ ಮೇರೆ ಮೀರಿ ಉಕ್ಕಿ ಹರಿಯಲಾರಂಭಿಸಿತು. ದಶದಿಕ್ಕುಗಳಲ್ಲಿ ಆಟಪಾಟಗಳಲ್ಲಿ ಶಿವಸಾಮ್ರಾಜ್ಯವೇ ತನ್ಮಯಗೊಂಡಂತೆ ಬಾಲಕನ ಮಾತಾಪಿತರಿಗೆ ಅಲ್ಲದೆ ನೆರೆಹೊರೆಯವರಿಗೆ ಭಾಸವಾಗಹತ್ತಿತ್ತು. ಜಗದ ಸೂತ್ರಧಾರಿ ಶಿವನ ಲೀಲೆಯನ್ನೇ ತಮ್ಮ ಮಗುವಿನಲ್ಲಿ ಕಂಡು ಭಾವಭರಿತರಾದ ತಂದೆತಾಯಿಗಳ ಆನಂದಕ್ಕೆ ಪಾರವಿಲ್ಲವಾಯಿತು.

ಬಾಲಬಸವನಿಗೆ ಅಕ್ಷರಾಭ್ಯಾಸ ಮಾಡಿಸಲು ಅಯ್ಯನವರ ಆಗಮನವಾಯಿತು. ಬಾಲಕನು ವಿದ್ಯಾಭ್ಯಾಸದಲ್ಲಿ ಮುಂದುವರಿಯುತ್ತಿರುವ ರೀತಿ ಪಾಠಕ್ರಮ ಗುರುಗಳ ಬಗೆಗಿದ್ದ ನಯವಿನಯ ಉಪಾಧ್ಯಾಯರಿಗೆ ಅಚ್ಚರಿಯನ್ನುಂಟು ಮಾಡಿತು. ವೈದಿಕ ಕರ್ಮ ಪಾಠಗಳನ್ನು ಗುರುಗಳು ಪ್ರಾರಂಭಿಸಿದಾಗ ಅಯ್ಯನವರೆ ಕರ್ಮಠ ತತ್ವಾಭ್ಯಾಸಗಳು ನನಗೆ ರುಚಿಸವು. ಶುದ್ಧ ಶಿವಲಿಂಗವಂತ ರಾಜಮಾರ್ಗವೇ ನನ್ನ ಮನಸ್ಸಿಗೆ ಅತ್ಯಧಿಕವಾಗಿ ಒಗ್ಗುತ್ತದೆ. ಅದನ್ನೇ ತಿಳಿಸುವ ಕೃಪೆಯಾದಲ್ಲಿ ಪರಿಪೂರ್ಣವಾಗಿ ಅಭ್ಯಸಿಸುತ್ತೇನೆ. ಇದುವೇ ನನ್ನ ಜೀವನದ ಘನತರ ಅಂತಿಮ ಗುರಿ. ಎಂದು ಸ್ಪಷ್ಟೋಕ್ತಿಯನ್ನಾಡಲು ಅಯ್ಯನವರು ಭಯಭೀತರಾಗಿ ಆಳವಾಗಿ ಆಲೋಚಿಸತೊಡಗಿದರು. ನಂತರ ಅಯ್ಯನವರು ಪ್ರಸನ್ನ ಚಿತ್ತರಾಗಿ ಬಸವನ ಬುದ್ಧಿವಂತಿಕೆಗೆ ಮೆಚ್ಚಿ ಹೃದಯ ತುಂಬಿಬಂದು ಮೈದಡವಿ ಮುದ್ದಿಟ್ಟು ನುಡಿದರು. "ನಿನ್ನ ಇಚ್ಛೆಯಂತೆಯೇ ಆಗಲಿ ಬಸವಣ್ಣಾ ನಿನ್ನ ನೈಷ್ಟಿಕ ಜೀವನ ಚುರುಕ ಬುದ್ಧಿ, ಸರಳಹೃದಯ, ಸಹಜಭಕ್ತಿ, ನನ್ನನ್ನು ಮುಗ್ಧಗೊಳಿಸಿವೆ. ಅಮಿತಾನಂದವನ್ನುಂಟು ಮಾಡಿವೆ. ಇನ್ನು ಮುಂದೆ ಲಿಂಗಾಂಗ ಸಾಮರಸ್ಯವು ಗುರುಕರುಣೆಯಿಂದ ಸಹಜವಾಗಿ ಕರತಲಾಮಲಕವಾಗುವದು. ಅದನ್ನು ನೀನು ಸಾಧಿಸಿಕೊಂಡಂತೆಲ್ಲ ತನುತ್ರಯಗಳು ಚಿನ್ಮಯವಾಗುವವು. ಲೋಕದಲ್ಲಿ ಶ್ರೇಷ್ಠಶಿಖಾಮಣಿಯಂತೆ ನಿನ್ನನ್ನು ಬೆಳಗಿಸಿ ಶಿವನು ತನ್ನತ್ತ ಬರಮಾಡಿಕೊಳ್ಳುವನೆಂದು ಹೇಳಿ ಆಶೀರ್ವದಿಸಿ ಆತನ ಅಸಾಮಾನ್ಯತೆಯನ್ನು ಕುರಿತು ತಾಯಿತಂದೆಗಳ ಮುಂದೆ ಪ್ರಸ್ತಾಪಿಸಿದರು.

(ಮುಂದುವರಿದುದು.)



# ಬ್ರಾಹ್ಮಣ ಶಿವಶರಣರ ಚರಿತ್ರೆಗಳು

---

## ೧. ಕೇಶಿರಾಜ.

ವಿಜಾಪುರ ಜಿಲ್ಹೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಗಿ ಗ್ರಾಮದ ಆಗ್ನೇಯ ದಿಕ್ಕಿಗೆ ೧೮ ಮೈಲಿನ ಮೇಲೆ ಗುಲಬುರ್ಗಾ ಜಿಲ್ಹೆಯಲ್ಲಿ ಕೊಂಡಗುಳಿ ಎಂಬ ಗ್ರಾಮವಿದೆ. ಅಲ್ಲಿ ಕೇಶಿರಾಜನೆಂಬ ಸದ್ಭಕ್ತನು ವಾಸಮಾಡುತ್ತಿದ್ದನು. ಅವನ ಹೆಂಡತಿಯು ಹೆಸರು ಗಂಗಾದೇವಿಯು, ಗುರುವು ವಿರೂಪಾಕ್ಷನು, ಇಷ್ಟದೇವತೆಯು ಸೋಮನಾಥನು. ಅವನು ಅತ್ಯಂತ ಬುದ್ಧಿವಂತನೂ ಲಿಂಗಪೂಜಾರತನೂ ಕವಿಯೂ ಆಗಿದ್ದನು. ಅವನು ಕಂದ ತ್ರಿವಿದಿ, ರಗಳೆ, ವಚನ, ಪದಪದ್ಯ ದಂಡಕ ಅಷ್ಟಕ ಇವು ಮೊದಲಾದ ರಚನೆಗಳಿಂದ ಪದಗಳನ್ನು ದಿನಾಲು ಹೊಸತಾಗಿ ಮಾಡುತ್ತ ಪರಮಾತ್ಮನಿಗೆ ಅವುಗಳನ್ನು ಅರ್ಪಿಸಿ ಭಜಿಸುವನು. ಅವನು ೮೮ ಶ್ಲೋಕಗಳಿಂದ ಷಡಕ್ಷರಿಯ ಮಂತ್ರದ ಮಹಿಮೆಯನ್ನು ಹೊಗಳಿದ್ದಾನೆ. ಈ ಪ್ರಕಾರ ಕೇಶಿರಾಜನು ಪುರಾತನ ಶಿವಶರಣರಲ್ಲಿ ವಿದ್ವಾಂಸನೂ ಬುದ್ಧಿವಂತನೂ ಕವಿಯೂ ಎಂದು ಪ್ರಸಿದ್ಧನಾಗಿದ್ದಾನೆ.

ಅವನು ಮೊದಲು ಸ್ವಗ್ರಾಮವಾದ ಕೊಂಡಗುಳಿಯಲ್ಲಿದ್ದು ಆ ಮೇಲೆ ಅವನು ಕಲ್ಯಾಣ ಪಟ್ಟಣದ ದಕ್ಷಿಣಕ್ಕೆ ೮ ಮೈಲು ದೂರವಿರುವ ಮಂಗಳೂರು ಎಂಬ ಗ್ರಾಮಕ್ಕೆ ಬಂದು ಅಲ್ಲಿಯೂ ಎಂದಿನಂತೆ ಶಿವಪೂಜೆಯಲ್ಲಿ ತತ್ಪರನಾಗಿ ವಾಸಮಾಡಹತ್ತಿದನು.

ಅಲ್ಲಿ ಕೆಲವು ಕಾಲ ಕಳೆದ ನಂತರ ಅವನು ಕಲ್ಯಾಣಕ್ಕೆ ಸಮೀಪವಿರುವ ಶಿವಪುರಕ್ಕೆ ಬಂದು ಅಲ್ಲಿ ಲಿಂಗಾರ್ಚನೆ ಜಂಗಮ ದಾಸೋಹಗಳನ್ನು ಮಾಡುತ್ತ ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ಜನರಲ್ಲಿ ಪ್ರಸಿದ್ಧನಾದನು.

ಕೇಶಿರಾಜನಿದ್ದ ಈ ಕಾಲದಲ್ಲಿ ಕಲ್ಯಾಣಪಟ್ಟಣದಲ್ಲಿ ಪೇರ್ಮಾಡಿದೇವನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನು ತನಗಿದ್ದ ಮಂತ್ರಿಗಳು ಸರಿಯಾದವರಿಲ್ಲ, ಮಂತ್ರಿಪದದಲ್ಲಿದ್ದು ರಾಜ್ಯಭಾರವನ್ನು ಚನ್ನಾಗಿ ನಡಿಸಬಲ್ಲ

ಬುದ್ಧಿವಂತರೊಬ್ಬರು ತನ್ನ ರಾಜ್ಯದಲ್ಲಿ ಯಾರಾದರೂ ಇರುವರೋ ಹೇಗೆಂಬುದನ್ನು ತನ್ನನ್ನು ಕಾಣಲಿಕ್ಕೆ ಬಂದ ಅಗ್ರಹಾರಗಳ ವಿಪ್ರರನ್ನು ಯಾವಾಗಲೂ ಕೇಳುತ್ತಿದ್ದನು. ಹೀಗಿರುವಲ್ಲಿ ಕೊಂಡಗುಳಿಯ ಮಹಾಜನರು ಕೇಶಿರಾಜನೆಂಬವನು ಸರ್ವಜ್ಞನೂ ಸಜ್ಜನನೂ ನಿಯತಾಚಾರಿಯೂ ಇದ್ದು ಅವನು ತಮ್ಮ ಗ್ರಾಮದವನೆಂದು ತಿಳಿಸಲು ಪೆರ್ಮಾಡಿದೇವನು ಅವನಿದ್ದ ಶಿವಪುರಕ್ಕೆ ಚಾರರನ್ನು ಕಳಿಸಿ ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ಹಿರಿಯ ಪ್ರಧಾನಿಕೆಯ ಪಟ್ಟವನ್ನು ಕೊಟ್ಟನು ಮತ್ತು ಅವನಿಗೆ 'ಕೇಶಿರಾಜ ದಣ್ಣಾಯಕರೆಂ'ಬ ಬಿರುದನ್ನು ಕೊಟ್ಟನು.

ಕೇಶಿರಾಜನು ಅತ್ಯಂತ ಬುದ್ಧಿವಂತನು. ಆದ್ದರಿಂದ ಅವನು ರಾಜಕಾರಣದ ನಿಯೋಗವನ್ನು ತೃಪ್ತಿಕರವಾಗಿ ಸಾಗಿಸುತ್ತ ಬಂದನು. ಅರಸನು ಯಾವಾಗಲೂ ಅವನ ಸಲಹೆಗಳನ್ನು ಕೇಳುವನು. ಕೇಶಿರಾಜನು ಶಿವಾನುಭವಿಯಾದದ್ದರಿಂದ ಶಿವಾನುಭವದ ತತ್ವಗಳನ್ನು ರಾಜ್ಯದಲ್ಲಿ ಪ್ರಸಾರಗೊಳಿಸಹತ್ತಿದನು. ಪರವಾದಿಗಳನ್ನು ಅವನು ವಾದದಲ್ಲಿ ಗೆಲಿದು ದೇವರೊಬ್ಬನೇ ಇದ್ದಾನೆಂಬ ತತ್ವವನ್ನು ನಿರೂಪಿಸಹತ್ತಿದನು ಲಿಂಗಜಂಗಮಾರ್ಚನೆಗಳನ್ನು ರಾಜ್ಯದಲ್ಲಿ ಹೆಚ್ಚಿಸಿದನು. ಶರಣರಿಗೆ ಮನ್ನಣೆಯನ್ನಿತ್ತು ಶಿವಗೋಷ್ಠಿಯಲ್ಲಿಯೂ ಪುರಾತನರ ಗೀತೆಗಳಲ್ಲಿಯೂ ತಲ್ಲೀನನಾಗಿರುವನು. ಶಿವನ ಪದ್ಯಗಳನ್ನೋದಿ ಅವುಗಳಲ್ಲಿ ಬೇಗಿ ಬೆರೆಯುವನು. ಇದರಿಂದ ರಾಜ್ಯದಲ್ಲಿಯ ಶಿವಭಕ್ತರು ಅತ್ಯಂತ ಹಿಗ್ಗಿದರು. ಆದರೆ ವಿಪ್ರರು ಮಾತ್ರ ಅವನ ವಿಷಯವಾಗಿ ಮತ್ಸರ ಬುದ್ಧಿಯುಳ್ಳವರಾಗಿ ಅವನನ್ನು ಪ್ರಧಾನಿ ಪಟ್ಟದಿಂದ ಹೇಗಾದರೂ ಮಾಡಿ ತಳ್ಳಿಹಾಕಬೇಕೆಂದು ಹಂಚಿಕೆಗನಳ್ನು ಹಾಕಹತ್ತಿದರು.

ಒಂದು ದಿವಸ ಆ ವಿಪ್ರರೆಲ್ಲರೂ ಕೂಡಿಕೊಂಡು ಪೆರ್ಮಾಡಿರಾಯನನ್ನು ಕಂಡು– ನಿಮ್ಮ ದಣ್ಣಾಯಕನು ವಿಷ್ಣು ನಿಂದಕನು. ಅವನಿಗೆ ನೀವು ಪ್ರಧಾನ ಪಟ್ಟವನ್ನು ಕೊಟ್ಟಿದ್ದೀರಿ. ಆದಾಗಲು ಅವನು ನಿಮ್ಮನ್ನು ಸಹ ಬಗೆಯುವದಿಲ್ಲ. ನಿಮಗೆ ಎಂದೂ ನಮಸ್ಕರಿಸುವದಿಲ್ಲ. ಒಂದು ವೇಳೆ ನಮಸ್ಕರಿಸಿದರೆ ಅವನು ತನ್ನ ಬೆರಳಲ್ಲಿರುವ ದೇವ ಗುರುಪಾದ ಮುದ್ರಿಕೆಯನ್ನು ಮೊದಲು ಮನದೊಳಗೆ ನಮಸ್ಕರಿಸುತ್ತಾನೆ. ಇದನ್ನು ತಾವು ಪರೀಕ್ಷಿಸಬಹುದು. ಅವನು ಶಿವಭಜನೆಯನ್ನು ಮಾಡುತ್ತ ರಾಜ್ಯಭಾರವನ್ನು ದುರ್ಲ

ಕ್ಷಿಸಹತ್ತಿದ್ದಾನೆ, ಎಂದು ಮೊದಲಾಗಿ ಅವರು ರಾಜನಿಗೆ ಕೊಂಡೆಯನ್ನು ಹೇಳಿದರು. ಆಗ ಅರಸನು ಇದನ್ನು ಪರೀಕ್ಷಿಸಬೇಕೆಂದು ಒಬ್ಬ ಚಾರನನ್ನು ಕಳಿಸಿ ಕೇಶಿರಾಜನನ್ನು ಓಲಗಕ್ಕೆ ಬರಮಾಡಿಕೊಂಡನು.

ಕೇಶಿರಾಜನು ಅರಸನ ಓಲಗಕ್ಕೆ ಬಂದು ತನ್ನ ಗದ್ದುಗೆಯಲ್ಲಿ ಕುಳಿತ ಬಳಿಕ ಅರಸನು ಸರಸಸಲ್ಲಾಪಗಳನ್ನು ಮಾಡುತ್ತ ಕೇಶಿರಾಜನ ಬೆರಳಿನಲ್ಲಿದ್ದ ಉಂಗುರವನ್ನು ನೋಡಿ—ಇದರ ಮಾಟವು ಎಷ್ಟು ಚಂದಾಗಿದೆ ಇದನ್ನು ನೋಡುವಾ, ಎಂದೆಂದು ಅದನ್ನು ಇಸಿದುಕೊಂಡು ತನ್ನ ಬೆರಳಿನಲ್ಲಿಟ್ಟುಕೊಂಡನು. ಆ ಮೇಲೆ— ನೀವು ಮನೆಗೆ ಹೋಗಬಹುದೆಂದು ಕೇಶಿರಾಜನಿಗೆ ಹೇಳಿದನು. ಆಗ ಕೇಶಿರಾಜನು ಅರಸನಿಗೆ ನಮಸ್ಕಾರವನ್ನು ಮಾಡದೆ ಗಳಗಳನೆ ಓಲಗದ ಹೊರಗೆ ಹೋಗಿಬಿಟ್ಟನು. ಅದನ್ನು ಅರಸನು ನೋಡಿ ವಿಪ್ರರು ಆರೋಪಿಸಿದ್ದು ನಿಜವಾದ ಸಂಗತಿ ಎಂದು ತಿಳಿದವನಾಗಿ ಅತ್ಯಂತ ಮುನಿದು— ಅವನನ್ನು ಕರೆ ಕರೆ, ಎಂದು ಚಾರರಿಂದ ಒಳಗೆ ಬರಿಸಿ ಕೋಪಿಸುತ್ತ— ನೀನು ನನ್ನಿಂದ ಸಂಪತ್ತನ್ನು ಹೊಂದಿದೆ. ನಿನ್ನ ದಾರಿದ್ರ್ಯವನ್ನು ತೊಡೆದೆನು. ಆದರೆ ನೀನು ಹೀಗೆ ನನಗೆ ಉದಾಸೀನವನ್ನು ಮಾಡಬಹುದೇ? ಎಂದು ಕೇಳಿದನು. ಅದಕ್ಕೆ ಕೇಶಿರಾಜನು ಅರಸನ ಇಂಗಿತವನ್ನರಿತು— ನಿನ್ನ ಸಿರಿಯು ನಿನಗಿರಲಿ. ಶಿವನ ಸಂಪದವು ನನಗಿರಲಿ. ನೀನು ಕೊಟ್ಟ ಪದವು ನನಗೆ ಬೇಡ. ಅದು ಭಕ್ತಿಸಿರಿಗೆ ಸರಿಯಲ್ಲ: ಇನ್ನುಮೇಲೆ ನನಗೆ ಈ ಸೇವಕ ವೃತ್ತಿಯು ಬೇಡ, ಎಂದೆಂದು ಅರಸನು ತನಗೆ ಕೊಟ್ಟಿದ್ದ ಮುದ್ರೆಯುಂಗರವನ್ನೂ ಹಾರವನ್ನೂ ಅವನ ಮುಂದಿಟ್ಟು ಓಲಗದಿಂದ ಹೊರಟನು. ಅದನ್ನು ಓಲಗದ ಜನರು ಕಂಡು ಬೆರಗಾದರು.

ಆಮೇಲೆ ಕೇಶಿರಾಜನು ತನ್ನ ಮನೆಗೆ ಬಂದು ನಡೆದ ಸಂಗತಿಗಳನ್ನು ತನ್ನ ಹೆಂಡತಿ ಗಂಗಾದೇವಿಗೆ ತಿಳಿಸಿದನು. ಅದಕ್ಕೆ ಅವಳು— ಇದು ಒಳ್ಳೆಯದಾಯಿತು. ಇನ್ನುಮೇಲೆ ತಾವು ಜಂಗಮದನುಭಾವ ಸದ್ಗೋಷ್ಠಿಯಲ್ಲಿರಲು ಸ್ವತಂತ್ರರಾದಿರಿ. ನಮ್ಮ ಹರಕೆ ಕೈಗೂಡಿತು, ಎಂದು ನುಡಿದು ತನ್ನಲ್ಲಿದ್ದ ಆಭರಣಗಳನ್ನು ತನ್ನ ಸೇವಕ ಸೇವಿಕೆಯರಿಗೆ ಕೊಟ್ಟು ತಾನು ಒಂದು ವೇತ್ರವನ್ನುಟ್ಟು ಕೇಶಿರಾಜನ ಕೂಡ ರಾಜಧಾನಿಯನ್ನು ಬಿಟ್ಟು ಹೊರಡಲು ಸಿದ್ಧಳಾದಳು.

ಆಮೇಲೆ ಉಭಯುತರು ಕಲ್ಯಾಣಪಟ್ಟಣದಿಂದ ಒಂದು ಯೋಜನದ ಮೇಲೆ ಇದ್ದ ಶಿವಪುರ ಎಂಬ ಪಟ್ಟಣಕ್ಕೆ ಪಾದಚಾರಿಗಳಾಗಿ ಬಂದರು. ಅಲ್ಲಿ ಊರ ಹೊರಗೆ ಒಂದು ಗುಡಿಸಲಿನಲ್ಲಿ ವಂಶವರ್ಧನನೆಂಬ ಹೆಸರಿನ ಒಬ್ಬ ಮೇದರವನು ಬಿದಿರಿನ ಕಾಯಕವನ್ನು ಮಾಡುತ್ತ ಕುಳಿತಿದ್ದನು. ಅವನು ಕೇಶಿರಾಜನನ್ನು ನೋಡಿ ಅವನನ್ನು ಬರಮಾಡಿಕೊಂಡು ಮಾವಿನ ಮರದ ಅಡಿಯಲ್ಲಿ ಬಿದಿರಿನಿಂದ ತಾನು ಮಾಡಿದ ಆಸನದಲ್ಲಿ ಹೊಸ ಹಸೆಯ ಮೇಲೆ ಕುಳ್ಳಿರಿಸಿ ಸತ್ಕರಿಸಿ— ನೀವು ಸೋಮನಾಥನಿಗೆ ಬೋನವನ್ನು ಸಲ್ಲಿಸುತ್ತ ನನ್ನಲ್ಲಿಯೇ ಇರಬೇಕೆಂದು ಹೇಳಿಕೊಂಡನು.

ಅಷ್ಟರಲ್ಲಿ ರಾಜಧಾನಿಯಲ್ಲಿ ನಡೆದ ಈ ಸಂಗತಿಗಳನ್ನು ಭಕ್ತ ಜನರು ಕೇಳಿ ಅವರು ತಂಡತಂಡವಾಗಿ ಶಿವಪುರಕ್ಕೆ ಬರಲು ಮೇದರವನು ಅವರನ್ನೂ ಕೂಡ ತನ್ನಲ್ಲಿ ಬರಮಾಡಿಕೊಂಡು— ನೀವೆಲ್ಲರೂ ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರೆಂದು ಅವರೆಲ್ಲರನ್ನು ಸತ್ಕರಿಸಿದನು.

ಆಗ ಕೇಶಿರಾಜನು ಅಲ್ಲಿ ಎಲ್ಲರೊಡನೆ ಶಿವಾನುಭವ ಸದ್ಗೋಷ್ಠಿಯಲ್ಲಿ ಕಾಲಕಳೆಯುಹತ್ತಿದನು. ಮಾತು ಮಾತಿಗೆ ಪುರಾತನರ ಗೀತಗಳು ಅವನ ಬಾಯಿಂದ ಹೊರಡುತ್ತಿದ್ದವು. ಹೀಗೆ ಅವನು ಇರುಳು ಹಗಲೆನ್ನದೆ ಎಲ್ಲರೊಡನೆ ಆನಂದದಿಂದ ಕಾಲಕಳೆಯುಹತ್ತಿದನು. ಅವನನ್ನು ಕಾಣಲು ಬರುತ್ತಿದ್ದ ಜನರ ಸಂದೋಹವು ಬರಬರುತ್ತ ಬಹಳ ಹೆಚ್ಚಿತು. ಹೀಗೆ ಅವನು ಅಲ್ಲಿ ಏಳು ದಿವಸಗಳ ವರೆಗೆ ಇದ್ದನು. ಆಗ ನೆರೆದ ಭಕ್ತ ಜನರು ಈ ಮೇದರವನ ಮನೆಯಿಂದ ಕಲ್ಯಾಣದ ತ್ರಿಪುರಾಂತಕ ದೇವರ ಮಂಟಪದ ವರೆಗೆ ರಂಗಮಂಟಪಗಳನ್ನು ಅಲ್ಲಲ್ಲಿ ರಚಿಸಿ ಕೇಶಿರಾಜನನ್ನು ವೈಭವದಿಂದ ಕಲ್ಯಾಣಕ್ಕೆ ಬರಮಾಡಿಕೊಳ್ಳಬೇಕೆಂದು ನಿಶ್ಚಯಿಸಿದರು.

ಆಮೇಲೆ ಅವರು ದಾರಿಯುದ್ದಕ್ಕೆ ತ್ರಿಪುರಾಂತಕ ದೇವರ ಮಂಟಪದ ವರೆಗೆ ಚಿತ್ರತರವಾದ ಮಂಟಪಗಳನ್ನು ರಚಿಸಿದರು. ಶಿವಗೋಷ್ಠಿಯ ಸಲುವಾಗಿ ಮಂತ್ರಿಪದವನ್ನು ತ್ಯಜಿಸಿದ ಕೇಶಿರಾಜನನ್ನು ಸನ್ಮಾನಿಸಬೇಕೆಂದು ಅಸಂಖ್ಯ ಜನರು ನೆರೆದು ವಾದ್ಯ ನರ್ತನ ಮೊದಲಾದವುಗಳಿಂದ ಮಹತ್ತರವಾದ ಮೆರವಣಿಗೆಯನ್ನು ತೆಗೆದರು. ಹೀಗೆ ಭಕ್ತ ಜನರು ಮಹಾ ವೈಭವದಿಂದ ಪಟ್ಟಣವನ್ನು ಪ್ರವೇಶಿಸಿದರು. ಪಟ್ಟಣದ ಬೀದಿಗಳಲ್ಲಿ ಮಹಾಧ್ವನಿಯು ಭೋರೆಂದು ಭೋರ್ಗರೆಯುಹತ್ತಿತು.

ಮೆರವಣಿಗೆಯ ಮಹಾಧ್ವನಿಯು ಪೆರ್ಮಾಡಿರಾಯನ ಕಿವಿಗಳನ್ನು ಮುಟ್ಟಲು ಅವನು ಇದೇನದ್ಭುತವೆಂದು ಉಪ್ಪರಿಗೆಯನ್ನು ಏರಿ ನೋಡಲಾಗಿ ಕೇಶಿರಾಜನ ಸನ್ಮಾನಕ್ಕೋಸ್ಕರ ಈ ವೈಭವವು ಏರ್ಪಟ್ಟಿದೆ ಎಂಬುದನ್ನು ತಿಳಿದು ಮನದಲ್ಲಿ ಕೇಶಿರಾಜನು ಶಿವಶರಣನು, ಶಿವಾನುಭವಿಯು, ಅವನನ್ನು ಸನ್ಮಾನಿಸಬೇಕೆಂಬ ಅಪೇಕ್ಷೆಯು ಅವನಲ್ಲಿ ಉಂಟಾಯಿತು. ಆಮೇಲೆ ಅವನು ಕೂಡಲೆ ಉಪ್ಪರಿಗೆ ಯಿಂದ ಇಳಿದು ಪರಿಮಿತ ಪರಿವಾರದೊಂದಿಗೆ ಕಾಲ್ನಡೆಯಲ್ಲಿ ನಡೆದು ಬರುತ್ತ ಕೇಶಿರಾಜನನ್ನು ನಮಸ್ಕರಿಸಿ— ನಾನು ನಿಮ್ಮ ಅಡಿಗಳ ಸಾಮರ್ಥ್ಯವನ್ನು ತಿಳಿಯದೆ ಹಾಗೆ ಮಾಡಿದೆನು, ನಾನು ಪುಣ್ಯಹೀನನು, ನನ್ನನ್ನು ಕರುಣಿಸ ಬೇಕು ಎಂದು ಹೇಳಿಕೊಂಡನು. ಆಗ ಕೇಶಿರಾಜನು ಅವನನ್ನು ಸನ್ಮಾ ನಿಸಿ ತ್ರಿಪುರಾಂತಕ ದೇವರ ದರ್ಶನವನ್ನು ಹೊಂದಿ ರಾಜನಲ್ಲಿಗೆ ಬಂದು ಅವನಲ್ಲಿ ಕೆಲಕಾಲ ಶಿವಗೋಷ್ಠಿಯಲ್ಲಿದ್ದು ಅರಮನೆಯಲ್ಲಿರಲು ತಾನು ಒಪ್ಪದೆ, ತಿರುಗಿ ಮೇದರನ ಗುಡಿಸಲಿಗೆ ಬಂದನು.

ಮುಂದೆ ಅವನು ಶಿವಪುರವನ್ನು ಬಿಟ್ಟು ಸ್ವಗ್ರಾಮವಾದ ಕೊಂಡ ಗುಳಿಗಿಗೆ ಹೊರಟನು. ಆಗ ಅವನ ಮಹಿಮೆಯನ್ನರಿತ ಬಹುಜನ ಭಕ್ತರು ಅವನನ್ನು ಹಿಂಬಾಲಿಸಿದರು. ಅವರು ದಾರಿಯನ್ನು ನಡಿದು ಬರುತ್ತಲಿರು ವಾಗ ಒಂದು ಅರಣ್ಯಮಧ್ಯದಲ್ಲಿ ಬಂದರು. ಅಲ್ಲಿ ಒಂದು ವಿಶಾಲವಾದ ನದಿಯು ಹರಿಯುತ್ತಿತ್ತು. ಅಲ್ಲಿದ್ದ ಪ್ರಕೃತಿ ಸೌಂದರ್ಯವನ್ನು ಕಂಡು ಕೇಶಿ ರಾಜನು ಶಿವಧ್ಯಾನದಲ್ಲಿರಬೇಕೆಂದು ಬಯಸಿ ತನ್ನ ಇಷ್ಟಲಿಂಗವನ್ನು ಗಂಧಾ ಕ್ಷತೆ, ಕೆಂದಾವರೆ, ದಾಸವಾಳ ಪುಷ್ಪಗಳಿಂದ ಅರ್ಚಿಸುತ್ತ ಧ್ಯಾನಮಗ್ನ ನಾದನು. ಆಗ ಒಂದು ಗರುಡ ಪಕ್ಷಿಯು ಮೇಲೆ ಹಾರಾಡುತ್ತಿರುವಾಗ ಅವನ ಲಿಂಗವನ್ನು ನೋಡಿ ಅದು ತನ್ನ ಆಹಾರವೆಂದು ತಿಳಿದು ಪುಷ್ಪ ಸಹಿತವಾಗಿ ಅದನ್ನು ಮೇಲಕ್ಕೆ ಎತ್ತಿಕೊಂಡು ಹೋಯಿತು. ಆದರೆ ಅಷ್ಟ ರಲ್ಲಿ ಆ ಲಿಂಗವು ಕೆಳಕ್ಕೆ ಓಸರಿಸಲು ಅದು ನದಿಯಲ್ಲಿಯೇ ಬಿದ್ದು ಬಿಟ್ಟಿತು.

ಅದನ್ನು ಅಲ್ಲಿ ನೆರೆದ ಭಕ್ತ ಮಹೇಶ್ವರರು ಕಂಡು ಹರಿಗೋಲಿನಿಂದ ಅರಸಿಕೊಂಡು ಬರುವೆವೆಂದು ಅದನ್ನು ಹುಡುಕಲು ಉದ್ಯೋಗಿಸಿದರು. ಆದರೆ ಕೇಶಿರಾಜನು ಅವರ ಆಯಾಸವನ್ನು ಕಂಡು— ನೀವು ಇಷ್ಟು ಶ್ರಮ ವನ್ನು ವಹಿಸುವ ಕಾರಣವಿಲ್ಲ. ಎಂದು ಹೇಳಿ ನದಿಯ ದಂಡೆಯಲ್ಲಿ

ಕುಳಿತು ಶರಣ ಸತಿ ಲಿಂಗ ಪತಿ ಎಂಬ ಭಾವದಿಂದ ದಶಾವಸ್ಥೆಯನ್ನು ಹೊಂದಿ ಲಿಂಗವನ್ನು ಸ್ತುತಿಸಹತ್ತಿದನು. ಲಿಂಗವು ಮಂತ್ರಮಯವಾದುದು. ಆದುದರಿಂದ ಶಿವಮಂತ್ರವನ್ನು ನೆನೆಯುತ್ತ ಅದರ ಮಹಿಮೆಯನ್ನು ಉಸುರ ಹತ್ತಿದನು. ಮಂತ್ರದಿಂದಲೇ ಶಿವನು ಮಂತ್ರಸಿದ್ಧನಿದ್ದಲ್ಲಿಗೆ ಬರುವನೆಂದು ಆಗಮ ವಾಕ್ಯವಿದೆ. ಅದಕ್ಕನುಸರಿಸಿ ಕೇಶಿರಾಜನು ನದಿಯಲ್ಲಿ ಬಿದ್ದ ಲಿಂಗ ವನ್ನು ನೆನೆಯಲಾಗಿ ಅದು ತಾನಾಗಿಯೇ ಮೊದಲಿನ ಗಂಧಾಕ್ಷತೆ ಕೆಂಪಿನ ದಾಸಿವಾಳ ಸಹಿತವಾಗಿ ಕೇಶಿರಾಜನ ಕರಸ್ಥಲಕ್ಕೆ ಬಂದಿತು. ಅದನ್ನು ಅಲ್ಲಿದ್ದ ಭಕ್ತಮಹೇಶ್ವರರು ನೋಡಿ ಲಿಂಗವನನಂತಪರಿಯಿಂದ ಸ್ತೋತ್ರ ಮಾಡಿ ಮುಂದೆ ಹೊರಡಲುದ್ಯುಕ್ತರಾದರು.

ಅವರು ನದಿಯನ್ನು ದಾಟಬೇಕೆಂದು ಮುಂದೆ ಹೋಗಲು ಕೇಶಿ ರಾಜನ ಪಾದಸ್ಪರ್ಶವಾದ ಕೂಡಲೆ ಅದು ಇಬ್ಭಾಗವಾಯಿತು. ಹೀಗೆ ಅದು ದಾರಿಯನ್ನು ಬಿಡಲು ನೆರೆದ ಜನರೆಲ್ಲ, ಉಘೇ ಉಘೇ ಎಂದು ಉಘ್ಘಡಿಸುತ್ತ ಹೊಳೆಯನ್ನು ದಾಟಿದರು. ಅವರು ಹೊಳೆ ದಾಟಿದ ಕೂಡಲೆ ಅದು ಎಂದಿನಂತೆ ಹರಿಯ ತೊಡಗಿತು. ಆ ಮೇಲೆ ಕೇಶಿರಾಜನು ತನ್ನ ಗ್ರಾಮವಾದ ಕೊಂಡಗುಳಿಗೆ ಬಂದು ಶಿವಾನುಭವದಲ್ಲಿ ಇದ್ದುಕೊಂಡು, ಭಕ್ತಜನರನ್ನು ಕೃತಾರ್ಥರನ್ನಾಗಿ ಮಾಡುತ್ತ ತನ್ನ ಪದಪದ್ಯಗಳಿಂದ ಪರ ಮಾತ್ಮನನ್ನು ಭಜಿಸುತ್ತ ಅಲ್ಲಿಯೇ ಸಾಮರಸ್ಯ ಪದವನ್ನು ಹೊಂದಿದನು.

ಕೇಶಿರಾಜನಿದ್ದುದು ಪೆರ್ಮಾಡಿ ರಾಜನ ಕಾಲದಲ್ಲೆಂದು ಅವನ ಚರಿತ್ರೆ ಯಿಂದ ತಿಳಿದುಬರುತ್ತದೆ. ಚಾಲುಕ್ಯರಾಜರಲ್ಲಿ ಅತ್ಯಂತ ಪ್ರಸಿದ್ಧನಾದ ವಿಕ್ರಮಾದಿತ್ಯನು 'ತ್ರಿಭುವನಮಲ್ಲ ವಿಕ್ರಮಾದಿತ್ಯ ಪೇರ್ಮಾಡಿದೇವ'ನೆಂದು ಶಿಲಾಶಾಸನಗಳಲ್ಲಿ ಕರೆಯಲ್ಪಟ್ಟಿದ್ದಾನೆ. ಆದ್ದರಿಂದ ವಿಕ್ರಮಾದಿತ್ಯನಿಗೆ ಪೇರ್ಮಾಡಿ ಎಂಬ ಬೇರೆ ಹೆಸರೂ ಇದ್ದದ್ದು ತಿಳಿಯುತ್ತದೆ. ಇದು ಅವನ ಪೂರ್ವದ ನಿಜವಾದ ಹೆಸರಿರಬೇಕು. ಬಿಜ್ಜಳನ ತಂದೆಯ ಹೆಸರೂ ಪೇರ್ಮಾಡಿ ಎಂದಿದೆ. ಆದರೆ ಕೇಶಿರಾಜನನ್ನು ಪ್ರಧಾನಿಯನ್ನಾಗಿ ಮಾಡಿದವನು ಇವನಿ ರದೆ ಚಾಲುಕ್ಯ ವಿಕ್ರಮಾದಿತ್ಯನಿರಬೇಕೆಂದು ನಮಗೆ ತೋರುತ್ತದೆ. ಬಿಜ್ಜಳನ ತಂದೆಯಾದ ಪೆರ್ಮಾಡಿಯು ಭೀಮಾನದೀ ತೀರದಲ್ಲಿದ್ದ ತರ್ದವಾಡಿಯಲ್ಲಿ ಒಬ್ಬ ಚಿಕ್ಕ ಮಾಂಡಲಿಕನಾಗಿದ್ದನು. ಆದರೆ ಕೇಶಿರಾಜನು ಕಲ್ಯಾಣಪಟ್ಟಣ ದಲ್ಲಿ ಆಳುತ್ತಿದ್ದ ಪೇರ್ಮಾಡಿಯ ಮಂತ್ರಿಯಾಗಿದ್ದನು. ಕೇಶಿರಾಜನ ಚರಿತ್ರೆ

ಯಲ್ಲಿ ತರ್ದೇವಾಡಿಯ ಉಲ್ಲೇಖವಿರದೆ ಕಲ್ಯಾಣದ ಉಲ್ಲೇಖವಿದೆ. ಕೇಶಿ ರಾಜನಂತೆಯೇ ಬಾಹೂರು ಬೊಮ್ಮಯ್ಯ, ತೆಲುಗು ಜೊಮ್ಮಯ್ಯ, ಇಲಿಹಾಳ ಬ್ರಹ್ಮಯ್ಯ ಇವರೂ ಕೂಡ ಪೇರ್ಮಾಡಿ ರಾಯನ ಕಾಲದಲ್ಲಿದ್ದುದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇವರಿದ್ದುದು ಕಲ್ಯಾಣಪಟ್ಟಣದ ಪೇರ್ಮಾಡಿ ರಾಯನಲ್ಲಿ. ಈ ಎಲ್ಲ ಸಂಗತಿಗಳಿಂದ ಕೇಶಿರಾಜನು ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದಿರಬಹುದೆಂದು ನಮಗೆ ತೋರುತ್ತದೆ.

ಈ ಚಾಲುಕ್ಯ ವಿಕ್ರಮನು ೧೧೦೭೬ ರಿಂದ ೧೧೨೬ ರ ವರೆಗೆ ಅತ್ಯಂತ ವೈಭವದಿಂದ ರಾಜ್ಯವಾಳಿದನು. ಆದುದರಿಂದ ಕೇಶಿರಾಜನು ಬಸವೇಶ್ವರನ ಕ್ಕಿಂತಲೂ ೬೦-೭೦ ವರ್ಷ ಹಿಂದಿನವನಾಗುತ್ತಾನೆ. ಅವನ ಚರಿತ್ರೆಯಲ್ಲಿ ಬಸವೇಶ್ವರನ ಉಲ್ಲೇಖವು ಎಷ್ಟು ಮಾತ್ರವು ಬರುವದಿಲ್ಲ. ಅವನು ಕಲ್ಯಾಣ ಪಟ್ಟಣದಲ್ಲಿದ್ದರೂ ಬಸವೇಶ್ವರನ ಉಲ್ಲೇಖವಿರುವದಿಲ್ಲ. ಬಸವೇಶ್ವರನಕ್ಕಿಂತಲೂ ಅವನು ಮೊದಲಿನವನಾಗಿದ್ದದರಿಂದ ಇಂಥ ಉಲ್ಲೇಖವಿಲ್ಲೆಂದು ನಾವು ಅನು ಮಾನ ಮಾಡಬೇಕಾಗುತ್ತದೆ.

ಕೇಶಿರಾಜನು ಬಸವೇಶ್ವರನಂತೆಯೇ ಶಿವಾನುಭವಿಯೂ ವಿದ್ವಾಂಸನೂ ಆಗಿದ್ದನು. ಬಸವೇಶ್ವರನಿಗೆ ಹೇಗೆ ಮಂತ್ರಿಪದವು ಪ್ರಾಪ್ತವಾಯಿತೋ ಹಾಗೆಯೇ ಕೇಶಿರಾಜನಿಗೂ ಮಂತ್ರಿಪದವು ಪ್ರಾಪ್ತವಾಯಿತು. ಕೇಶಿರಾಜನು ಅಧಿಕಾರ ವನ್ನು ಹೊಂದಿದ ಬಳಿಕ ಬಸವೇಶ್ವರನಂತೆಯೇ ಅವನೂ ವೀರಶೈವ ಮತ ವನ್ನು ರಾಜ್ಯದಲ್ಲಿ ಪ್ರಸಾರಗೊಳಿದನು. ಇದರಿಂದ ಅವನು ಪರವಾದಿಗಳ ಕೋಪಕ್ಕೆ ಈಡಾದನು. ಆದರೆ ಅವನು ಅತ್ಯಂತ ಸರಳ ಸ್ವಭಾವದವನು. ಆದುದರಿಂದ ಅವನ ವಿರೋಧಿಗಳು ಒಂದು ಉಪಾಯದಿಂದ ಅವನ ಮಂತ್ರಿ ಪದವನ್ನು ತಪ್ಪಿಸಿದರು. ಆದರೆ ಬಸವೇಶ್ವರನು ಬಹಳ ಜಾಣನು. ಆದ್ದ ರಿಂದ ಬಿಜ್ಜಳನನ್ನು ವಿರೋಧಿಸುವ ಪ್ರಸಂಗಗಳು ಅವನಿಗೆ ಆಗಿಂದಾಗ ಬಂದರೂ ಅವನು ಉಪಾಯದಿಂದ ಅವುಗಳನ್ನು ತಪ್ಪಿಸಿಕೊಳ್ಳುತ್ತ ಬಂದನು. ಕೇಶಿರಾಜನು ತನ್ನ ಪ್ರಧಾನಿಪಟ್ಟವನ್ನು ಬಿಟ್ಟುಕೊಟ್ಟ ಬಳಿಕ ಅವನು ಸ್ವಗ್ರಾಮಕ್ಕೆ ಬಂದು ತನ್ನ ಶಿವಾನುಭವ ಗೋಷ್ಠಿಯಲ್ಲಿಯೇ ಕಾಲಕಳೆಯ ಹತ್ತಿದನು. ಇಂಥ ಪ್ರಸಂಗವು ಬಸವೇಶ್ವರನಿಗೂ ಬರಲು ಅವನು ತನ್ನ ಪ್ರಧಾನಿಪಟ್ಟವನ್ನು ತ್ಯಜಿಸಲಾಗಿ ದೇಶದಲ್ಲಿ ಒಂದು ಮಹತ್ತರವಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯೇ ಉದ್ಭವಿಸಿತು. ಅಷ್ಟರಲ್ಲಿ ಅಸಂಖ್ಯ

ಶಿವಶರಣರು ದೇಶದಲ್ಲಿ ಉಂಟಾಗಿದ್ದದರಿಂದ, ಅವರ ಬಲದಿಂದ ಪ್ರಬಲವಾದ ಕ್ರಾಂತಿಯು ಉಂಟಾಯಿತು. ಆದರೆ ವೀರಶೈವ ಧರ್ಮವು ಬಸವೇಶ್ವರನ ಕಾಲದಲ್ಲಿ ಇಷ್ಟು ಪ್ರಬಲವಾದುದಕ್ಕೆ ಕೇಶಿರಾಜನಂಥ ಶಿವಶರಣರು ಅವನ ಕಿಂತಲೂ ಮೊದಲು ಉದ್ಭವಿಸಿ ಶಿವಾನುಭವವನ್ನು ರಾಜ್ಯದಲ್ಲಿ ಹೆಚ್ಚಿಸಿದ್ದೇ ಮುಖ್ಯ ಕಾರಣವೆಂದು ನಮಗೆ ತೋರುತ್ತದೆ.

ಕೇಶಿರಾಜನು ಒಬ್ಬ ಶ್ರೇಷ್ಠ ಕವಿಯು ಎಂದು ವೀರಶೈವರಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದಾನೆ. ಅವನನ್ನು ಸ್ಮರಿಸದ ಯಾವ ವೀರಶೈವ ಗ್ರಂಥಕಾರನೂ ಇರುವದಿಲ್ಲ. ಆದರೆ ಅವನು ರಚಿಸಿದ ಕವನಗಳು ಇನ್ನೂ ಪ್ರಸಿದ್ಧವಾಗಿಲ್ಲ. ಅವು ಮುಖ್ಯವಾಗಿ ಅಷ್ಟಾವರಣಕ್ಕೆ ಸಂಬಂಧಿಸಿದವಿರುತ್ತವೆ. 'ಷಡಕ್ಷರ ಕಂದ' ಎಂಬ ಗ್ರಂಥವನ್ನು ಅವನು ರಚಿಸಿದ್ದು ಅದರಲ್ಲಿ ಮಂತ್ರ ಮಹಿಮೆಯು ಹೇಳಲ್ಪಟ್ಟಿದೆ. ಅವನ ಬಂಧವು ಬಹು ಪ್ರೌಢವಾದುದು. ಅವನ ಎರಡು ನುಡಿಗಳನ್ನು ನಾವು ಇಲ್ಲಿ ಉದಹರಿಸುತ್ತೇವೆ.

(೧) ಉಚ್ಚಿ ನಲಿನಲಿದು ವಿಷಯ | ದೊಳಬ್ಬರಿಸುವ ಮುನಿಸು
ಮನದ ಕನಲಿಕೆ ಕಾಮಂ |
ಬೊಬ್ಬಿಡುವ ದುರಿತ ಕೋಟಿಯು | ನೆಬ್ಬಟ್ಟುವು ದೋಂ
ನಮುಶಿವಾಯೆಂಬ ಪದಂ ||

(೨) ತರಿಯಲ್ ಮೋಹದ ಕೆಚ್ಚಂ | ಪರಿಯಲ್ ಭವ ಪಾಶಮುಂ
ಮನೋಜನ ಬಿಲ್ಲಂ |
ಮುರಿಯಲ್ ಮಾಯೆಯು ಬೇರಂ | ಕೊರೆಯಲ್
ಜಪವೋಂ ನಮುಶ್ಶಿವಾಯೆಂಬ ಪದಂ ||

ಇವನು ಕೆಲಕಾಲವಿದ್ದ ಶಿವಪುರವು ಈಗ ಕಲ್ಯಾಣದ ಸಮೀಪದಲ್ಲಿ ಉಪಲಬ್ಧವಿರದಿದ್ದರೂ ಅದು ಅದರ ಉಪನಗರವಾಗಿತ್ತೆಂದು ತೋರುತ್ತದೆ. ಸಿದ್ಧರಾಮ, ಅಮುಗಿದೇವ, ಕೇಶಿರಾಜ, ತೆಲುಗು ಜೊಮ್ಮಯ್ಯ ಇವರೆಲ್ಲರು ಇಲ್ಲಿದ್ದುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಈ ಉಪನಗರದಲ್ಲಿ ವೀರಶೈವರು ಹೆಚ್ಚಾಗಿ ವಾಸಮಾಡುತ್ತಿರಬೇಕೆಂದು ತೋರುತ್ತದೆ. ಆದರೆ ಕಲ್ಯಾಣವು ಹಾಳಾದ ಬಳಿಕ ಈ ಶಿವಪುರವೂ ನಾಶವಾಗಿರಬಹುದು.

## F

ಕೇಶಿರಾಜನ ಮೂಲ ಸ್ಥಾನವು ಕೊಂಡುಗುಳಿಯು. ಸಿಂದಗಿ ತಾಲೂಕಿನಲ್ಲಿರುವ ಹಿಪ್ಪರಗಿಯ ಆಗ್ನೇಯ ದಿಕ್ಕಿಗೆ ೧೨ ಮೈಲುಗಳ ಮೇಲೆ ಕೊಂಡುಗುಳಿ ಎಂಬ ದೊಡ್ಡ ಗ್ರಾಮವಿದೆ. ಆದರೆ ಇದು ಕೇಶಿರಾಜನ ಸ್ಥಾನವಿರುವದಿಲ್ಲ. ಕೇಶಿರಾಜನ ಗ್ರಾಮವು ಸಿಂದಗಿ ಗ್ರಾಮದಿಂದ ಪೂರ್ವ ದಿಕ್ಕಿಗೆ ಇರುತ್ತದೆ. ಇಲ್ಲಿ ಅವನ - ಹೆಸರಿನ ಪುರಾತನ ದೇವಾಲಯವು ಈಗಲೂ ಇದೆ.

ಕೇಶಿರಾಜನ ಪೊವಾಡವು ಸಂಭವಿಸಿದ್ದು ಭೀಮಾ ತೀರದಲ್ಲಿರಬೇಕೆಂದು ತೋರುತ್ತದೆ. ಈ ವಿಶಾಲವಾದ ನದಿಯು ಕಲ್ಯಾಣದಿಂದ ಕೊಂಡಗುಳಿಗೆ ಹೋಗುವ ಮಾರ್ಗದಲ್ಲಿ ಇರುತ್ತದೆ.

ಕೇಶಿರಾಜನ ಉಲ್ಲೇಖವು ಗಣಸಹಸ್ರದಲ್ಲಿ ಬಂದಿರುತ್ತದೆ.

---

# ೨. ಗುಪ್ತ ಮಂಚಣ್ಣ.

ಕಲ್ಯಾಣ ಪಟ್ಟಣದಲ್ಲಿ ದಾಮೋದರನೆಂಬ ವೀರವೈಷ್ಣವನು ಬಿಜ್ಜಳನ ಭಂಡಾರದ ಕರಣಿಕನಾಗಿ ನೇಮಿಸಲ್ಪಟ್ಟು ಅರಸನ ಸೇವೆ ಮಾಡುತ್ತ ಇದ್ದನು. ಇವನ ಹೆಂಡತಿಯ ಹೆಸರು ಮಾಯಾದೇವಿ. ಅವಳಿಗೆ ಮಕ್ಕಳಿಲ್ಲದ್ದರಿಂದ ಅವಳು ಒಂದು ದಿನ ಗುಪ್ತವಾಗಿ ಕೆಲವೊಂದು ಶಿವಾಲಯಕ್ಕೆ ಹೋಗಿ ಪುತ್ರಾರ್ಥಿಯಾಗಿ ದೇವರಿಗೆ ಬೇಡಿಕೊಂಡು ಅಲ್ಲಿಯ ಪಿಂಡ ಪ್ರಸಾದವನ್ನು ಸೇವಿಸಿದಳು. ತರುವಾಯ ಅವಳು ಗರ್ಭಿಣಿಯಾಗಿ ಒಬ್ಬ ಗಂಡುಮಗುವನ್ನು ಹೆತ್ತಳು. ದಾಮೋದರನು ತನ್ನ ವೈಷ್ಣವ ಮತಪದ್ಧತಿಯ ಪ್ರಕಾರ ಮಗುವಿಗೆ ಜಾತಕರ್ಮಗಳನ್ನು ಮಾಡಿ ಮಂಚಣ್ಣನೆಂಬ ನಾಮಕರಣ ಮಾಡಿದನು. ಮುಂದೆ ಅವನಿಗೆ ೮ನೆಯ ವರ್ಷವು ಪ್ರಾಪ್ತವಾಗಲು ಉಪನಯನವನ್ನು ಮಾಡಿ ಅವನ ಅಂಗದಲ್ಲಿ ಶಂಖ ಚಕ್ರ ಮುದ್ರೆಗಳನ್ನು ಕಾಯಿಸಿ ಒತ್ತಿಸಿ ಅವನನ್ನು ವೀರವೈಷ್ಣವನನ್ನಾಗಿ ಮಾಡಿದನು.

ಆಮೇಲೆ ದಾಮೋದರನು ಅವನಿಗೆ ವೇದಾಭ್ಯಾಸವನ್ನು ಮಾಡಿಸಿದನು. ಮಂಚಣ್ಣನು ಗಣಿತ ಶಾಸ್ತ್ರದಲ್ಲಿ ಬಹು ಸಮರ್ಥನಾದನು. ಅವನಿಗೆ ಮುಂದೆ ಲಗ್ನವನ್ನೂ ಮಾಡಿದನು. ಒಂದು ದಿನ ದಾಮೋದರನು ತನ್ನ ಪುತ್ರನನ್ನು ಬಿಜ್ಜಳನಿಗೆ ಭೆಟ್ಟಿಮಾಡಿಸಲು ಬಿಜ್ಜಳನು ಅವನ ಕುಶಾಗ್ರಬುದ್ಧಿಗೆ ಮೆಚ್ಚಿದವನಾಗಿ ತನಗೆ ಬರುತ್ತಿರುವ ವಿಜ್ಞಾಪನಾ ಪತ್ರಗಳನ್ನು ಓದಲಿಕ್ಕೂ ತಾನು ಹೇಳಿದಂತಹವುಗಳಿಗೆ ಉತ್ತರ ಬರೆಯಲಿಕ್ಕೂ ಇವನನ್ನು ನಿಯಮಿಸಿಕೊಂಡನು. ಆದ್ದರಿಂದ ಅವನು ಯಾವಾಗಲೂ ಅರಸನ ಸಮೀಪದಲ್ಲಿಯೇ ಇರಹತ್ತಿದನು. ಅರಸನಾದರೂ ಅವನ ಬುದ್ಧಿಮತ್ತೆಗೆ ಮೆಚ್ಚಿ ಅವನನ್ನು ಬಹಳ ಪ್ರೀತಿಸುವವನಾದನು.

ಮಂಚಣ್ಣನು ತನ್ನ ನಿತ್ಯದ ಕಾರ್ಯಗಳನ್ನು ತೀರಿಸಿಕೊಂಡು ತನ್ನ ಗೃಹಕ್ಕೆ ಬಂದಬಳಿಕ ವೇದವೇದಾಂತಗಳು, ಉಪವೇದಗಳು, ಅಷ್ಟಾದಶ ಪುರಾಣಗಳ, ಹತ್ತೊಂಭತ್ತು ಧರ್ಮಶಾಸ್ತ್ರಗಳ, ಆಗಮಗಳ ಸಾಂಗವಾಗಿ ಅಭ್ಯಾಸ ಮಾಡಿದನು. ಹೀಗೆ ಅಭ್ಯಾಸ ಮಾಡುವಲ್ಲಿ ಅವನಿಗೆ ಶಿವಭಕ್ತಿಯೇ ಹೆಚ್ಚಿನದೆಂದು ಅವನಿಗೆ ತೋರಹತ್ತಿತು. ಬಸವೇಶ್ವರನ ಸನ್ನಿಧಿಯಲ್ಲಿ ಯಾವಾಗಲೂ ನಡೆಯುತ್ತಿದ್ದ ಶಿವಾನುಭವದ ಚರ್ಚೆಗಳನ್ನು ಕೇಳುವ ಪ್ರಸಂಗಗಳೂ ಅವನಿಗೆ ಆಗಿಂದಾಗ್ಗೆ ಬರುತ್ತಿದ್ದವು. ಆಗ ಅವನಿಗೆ ಶಿವಾನುಭವ

ಶಾಸ್ತ್ರವೇ ಶ್ರೇಷ್ಠವಾದುದೆಂದು ತೋರಿ ಯಾರಿಗೂ ತಿಳಿಯದಂತೆ ಒಂದು ದಿನ ರಾತ್ರಿಯಲ್ಲಿ ಒಬ್ಬ ಪಟ್ಟಾಧಿಕಾರಿಯನ್ನು ಕರೆಯಿಸಿಕೊಂಡು ಅವನಿಂದ ತಾನೂ ತನ್ನ ಹೆಂಡತಿಯೂ ಶಿವದೀಕ್ಷಾಪೂರ್ವಕವಾಗಿ ಲಿಂಗವನ್ನು ಪಡೆದುಕೊಂಡು ಮಂತ್ರೋಪದೇಶವನ್ನು ಹೊಂದಿದರು.

ಆಮೇಲೆ ಅವನು ವೈಷ್ಣವರು ರೇಗುವರೆಂದು ಶಿವಭಕ್ತಿಯನ್ನು ಅತ್ಯಂತ ಗೋಪ್ಯವಾಗಿ ಆಚರಿಸಹತ್ತಿದನು. ಅವನು ಬಾಹ್ಯದಲ್ಲಿ ವೀರವೈಷ್ಣವನ ವೇಷವನ್ನು ಧರಿಸಿಕೊಂಡು ಬಿಜ್ಜಳನ ಅರಮನೆಗೆ ಹೋಗಿ ಅಲ್ಲಿ ತನ್ನ ಅಧಿಕಾರ ಕಾರ್ಯಗಳನ್ನೆಲ್ಲ ಪೂರೈಸುವನು. ಆಮೇಲೆ ತನ್ನ ಮನೆಗೆ ಬಂದು ಗೋಪ್ಯತರವಾಗಿ ಅಂತರ್ ಗೃಹದಲ್ಲಿ ರಾತ್ರಿಯ ವೇಳೆಯಲ್ಲಿ ಸಚೇಲ ಸ್ನಾನವನ್ನು ಮಾಡಿ ತನ್ನ ಶಿವಪೂಜಾಗೃಹವನ್ನು ಪ್ರವೇಶಿಸಿ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಷಟ್‌ಸ್ಥಲಕ್ಕನುಸಾರವಾಗಿ ಶಿವಪೂಜಾಕಾರ್ಯ ನೆರವೇರಿಸುವನು. ಆಮೇಲೆ ಮಂತ್ರಪೂರ್ವಕವಾಗಿ ಲಿಂಗತೀರ್ಥವನ್ನು ಸ್ವೀಕರಿಸಿ ಶಿವಪ್ರಸಾದವನ್ನು ಸೇವಿಸುವನು. ಅವನ ಹೆಂಡತಿಯೂ ಕೂಡ ಹಾಗೆಯೇ ಮಾಡುವಳು. ಆಮೇಲೆ ಅವರು ತಮ್ಮ ಇಷ್ಟಲಿಂಗವನ್ನು ಬೇರೊಂದು ಪೆಟ್ಟಿಗೆಯಲ್ಲಿ ಬಚ್ಚಿಡುವರು. ಹೀಗೆ ಬಾಹ್ಯ ಲಿಂಗವನ್ನು ತೆಗೆದಿಟ್ಟರೂ ಅವರು ರೂಪಾದಿ ರುಚಿ ದ್ರವ್ಯಗಳನ್ನು ಪ್ರತಿಕ್ಷಣ ಆಯಾ ಲಿಂಗಗಳಿಗೆ ಸಲಿಸುತ್ತ ಪ್ರಸಾದೋಪಭೋಕ್ತೃಗಳಾಗಿ ತೃಪ್ತಿಬಡುತ್ತ ಗುಪ್ತ ಶಿವಭಕ್ತಿಯಿಂದ ಅನೇಕ ವರ್ಷ ಕಾಲಕಳೆದರು.

ಹೀಗಿರುವಲ್ಲಿ ಒಂದಾನೊಂದು ದಿನ ರಾತ್ರಿಯಲ್ಲಿ ಮಂಚರಸನು ಅಂತರಂಗ ಗೃಹದಲ್ಲಿ ಶಿವಾರ್ಚನೆಯನ್ನು ಮಾಡುತ್ತಿರುವಲ್ಲಿ ನೆರೆಮನೆಯ ಒಬ್ಬ ವೀರವೈಷ್ಣವನು ಮಧ್ಯ ರಾತ್ರಿಯಲ್ಲಿ ಎಚ್ಚತ್ತು ಹೊರಗೆ ಬಂದಿರಲಾಗಿ ಅವನಿಗೆ ಮಂಚಣ್ಣನ ಮೇಗಣ ಕಿಟಕಿಯಿಂದ ಧೂಪದ ಧೂಮವು ವಿಶೇಷವಾಗಿ ಬರುತ್ತಿರಲು ಅವನು ವೀರವೈಷ್ಣವರು ಉಪಯೋಗಿಸದೆ ಇರುವ ಇಂಥ ಧೂಪದ ವಾಸನೆಯು ಇಲ್ಲಿ ಏಕೆ ಬರುತ್ತಿದೆ, ಎಂದು ಸಂಶಯಪಟ್ಟು ತನ್ನ ಮನೆಯನ್ನು ಹತ್ತಿ ಮಂಚಣ್ಣನ ಮನೆಯ ಬೆಳಕಿಂಡಿಯಿಂದ ಮುಖವನ್ನಿಟ್ಟು ನೋಡಲು ಕೆಳಗೆ ಮಂಚಣ್ಣನೂ ಅವನ ಪತ್ನಿಯೂ ಶಿವಭಕ್ತಿಯುತರಾಗಿ ಏಕೋಭಾವದಿಂದ ಲಿಂಗಪೂಜೆಯಲ್ಲಿ ಮಗ್ನರಾಗಿದ್ದದ್ದನ್ನು ಕಂಡನು. ಆಗ ಅವನು— ಆಹಾ, ಇದೇನು ಆಶ್ಚರ್ಯವು! ಮಂಚ್ಣಣ್ಣನು

ನಮ್ಮ ಮತಪದ್ಧತಿಯ ಪ್ರಕಾರ ಶಂಖ ಚಕ್ರಾಂಕಗಳನ್ನು ಹೊಂದಿ ವೀರ ವೈಷ್ಣವನಾಗಿದ್ದಾನೆ. ಇಂಥವನು ಹೀಗೆ ಶಿವಪೂಜೆ ಮಾಡುವದೆಂದರೇನು? ಅಥವಾ ನಾನು ನಿತ್ಯದಲ್ಲಿ ಬಸವೇಶ್ವರನನ್ನು ನೋಡಿ ನೋಡಿ ನನಗೆಯೇ ಹೀಗೆ ಭ್ರಮೆಯಾಗಿದೆಯೋ? ಆಗಲಿ, ಎರಡು ಮೂರು ದಿವಸ ನಾನು ಇದನ್ನು ಚನ್ನಾಗಿ ಪರೀಕ್ಷಿಸುವೆನು ಎಂದು ಆ ದಿನ ತನ್ನ ಮನೆಯೊಳಗೆ ಬಂದನು. ಆಮೇಲೆ ೨-೩ ದಿನ ರಾತ್ರಿಯಲ್ಲಿ ಆ ವೈಷ್ಣವ ವಿಪ್ರನು ಬೆಳ ಕಿಂಡಿಯಿಂದ ನೋಡಲಾಗಿ ಮಂಚಣ್ಣನೂ ಅವನ ಹೆಂಡತಿಯೂ ಶಿವಪೂಜಾ ವೈಭವದಿಂದ ವಿಶೇಷವಾಗಿ ಮೆರೆಯುತ್ತಿದ್ದದ್ದನ್ನು ಕಂಡವನಾದನು.

ಆಮೇಲೆ ಅವನು ಮರುದಿನ ಬಸವೇಶ್ವರನನ್ನು ಕಂಡು ತಾನು ನೋಡಿದ ಸಂಗತಿಗಳನ್ನು ಅರುಹಲಾಗಿ ಬಸವೇಶ್ವರನು— ನೀನು ಹೇಳುವ ಮಾತನ್ನು ಕೇಳಿದರೆ ಆಶ್ಚರ್ಯವಾಗುತ್ತಿದೆ. ನಂಬಲಿಕ್ಕೆ ಶಕ್ಯವಲ್ಲ ಎಂದೆನ್ನಲು ಅವನು ನಿಮ್ಮ ವಿಶ್ವಾಸಿಕನೊಬ್ಬನನ್ನು ಈ ದಿನ ರಾತ್ರಿ ಕಳಿಸಿಕೊಟ್ಟಲ್ಲಿ ಅವನಿಗೆ ಎಲ್ಲವನ್ನೂ ತೋರಿಸುವೆನು ಎಂದು ಹೇಳಿದನು. ಹಾಗೆಯೇ ಬಸವೇಶ್ವರನು ಒಬ್ಬನನ್ನು ಕಳಿಸಲು, ಆ ವಿಪ್ರನು ಅವನಿಗೆ ಸಾಂಗವಾಗಿ ಎಲ್ಲವನ್ನೂ ತೋರಿಸಲಾಗಿ ಆ ಚಾರನು ಬಸವೇಶ್ವರನಲ್ಲಿಗೆ ಬಂದು ನಿಮ್ಮ ಪಾದದಾಣೆಯಾಗಿ ಮಂಚಣ್ಣನವರು ಭಕ್ತಿಯಿಂದ ಲಿಂಗಪೂಜೆಯನ್ನು ಮಾಡುತ್ತಾರೆ, ಅವರು ಸಾಮಾನ್ಯರಲ್ಲ, ಕಾರಣಿಕರೆಂದು ನನಗೆ ತೋರಿತು ಎಂದು ಹೇಳಿದನು.

ಬಸವೇಶ್ವರನು ಈ ಸಂಗತಿಯನ್ನು ಸೊಡ್ಡಳ ಬಾಚರಸ, ಮಧುವರಸ ಜಗದೇವ, ಚನ್ನಬಸವ ಇವರಿಗೆ ತಿಳಿಸಿ ಅವರೆಲ್ಲರೂ ಒಡ್ಡೋಲಗವು ಮುಗಿದ ಬಳಿಕ ಮಂಚಣ್ಣನ ನೆರೆಮನೆಯವನಾದ ವೈಷ್ಣವನ ಮನೆಗೆ ಗುಪ್ತವಾಗಿ ಬಂದು, ಮಧ್ಯರಾತ್ರಿಯ ವರೆಗೆ ಅವನಲ್ಲಿ ಕಾದುಕೊಂಡಿದ್ದರು. ಆಮೇಲೆ ಅವರು ಬೆಳಕಿಂಡಿಯೊಳಗಿಂದ ಕೆಳಗೆ ನೋಡಲಾಗಿ ಮಂಚಣ್ಣನು ತನ್ನ ವೈಷ್ಣವ ವೇಷವನ್ನು ಬಿಟ್ಟುಕೊಟ್ಟು, ಎಲ್ಲ ಬಾಗಿಲುಗಳನ್ನು ಮುಚ್ಚಿ ಪಂಚಾಕ್ಷರೀ ಮಂತ್ರವನ್ನು ಸ್ಮರಿಸುತ್ತ ಶಿವಾರ್ಚನೆಯಲ್ಲಿ ತಲ್ಲೀನ ಮನಸ್ಕನಾಗಿರುವದನ್ನು ಕಂಡರು. ಅದನ್ನು ಅವರು ನೋಡಿ ಮಂಚಣ್ಣನು ನಿಜವಾಗಿ ಮಹಿಮನು. ಎಂದು ಭಾವಿಸಿ ಅವನನ್ನು ಪ್ರತ್ಯಕ್ಷ ಕಂಡು ಅವನಿಗೆ ನಮಸ್ಕಾರ ಮಾಡಬೇಕೆಂದು ಯೋಚಿಸಿ ಐವರೂ ಕೆಳಗಿಳಿದು ಮನೆಯ ಬಾಗಿಲಲ್ಲಿ ಬಂದು ನಿಂತರು. ಮಾಳಿಗೆಯ ಮೇಲೆ ವೈಷ್ಣವ ದ್ವಿಜನು ನಿಂತು—

ಬಸವೇಶ್ವರನು ಇಲ್ಲಿಗೆ ಬಂದಿದ್ದಾನೆ, ಬಾಗಿಲು ತೆರೆಯಬೇಕೆಂದು ಬೆಳಕಿಂಡಿ ಯೊಳಗಿಂದ ಗಟ್ಟಿಯಾಗಿ ಕೂಗಿ ಹೇಳಲು, ಅದನ್ನು ಮಂಚಣ್ಣನು ಕೇಳಿ— ಅಯ್ಯೋ, ಗೋಪ್ಯನಾಗಿ ನಾನು ಮಾಡುತ್ತಿದ್ದ ಗೋಪ್ಯಲಿಂಗ ಪೂಜಾವ್ರತಕ್ಕೆ ಇಂದು ಭಂಗ ಉಂಟಾಯಿತು ಎಂದು ಪತ್ನಿಯೊಡನೆ ಯೋಚಿಸಿ, ಆ ಕ್ಷಣದ ಲ್ಲಿಯೇ ಅವನು ತನ್ನ ಪ್ರಾಣವನ್ನು ಲಿಂಗದಲ್ಲಿ ಊರ್ಧ್ವಗತಿಯಲ್ಲಿಟ್ಟು ಭಕ್ತಿಯಿಂದ ಅದರಲ್ಲಿ ತಲ್ಲೀನವಾಗಿ ಮಾಡಿದನು. ಆ ಲಿಂಗಾನುಸಂಧಾನ ವನ್ನು ಅವನ ಪತ್ನಿಯೂ ಮಾಡಲು ಅವಳ ಪ್ರಾಣವು ಲಿಂಗದಲ್ಲುಳಿದು ಶೂನ್ಯದ ಸ್ಥಿತಿಯನ್ನೈದಿದಳು. ಇದರಿಂದ ಬಸವೇಶ್ವರಾದಿಗಳು ಅವರ ಬಾಗಿ ಲಲ್ಲಿ ನಿಂತು ಎಷ್ಟು ಕೂಗಿಕೊಂಡರೂ ಬಾಗಿಲು ತೆರೆಯಲಿಲ್ಲ. ಅಷ್ಟರಲ್ಲಿ ಬೆಳಗಾಗಿ ಸೂರ್ಯೋದಯವಾಯಿತು. ಆದರೂ ಅವರೆಲ್ಲರು ಅಲ್ಲಿಯೇ ನಿಂತು ಕೊಂಡು ಬಿಟ್ಟರು.

ಮಂಚಣ್ಣನ ತಾಯಿತಂದೆಗಳೂ ಬಂಧು ವರ್ಗದವರೂ ಬೇರೆ ವೈಷ್ಣ ವರೂ ಅವರನ್ನು ನೋಡಿ ಅಲ್ಲಿ ಎಲ್ಲರೂ ನೆರೆದು— ಬಸವೇಶ್ವರನು ಏನು ಕಾರಣ ಹೀಗೆ ವೀರವೈಷ್ಣವನ ಮನೆಯ ಬಾಗಿಲಲ್ಲಿ ಬಂದು ನಿಂತಿದ್ದಾನೆ? ಮಂಚಣ್ಣನು ಏಕೆ ಬಾಗಿಲು ತೆರೆಯುವದಿಲ್ಲ? ಎಂದು ಸಂಶಯಗ್ರಸ್ತರಾಗಿ ಅನೇಕ ಕುತರ್ಕಗಳನ್ನು ಮಾಡಹತ್ತಿದರು. ಅವರಲ್ಲಿ ಬಸವೇಶ್ವರನ ವಿರೋ ಧಿಗಳಿದ್ದು ಅವರೆಲ್ಲರೂ ಸೇರಿ, ಸಂಚುಮಾಡಿ ಬಸವೇಶ್ವರ ಮೊದಲ್ಗೊಂಡು ಐವರು ಈಗ ಮಂಚಣ್ಣನ ಬಾಗಿಲಲ್ಲಿದ್ದಾರೆ, ಬಿಜ್ಜಳನಲ್ಲಿಗೆ ಹೋಗಿ ಅವ ನಿಗೆ— ಮಂಚಣ್ಣನು ಬಾಗಿಲನ್ನು ತೆರೆಯದೆ ಇದ್ದಾನೆ. ಈ ಸಂದರ್ಭಗಳನ್ನು ನೋಡಿದರೆ ಅವರು ಅವನ ಕೊಲೆ ಮಾಡಿದ್ದಾರೆಂದು ತೋರುತ್ತದೆಂದು ಅವ ನಲ್ಲಿ ಮೊರೆಯಿಟ್ಟರು.

ಆಗ ಬಿಜ್ಜಳನು ತನ್ನ ಪ್ರೀತಿಯ ನಿಯೋಗಿಯು ಇನ್ನೂ ಬರಲಿಲ್ಲ ವೆಂದು ಅವನ ದಾರಿಯನ್ನು ನೋಡುತ್ತ ಕುಳಿತಿದ್ದು ಅವನಿಗೆ ಹೀಗೆ ಹೇಳಿದ ಕೂಡಲೆ ಅವನು ಅತ್ಯಂತ ಕೋಪಾವಿಷ್ಟನಾಗಿ ಮಂಚಣ್ಣನ ಮನೆಗೆ ತಾನೇ ಬಂದನು. ಅಲ್ಲಿ ಬಸವೇಶ್ವರನಿರುವದನ್ನು ನೋಡಿ— ಈ ವೈಷ್ಣವನ ಮಗನ ಗೊಡವೆ ನಿಮಗೇಕೆ, ಎಂದು ಕೇಳಲು ಬಸವನು— ಈತನು ವೈಷ್ಣವನಲ್ಲ. ಅವನು ಸದಾಚಾರ ಸಜ್ಜನ ಶುದ್ಧ ಲಿಂಗಾರ್ಚಕನು, ಇವನನ್ನು ನಮಸ್ಕರಿ ಸಲಿಕ್ಕೆ ಬಂದಿದ್ದೇವೆ ಎಂದು ಹೇಳಿದನು. ಅದಕ್ಕೆ ನೆರೆದವರು ಮತ್ತಿಷ್ಟು

ಕೇಳಿದವರಾಗಿ ವೀರವೈಷ್ಣವನಾದ ನಮ್ಮ ಮಂಚಣ್ಣನು ಶಿವಭಕ್ತನಂತೆ! ಅವನು ಶಂಖಚಕ್ರಾಂಕನಾಗಿ ವೀರವೈಷ್ಣವನಾಗಿರುತ್ತಾನೆ. ಈಗ ಮುಂಚಿತವಾಗಿ ಈ ಕದವನ್ನು ತೆರೆಯಿಸಬೇಕು ಎಂದು ಅವರು ಅರಸನಿಗೆ ಹೇಳಿದರು. ರಾಜನ ದೂತರು ಎಷ್ಟು ಅಬ್ಬರಿಸಿದರೂ ಕದ ತೆರೆಯದಿರಲು ಅವರು ಅದನ್ನು ಒಡೆದು ಮನೆಯೊಳಗೆ ಪ್ರವೇಶ ಮಾಡಿದರು. ಅವರು ಒಳಗೆ ನೋಡುತ್ತಾರೆಯೇ ಮಂಚಣ್ಣನೂ ಅವನ ಹೆಂಡತಿಯೂ ಭಸ್ಮಧಾರಿಗಳಾಗಿ ಕೈಯಲ್ಲಿ ಲಿಂಗವನ್ನು ಇಟ್ಟುಕೊಂಡು ಹಾಗೆಯೇ ಪ್ರಾಣವನ್ನು ಬಿಟ್ಟು ಗೋಡೆಗೆ ಒರಗಿಕೊಂಡಿದ್ದನ್ನು ಕಂಡರು. ಆಗ ವೈಷ್ಣವರೆಲ್ಲರೂ ಆರ್ಭಟ ಮಾಡಿ ಗೋಳಾಡುತ್ತಿರಲು ಬಿಜ್ಜಳನು ಅವರನ್ನು ಸಂತೈಸಿ ಬಸವೇಶ್ವರನಿಗೆ— ಎಲೋ ಬಸವೇಶ್ವರನೇ, ನೀನು ಮಹಾಪಾಪಿಯು, ನೀನು ಏನೋ ಉಪಾಯದಿಂದ ಇವರನ್ನು ಕೊಂದಿರುವಿ. ಇದಕ್ಕೆ ನಿನಗೆ ತಕ್ಕ ಶಿಕ್ಷೆಯನ್ನು ಮಾಡುತ್ತೇನೆ. ಎಂದು ಹೇಳಿ ಆ ವೈಷ್ಣವರಿಗೆ ಈ ಎರಡೂ ಹೆಣಗಳನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅದಕ್ಕೆ ಮಾಡತಕ್ಕ ಅಂತ್ಯ ಕರ್ಮಗಳನ್ನು ನೀವು ಮಾಡಿರೆಂದು ಹೇಳಿದನು.

ಆಗ ಆ ವೀರವೈಷ್ಣವರೆಲ್ಲರು ಮಂಚಣ್ಣನ ಆಶೆ ನಮಗಿನ್ನೇತಕ್ಕೆ? ಇವನು ಭಸ್ಮಗಿಸ್ಮವನ್ನು ಧರಿಸಿ ಅಂಗದಲ್ಲಿ ಲಿಂಗಗಿಂಗಗಳನ್ನು ಇಟ್ಟುಕೊಂಡಿರುವದರಿಂದ ಇವನನ್ನು ನಾವು ಮುಟ್ಟಲಾಗದು ಎಂದು ನುಡಿಯಲು, ಬಿಜ್ಜಳನು ಕನಿಕರಪಟ್ಟು ಬಸವೇಶ್ವರನನ್ನು ನೋಡಿ— ಈ ಮಂಚಣ್ಣನನ್ನು ನೀನು ಕೊಂದದ್ದು ಅಲ್ಲದೆ, ಈ ಲೋಕಕ್ಕೂ ಪರಲೋಕಕ್ಕೂ ಅವನು ಸಲ್ಲದಂತೆ ಮಾಡಿದಿ. ಆದಕಾರಣ ನೀನೂ ನಿನ್ನ ಈ ಜತೆಗಾರರೂ ಈ ಹೆಣವನ್ನು ಹೊತ್ತುಕೊಂಡು ಹೋಗಿ ಅಂತ್ಯ ಸಂಸ್ಕಾರವನ್ನು ನೀವೇ ಮಾಡಬೇಕು ಎಂದು ಅಜ್ಞಾಪಿಸಿದನು.

ಆಗ ಐವರು ಮಂಚಣ್ಣನ ಮಹತ್ವವನ್ನು ತಿಳಿದವರಾಗಿ ಒಳಗೆ ಪ್ರವೇಶ ಮಾಡಿ ಅವನಿಗೆ ಸಾಷ್ಟಾಂಗ ಹಾಕಿ ಕೈಮುಗಿದು ನಿಂತುಕೊಂಡರು. ಬಸವೇಶ್ವರನು ಮಂಚಣ್ಣನ ಹಣೆಯಲ್ಲಿ ತ್ರಿಪುಂಡ್ರ ಧಾರಣೆಯನ್ನು ಮಾಡಲು ಅವನ ಭವಬಾಧೆಯು ಕರ್ಮಗಳೆಲ್ಲವೂ ತೊಡೆದು ಹೋದವು. ಆಮೇಲೆ ಅವನು ತನ್ನ ಹಸ್ತವನ್ನು ಅವನ ಮಸ್ತಕದಲ್ಲಿರಿಸಲು ಅಲ್ಲಿಯ ಬ್ರಹ್ಮರಂಧ್ರದಿಂದ ಅಮೃತಬಿಂದುವು ಉತ್ಪನ್ನವಾಗಿ ಅವನ ಪ್ರಾಣವು ಪ್ರಭಾವಸಿ ದಶವಾಯುಗಳು

ತಮ್ಮ ಸ್ಥಾನಗಳಲ್ಲಿ ನಿಲ್ಲಲು, ಆ ಕ್ಷಣದಲ್ಲಿಯೇ ಮಂಚರಸನು ಚೇತರಿಸಿ ಕಣ್ಣುಗಳನ್ನು ತೆರೆದನು. ಅವನು ತನ್ನ ಇದಿರಿಗೆ ಬಸವೇಶ್ವರ, ಚನ್ನಬಸವೇಶ್ವರ, ಮಧುವರಸ, ಸೊಡ್ಡಳ ಬಾಚರಸ ಜಗದೇವರು ಇರುವದನ್ನು ಕಂಡು ಅವರನ್ನು ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದು ತನ್ನ ಪತ್ನಿಗೂ ತಕ್ಕ ಸಂಸ್ಕಾರಗಳನ್ನು ಮಾಡಿಸಿ ಆಕೆಯ ಪ್ರಾಣವನ್ನು ಕೂಡ ಬರಮಾಡಿಕೊಂಡು ಉಭಯತರು ಬಿಜ್ಜಳನಿದ್ದ ಸ್ಥಳಕ್ಕೆ ಬಂದರು.

ಆಗ ಅರಸನ ಕೋಪವು ಅಡಗಿತು. ನೆರೆದ ಸಮಸ್ತ ಜನರು ಆಶ್ಚರ್ಯ ಬಟ್ಟರು. ಸಮಸ್ತ ಶಿವಭಕ್ತರು ಅತ್ಯಾನಂದವನ್ನು ಹೊಂದಿದರು. ಆಗ ಬಸವೇಶ್ವರನು ಮಂಚಣ್ಣನ ಪೂಜಾಕಾರ್ಯಗಳನ್ನು ಮೊದಲು ನೋಡಿದ ವಿಪ್ರನನ್ನು ಬರಮಾಡಿಕೊಂಡು ಅವನಿಂದ ಎಲ್ಲವನ್ನು ಕ್ರಮವಾಗಿ ರಾಜನ ಮುಂದೆ ಹೇಳಿಸಲು ರಾಜನು–ನಿಜವಾದ ಅಪರಾಧಿಯು ನಾನೇ, ಮಂಚಯ್ಯನು ಯಾವ ರೀತಿಯಿಂದ ಶಿವಭಕ್ತಿಯುಳ್ಳವನಾದನೆಂಬುದು ನನಗೆ ತಿಳಿಯಲಿಲ್ಲ, ಎಂದು ಹೇಳಿ ಅವನನ್ನು ಸ್ತುತಿಸುತ್ತ ತನ್ನ ಓಲಗಕ್ಕೆ ಕರೆದುಕೊಂಡು ಹೋದನು. ಮುಂದೆ ಮಂಚಯ್ಯನು ಬಹಿರಂಗವಾಗಿ ಶಿವಾನುಭವದ ಮಾರ್ಗದಲ್ಲಿ ಆಚರಿಸುತ್ತ ಶಿವಾನುಭವ ಮಂಟಪದಲ್ಲಿದ್ದುಕೊಂಡು ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುತ್ತ, ತಾನೂ ವಚನಕಾರನಾಗಿ ಕಲ್ಯಾಣದಲ್ಲಿಯೇ ಸಾಮರಸ್ಯ ಪದವನ್ನು ಹೊಂದಿದನು.

ಗುಪ್ತ ಮಂಚಣ್ಣನು ವಚನಕಾರನಿದ್ದಾನೆ. ಅವನ ೪೦ ವಚನಗಳು ನಮ್ಮ ಹತ್ತಿರವಿದ್ದು ಅವನ ಮುದ್ರಿಕೆಯು "ನಾರಾಯಣ ಪ್ರಿಯ ರಾಮನಾಥಾ" ಎಂದಿದೆ. ಇದು ಅವನ ಬಾಹ್ಯದಲ್ಲಿ ತೋರಿಸುತ್ತಿದ್ದ ವೈಷ್ಣವ ಮತದ ದ್ಯೋತಕವೋ ಏನೋ ಎನ್ನುವ ಹಾಗೆ ಇದೆ. ಆದರೂ ಅವನ ವಚನಗಳಲ್ಲಿ ಶಿವಾನುಭವ ತತ್ವಗಳ ನಿರೂಪಣೆಯೇ ಇರುತ್ತದೆ. ಅವನ ಕೆಲವು ವಚನಗಳಲ್ಲಿ ಅವನು ಆರಂಭದಲ್ಲಿ ವಿಷ್ಣುವಿನ ಭಕ್ತನಾಗಿದ್ದು ಅದರಲ್ಲಿ ಅವನ ವಿಶ್ವಾಸವಿಲ್ಲದ್ದರಿಂದ ಮುಂದೆ ಅವನು ಶಿವಭಕ್ತನಾದದ್ದರ ಉಲ್ಲೇಖಗಳು ಕಂಡುಬರುತ್ತಿವೆ. ವಾಚಕರು ಕೆಳಗಿನ ವಚನಗಳನ್ನು ಅವಲೋಕಿಸ ತಕ್ಕದ್ದು.

## ವಚನಗಳು.

(೧) ಆನು ನಾಮದ ದಾಸನಲ್ಲದೆ ದಾಸೋಹದ ದಾಸನಲ್ಲಯ್ಯ. ಆನು ಹರಿಭಕ್ತನಲ್ಲದೆ, ಶಿವಭಕ್ತನಲ್ಲಯ್ಯ. ಎನಗೆ ಶಿವಭಕ್ತಿ ನೆಲೆಗೊಳ್ಳದಯ್ಯ. ನೀನೇ ಎನಗೆ ಕೃಪೆ ಮಾಡಾ ನಾರಾಯಣ ಪ್ರಿಯ ರಾಮನಾಥಾ.

ಇದರಿಂದ ಶಿವಭಕ್ತಿ ಮತ್ತು ಹರಿಭಕ್ತಿ, ಇವುಗಳ ಪರಸ್ಪರ ಘರ್ಷಣವು ಅವನು ಈ ವಚನವನ್ನು ನುಡಿದಾಗ ಅವನ ಮನಸ್ಸಿನಲ್ಲಿ ನಡಿದಿತ್ತೆಂದು ನಾವು ಊಹಿಸಬಹುದಾಗಿದೆ.

(೨) ತುಳಸಿಯ ಗಿಡವ ಮೆಲಲಾರದೆ ಕಿಪಿಯೊಳಗಿಕ್ಕಿದೆ. ಕಲಸಿದ ನಾಮಕ್ಕೆ ಹಣೆಯು ಕಾಣದೆ ಎದೆಯೊಳಗಿಕ್ಕಿದೆ. ತಾವರೆ ಮಣಿಯು ತಾನಡಿಸೂದಕ್ಕೆ ಠಾವ ಕಾಣದೆ ಡಾವರಿಸುತ್ತಿದ್ದೆನಯ್ಯ, ಇದಕಿನ್ನಾವುದು ಹದನಯ್ಯ? ಎನ್ನ ನಿಮ್ಮ ದಾಸೋಹದ ದಾಸನ ಮಾಡಿರಿಸಯ್ಯ? ನಿಮ್ಮ ಧರ್ಮವಯ್ಯ ನಾರಾಯಣ ಪ್ರಿಯ ರಾಮನಾಥಾ.

ಗುಪ್ತ ಮಂಚಣ್ಣನು ತನ್ನ ಮೊದಲಿನ ವೈಷ್ಣವ ಧರ್ಮವನ್ನು ಬಿಟ್ಟು ಇಷ್ಟ ಪ್ರಾಣ ಭಾವಲಿಂಗಗಳನ್ನು ಅಳವಡಿಸಿಕೊಂಡ ಬಳಿಕ ಅವನು ರಚಿಸಿದ ವಚನವು ಇದಾಗಿರಬಹುದೆಂದು ತೋರುತ್ತದೆ. ಇದರ ಮೊದಲಿನ ವಾಕ್ಯದಲ್ಲಿ ತಾನು ಗುರುಮಂತ್ರವನ್ನು ಹೊಂದಿದ್ದನ್ನು ಹೇಳುತ್ತಾನೆ. ಆಮೇಲೆ ಪ್ರಾಣಲಿಂಗವನ್ನು ಆಮೇಲೆ ಭಾವಲಿಂಗವನ್ನು ಹೊಂದಿ ತುಳಸಿಯ ಮಾಲೆ ಹಣೆಗೆ ಹಚ್ಚುವ ನಾಮ ಮತ್ತು ತಾವರೆಯ ಮಣಿಗಳನ್ನು ಆಯಾ ಲಿಂಗಗಳ ಸ್ವರೂಪ ಮಾಡಿದನೆಂದು ಹೇಳುತ್ತಾನೆ.

ಕೆಳಗಿನ ವಚನದಲ್ಲಿ ಅವನು ತನ್ನ ಗುಪ್ತ ಭಕ್ತಿಯನ್ನೂ ತಾನು ಕೊಟ್ಟುಕೊಂಡ ವೈಷ್ಣವ ವೇಷವನ್ನೂ ಪರಸ್ಪರ ತುಲನೆಮಾಡಿ ಭಕ್ತಿಯು ತನ್ನಲ್ಲಿ ಇಲ್ಲ ಎಂದು ಹೇಳಿಕೊಳ್ಳುತ್ತಾನೆ.

(೩) ನಾನು ವಿಶ್ವಾಸಿಯಾದೊಡೆ ಗುಪ್ತಭಕ್ತಿಯ ಮಾಡಲೇಬೇಕು? ಆನು ವಿಶ್ವಾಸಿಯಾದೊಡೆ ಹರಿಭಕ್ತಿಯನಿದಿರಿಂಗೆ ತೊಟ್ಟು ಹರನ ಹರಣದಲ್ಲಿರಿಸಿಹೆನೆಂಬ ಸಂದೇಹವೇತಕ್ಕೆ? ಎನ್ನ ವಿಶ್ವಾಸವನಿದಿರರಿತರೆ ಅಸುವ ಹೊಸೆದಿಹೆನೆಂಬ ಋಷಿಯ ಮಾತಿನ ಗಸಣಿ ಏತಕ್ಕೆ? ಎನ್ನ ವೇಷವು ಹುಸಿ, ನಿಮ್ಮನರದಿಹೆನೆಂಬ ವಿಶ್ವಾಸವು ಹುಸಿ, ನಿಮ್ಮ ಭಕ್ತಿಯ ದಾಸೋಹದ ದಾಸನೆಂಬುದು ಹುಸಿಯಯ್ಯ ನಾರಾಯಣ ಪ್ರಿಯ ರಾಮನಾಥಾ.

# ಅಂಬಿಗರ
# ಚೌಡಯ್ಯನ ವಚನಗಳು.

---

## ೧. ದೇವರ ಸ್ವರೂಪ.

**ವಿವರಣೆಃ—** ದೇವರ ಸಂಬಂಧವಾಗಿ ಇದ್ದ ವಿಚಾರಗಳ ಮೇಲೆ ಧರ್ಮದ ಸ್ವರೂಪ ಅವಲಂಬಿಸಿರುತ್ತದೆ. ಹಿಂದೂ ಧರ್ಮದಲ್ಲಿ ಕಾಲಕಾಲಕ್ಕೆ ಅನೇಕ ಮತಗಳೂ, ಸಿದ್ಧಾಂತಗಳೂ ಉಂಟಾಗಿವೆ. ಅವು ಉಂಟಾಗಲಿಕ್ಕೆ ದೇವರ ಸ್ವರೂಪದ ವಿಷಯದಲ್ಲಿ ಇರುವ ಭಿನ್ನಾಭಿಪ್ರಾಯಗಳೇ ಮುಖ್ಯ ಕಾರಣ ವಾಗಿವೆಂದು ಹೇಳಬಹುದು. ವೇದಕಾಲದಲ್ಲಿ ಆರ್ಯರು ಸೃಷ್ಟಿಯಲ್ಲಿ ಕಂಡು ಬರುವ ಚಮತ್ಕಾರಗಳನ್ನು ನೋಡಿ ನೈಸರ್ಗಿಕ ಶಕ್ತಿಗಳೇ ದೇವರೆಂದು ಭಾವಿಸಿದರು. ಆದ್ದರಿಂದ ಋಕ್ಕುಗಳಲ್ಲಿ ಪರ್ಜನ್ಯ, ಅಗ್ನಿ, ವಾಯು, ವರುಣ, ಸೂರ್ಯ ಮೊದಲಾದವುಗಳ ಸ್ತೋತ್ರಗಳಿರುತ್ತವೆ. ಆದರೆ ಈ ವಿಚಾರಗಳು ಮುಂದೆ ಬರಬರುತ್ತ ಬದಲಾಗುತ್ತಹೋಗಿ ಉಪನಿಷತ್ತಿನ ಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ, ಮತ್ತು ಅವನು ಚರಾಚರ ವಸ್ತುಗಳಲ್ಲಿ ತುಂಬಿಕೊಂಡಿ ರುತ್ತಾನೆ, ಎಂಬ ವಿಚಾರಗಳು ಹೊರಬೀಳಹತ್ತಿದವು. ಆಗ್ಗೆ ಹಿಂದೂ ಧರ್ಮದ ಸ್ವರೂಪದಲ್ಲಿ ಬದಲಾವಣೆಯಾಯಿತು. ಮತ್ತು ಮುಂದೆ ಈ ಸ್ವರೂಪ ಪೌರಾಣಿಕ ಕಾಲದಲ್ಲಿ ಮತ್ತಿಷ್ಟು ಬದಲಾಗಿ ಬ್ರಹ್ಮ, ವಿಷ್ಣು, ಶಿವ, ಪಾರ್ವತಿ, ಲಕ್ಷ್ಮೀ ಎಂಬ ಮೊದಲಾದ ಅನೇಕ ದೇವತೆಗಳು ಪ್ರಾದುರ್ಭಾವ ಹೊಂದಿದವು. ಆಗ ಅವುಗಳ ಬಗ್ಗೆ ಅನೇಕ ದಂತ ಕಥೆಗಳು ಉತ್ಪನ್ನವಾ ದವು. ಈ ಕಥೆಗಳಿಗನುಸರಿಸಿ ಆಯಾ ದೇವತೆಗಳ ನಾನಾಬಗೆಯ ಆರಾಧ ನೆಗಳೂ ಪ್ರಾರಂಭವಾದವು. ಹೀಗೆ ದೇವರ ಸಂಬಂಧದ ವಿಚಾರಗಳಲ್ಲಿ ಹೆಚ್ಚುಕಡಿಮೆಯಾದಹಾಗೆ ಮೋಕ್ಷದ ಕಲ್ಪನೆಯೂ ಆಚಾರ ವಿಚಾರಗಳ ಪದ್ಧತಿಗಳೂ ಬದಲಾಗುವದು ತೋರಿಬರುತ್ತದೆ. ಆದರೆ ವೀರಶೈವರಲ್ಲಿರುವ ದೇವರ ಸಂಬಂಧದ ವಿಚಾರಗಳು ಉಪನಿಷತ್ತಿನ ಕಾಲದ ವಿಚಾರಗಳಿಗೆ ಬಹಳ ಹೋಲುತ್ತವೆ. ಅವರು ಪರಮಾತ್ಮನು ಒಬ್ಬನೇ ಇದ್ದಾನೆ, ಅವನು ವಿಶ್ವ ದಲ್ಲೆಲ್ಲ ಭರಿತನಾಗಿದ್ದಾನೆ ಎಂದು ಭಾವಿಸಿರುವರು. ಈ ವಿಚಾರಗಳನ್ನೇ

ವಚನಕಾರರು ಯಾವಾಗಲೂ ಸಮರ್ಥಿಸುತ್ತ ಬಂದಿದ್ದಾರೆ. ಅಂಬಿಗರ ಚೌಡಯ್ಯನಾದರೂ ಹೀಗೆಯೇ ತನ್ನ ವಚನದಲ್ಲಿ ಹೇಳಿರುವನು. ಅವನು ಅನ್ನುವದೇನಂದರೆ—

೧. **ವಚನ:**— ಗಂಧನ ವಾಯುವ ಕೊಂಬಾಗ ಅದ ತಂದು ಊದಿದವರಾರು? ಮರಕ್ಕೆ ಸುಗಂಧ ನಿಂದಾಗ ಅದ ಬಂಧಿಸಿ ತಂದು ಇರಿಸಿದವರಾರು? ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜವೇ ತಾವಾಗಿ ಬೇರೊಂದು ಸಂಧಿಸಲಿಲ್ಲೆಂದಾತ ತಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಜಗತ್ತಿನಲ್ಲಿ ಅನೇಕ ಸೃಷ್ಟಿ, ಚಮತ್ಕಾರಗಳು ಕಂಡುಬರುತ್ತವೆ. ಈ ಚಮತ್ಕಾರಗಳಲ್ಲಿ ವಾಡಿಕೆಯಾಗಿ ಕಂಡುಬರುವಂಥ ಕೆಲವುಗಳನ್ನು ಅಂಬಿಗರ ಚೌಡಯ್ಯನು ಇಲ್ಲಿ ವಿವರಿಸಿ ದೇವರ ಸಂಬಂಧದ ತನ್ನ ವಿಚಾರಗಳನ್ನು ಹೊರಗೆಡವಿರುವನು. ಅವನು ಅನ್ನುವದೇನಂದರೆ, ಸುಗಂಧದಿಂದ ಕೂಡಿಕೊಂಡು ವಾಯುವು ಬೀಸುತ್ತದೆ. ಎಂದರೆ, ಈ ಸುಗಂಧವನ್ನು ಒಳಕೊಳ್ಳುವ ಗುಣವು ಆ ವಾಯುವಿನಲ್ಲಿ ಇದೆ. ಹಾಗೆಯೇ ಮರದಲ್ಲಿಯೂ ಈ ಸುಗಂಧವು ಉಂಟು. ಎಂದರೆ ಈ ಗುಣವು ಅದರಲ್ಲಿ ಸ್ವಾಭಾವಿಕವಾಗಿಯೇ ತಲೆದೋರಿರುತ್ತದೆ. ಹೀಗೆ ಜಗತ್ತಿನಲ್ಲಿ ಅನೇಕ ಬಗೆಯ ಗುಣಗಳು ಮತ್ತು ವ್ಯಾಪಾರಗಳು ತೋರಿಬರುತ್ತವೆ. ಇವುಗಳು ಹೇಗೆ ಉತ್ಪನ್ನವಾಗುತ್ತವೆಂಬವನ್ನು ಕುರಿತು ಅಂಬಿಗರ ಚೌಡಯ್ಯನು ಇಲ್ಲಿ ಆಲೋಚಿಸಿ ಅಭಿಪ್ರಾಯಪಡುವದೇನಂದರೆ, "ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜ"ವೆಂತಲೂ ಆ "ನಿಜವೇ ತಾವಾಗಿ " ವ್ಯವಹರಿಸುತ್ತವೆಂತಲೂ, ಇದರಲ್ಲಿ " ಬೇರೊಂದು ಸಂಧಿಸಲಿಲ್ಲ" ವೆಂತಲೂ ಅನ್ನುತ್ತಾನೆ. ಇದರಿಂದ ವಚನಕಾರನ ಭಾವವು ಕಂಡು ಬರುವದೇನೆಂದರೆ, ಲಿಂಗವು ಜಗತ್ತಿನಲ್ಲೆಲ್ಲ ತುಂಬಿಕೊಂಡಿದ್ದು ಅದರ ಕಳೆಯೇ ಆ ಪದಾರ್ಥಗಳ ನಿಜತ್ವವೆಂದು ತಿಳಿಯತಕ್ಕದ್ದು. ಎಂದರೆ ಆ ಪದಾರ್ಥಗಳ ನಿಜವಾದ ಸ್ವರೂಪು ಲಿಂಗವೇ ಎಂದು ಅವನ ಭಾವವು. ಮತ್ತು ಈ ನಿಜವೇ ಆ ಪದಾರ್ಥಗಳ ವ್ಯಾಪಾರಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಈ ನಿಜವೇ ತಾನಾಗಿ ಆ ಪದಾರ್ಥದಲ್ಲಿ ವ್ಯವಹರಿಸುತ್ತದೆಂದು ಹೇಳಿರುವನು. ಈ ಪ್ರಕಾರ ಪದಾರ್ಥಗಳ ಸ್ಥಿತಿಗೆ ಲಿಂಗತತ್ವವು ಕಾರಣವೇ ಹೊರ್ತು ಉಳಿದವು ಯಾವವೂ ಕಾರಣವಲ್ಲವೆಂದು ವಚನಕಾರನ ಮುಖ್ಯ ಭಾವವಾಗಿದೆ.

ಎಂದರೆ ಪರಮಾತ್ಮನು ಜಗತ್ತಿನಲ್ಲೆಲ್ಲ ತುಂಬಿಕೊಂಡಿರುವನು. ಜಗತ್ತಿನಲ್ಲಿ ಕಂಡುಬರುವ ವ್ಯಾಪಾರಗಳಿಗೆ ಅವನೇ ಕಾರಣನು, ಅವನಿಂದಲೇ ಅವು ನಡಿಯುತ್ತವೆ. ಮತ್ತು ಪರಮಾತ್ಮನಾದರೂ ಅವುಗಳಲ್ಲಿ ಬೆರೆದು ವ್ಯವಹರಿಸುತ್ತಾನೆ ಎಂಬ ಭಾವವನ್ನು ವ್ಯಕ್ತಪಡಿಸಿದ್ದಾನೆ.

೨. **ವಚನಃ—** ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನೆ ಇದ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದು ಇಲ್ಲವೆಂದನಂಬಿಗ ಚೌಡಯ್ಯ.

**ಭಾವ:—** ಈ ವಚನದಲ್ಲಿ ಅಂಬಿಗರ ಚೌಡಯ್ಯನು ಶಿವ, ಪಾರ್ವತಿ ಮೊದಲಾದ ದೇವತೆಗಳನ್ನು ನಿರಾಕರಿಸಿರುವನು. ವೀರಶೈವರು ತಾವು ಶಿವನನ್ನು ಮಾತ್ರ ಪೂಜಿಸುವವರೆಂದು ತಿಳಿಯುವದುಂಟು. ಮತ್ತು ಶಿವನು ರುಂಡಮಾಲಾಧರನು, ತ್ರಿಶೂಲಧರನು, ಡಮರುಗವುಳ್ಳವನು, ಬ್ರಹ್ಮಕಪಾಲವನ್ನು ಧರಿಸಿದವನು, ಭಸ್ಮಭೂಷಿತನು, ವೃಷಭವಾಹನನು, ಪಾರ್ವತೀಪತಿಯು ಎಂದು ಮೊದಲಾಗಿ ಹೇಳುವದುಂಟು. ಆದರೆ ಈ ವಿಚಾರಗಳನ್ನೆಲ್ಲ ಅಂಬಿಗರ ಚೌಡಯ್ಯನು ಅಲ್ಲಗಳೆದಿರುವನು. ಅಂಬಿಗರ ಚೌಡಯ್ಯನು ಈ ಬಗೆಯ ವಿಚಾರಗಳು ಸಂಸಾರಿಕರಿಗೆ ಮಾತ್ರ ಯೋಗ್ಯವಾದವುಗಳಿದ್ದು, ಸಂಸಾರಕ್ಕೆ ದೂರವಾಗಿರುವ ಪರಮಾತ್ಮನಿಗೆ ಇಂಥ ಸಂಗತಿಗಳನ್ನು ಸಂಬಂಧಿಸುವದು ಯೋಗ್ಯವಲ್ಲವೆಂದು ಅವನ ಅಭಿಪ್ರಾಯವು. ಪರಮಾತ್ಮನಲ್ಲಿ ಸಂಸಾರದ ಕುರುಹು ಏನೂ ಇಲ್ಲ. ಮತ್ತು ಅವನು ನಾಮರೂಪಕ್ಕೆ ಹೊರತಾಗಿರುವನೆಂದು ಅವನು ಈ ವಚನದಲ್ಲಿ ಹೇಳಿರುವನು. ಈ ಬಗೆಯ ವಿಚಾರಗಳನ್ನು ವಚನಕಾರರೆಲ್ಲರೂ ತಮ್ಮ ವಚನಗಳಲ್ಲಿ ಹೇಳಿರುತ್ತಾರೆ.

೩. **ವಚನಃ—** ಅಂಗದೊಳಗಿಪ್ಪುದು ಲಿಂಗವಲ್ಲ. ಅಂಗದ ಹೊರಗಿಪ್ಪುದು ಲಿಂಗವಲ್ಲ. ಎಲ್ಲ ಅಂಗಂಗಳನೊಳಕೊಂಡಿಪ್ಪ ಲಿಂಗ ಹೋಗುತ್ತ ಬರುತ್ತಿಹುದಲ್ಲ. ಚಲನೆ ಇಲ್ಲದ ಅಚಲವಪ್ಪ ಲಿಂಗಕ್ಕೆ ಬಂದಿತ್ತು. ಹೋಯಿತ್ತು ಎಂಬ ಸಂದೇಹವಿಲ್ಲವೆಂದನಂಬಿಗಚೌಡಯ್ಯ.

**ಭಾವಃ—** ಅನೇಕರು ಲಿಂಗವು ಎಂದರೆ ಪರಮಾತ್ಮನು ಇವನು ಇಂಥ ಒಂದು ಸ್ಥಳದಲ್ಲಿ ಇರುವನು ಮತ್ತು ಇಂಥ ಒಂದು ಸ್ಥಳದಲ್ಲಿ ಇರುವದಿಲ್ಲ ಎಂದು ಭಾವಿಸುವದುಂಟು. ಇದು ತಪ್ಪೆಂದು ವಚನಕಾರನು ಇದರಲ್ಲಿ ಅಂದಿರುವನು.

ಲಿಂಗವು ಅಂಗದಲ್ಲಿ ಇರುತ್ತದೆಂದು ಭಾವಿಸಿದರೆ ಅದು ತಪ್ಪು. ಹಾಗೆಯೇ ಅದು ಅಂಗದ ಹೊರಗಿರುತ್ತೆಂದು ಭ ವಿಸಿದರೆ ಅದೂ ತಪ್ಪು. ಯಾಕಂದರೆ ಲಿಂಗವು ಅಂಗದ ಒಳಗೂ ಹೊರಗೂ ಕೂಡಿಯೇ ವ್ಯಾಪಿಸಿರುತ್ತದೆ. ಆದ್ದರಿಂದ ಲಿಂಗವು ಹೋಗುವದೂ ಇಲ್ಲ, ಬರುವದೂ ಇಲ್ಲ. ಅದಕ್ಕೆ ಚಲನೆ ಇಲ್ಲ, ಅಚಲವಾಗಿದೆ. ಯಾವ ವಸ್ತುವು ಯಾವತ್ತು ಸ್ಥಳದಲ್ಲಿ ನಿಬಿಡವಾಗಿ ತುಂಬಿಕೊಂಡಿರುತ್ತದೋ ಅಂಥ ವಸ್ತುವಿಗೆ ಹೋಗಲಿಕ್ಕೂ ಬರಲಿಕ್ಕೂ ಸ್ಥಳವು ಹೇಗೆ ದೊರಕಬಹುದು ? ಇದು ಅಶಕ್ಯವೆಂದು ವಚನಕಾರನು ಇಲ್ಲಿ ಅಂದಿರುವನು ಪರಮಾತ್ಮನು ವಿಶ್ವದಲ್ಲೆಲ್ಲ ಭರಿತನಾಗಿರುತ್ತಾನೆಂದು ಹೇಳುವದೇ ಅವನ ಮುಖ್ಯ ಭಾವವಾಗಿದೆ.

**ವಚನಃ—೪.** ಅಗ್ನಿ ದಿಟವೆಂದೊಡೆ ತಾ ಹುಸಿ ಕಾಷ್ಠವಿಲ್ಲದೆ. ಕಾಷ್ಠದಲ್ಲಡಗಿ ಸುಡದಿಪ್ಪ ಭೇದವನರಿತಡೆ ಪ್ರಾಣಲಿಂಗಿ ಎಂದೆಂಬೆನೆಂದನಂಬಿಗ ಚೌಡಯ್ಯ.

**ಭಾವಃ—** ವಚನಕಾರನು ಈ ವಚನದಲ್ಲಿ ಪರಮಾತ್ಮನಿಗೂ ಪದಾರ್ಥಗಳಿಗೂ ಇರುವ ಸಂಬಂಧವನ್ನು ನಿರ್ದೇಶಿಸಿರುವನು. ಅವನು ಅನ್ನುವದೇನೆಂದರೆ ಪರಮಾತ್ಮನು ಜಗತ್ತಿನಲ್ಲಿ ತುಂಬಿಕೊಂಡಿರುವದೇನೋ ನಿಜವು. ಆದರೆ ಅವನು ಅದರಲ್ಲಿ ಪ್ರಕಟವಾಗಿರದೆ, ಗುಪ್ತರೀತಿಯಿಂದ ತನ್ನನ್ನು ತೋರಿಸಿಕೊಳ್ಳದೆ ವಾಸಿಸುತ್ತಾನೆಂಬದನ್ನು ಅವನು ಒಂದು ದೃಷ್ಟಾಂತದ ಮೂಲಕ ಹೇಳಿರುವನು. ಜಗತ್ತು ಮತ್ತು ಪರಮಾತ್ಮ ಇವು ಒಂದನ್ನೊಂದು ಬಿಟ್ಟಿರಲಾರವು. ಅಂಗವಿಲ್ಲದೆ ಲಿಂಗವಿಲ್ಲ, ಲಿಂಗವಿಲ್ಲದೆ ಅಂಗವಿಲ್ಲವೆಂದು ವೀರಶೈವರ ತತ್ವವಿದೆ. ಅಗ್ನಿಯ ಅಸ್ತಿತ್ವವು ನಿಃಸಂದೇಹವು. ಆದರೆ ಅದು ಕಾಷ್ಠವಿಲ್ಲದೆ ಪ್ರಕಟವಾಗದು. ಹಾಗೆಯೇ ಪರಮಾತ್ಮನಿರುವದೇನೋ ನಿಜವು. ಆದರೆ ಆತನು ಅಂಗವಿಲ್ಲದೆ ತೋರಲಾರನು. ಅವನು ಅದರಲ್ಲಿ ಹೇಗೆ ಹುದುಗಿಕೊಂಡು ಗುಪ್ತವಾಗಿ ವಾಸಿಸುತ್ತಾನೋ ಹಾಗೆಯೇ ಪರಮಾತ್ಮನು ಜಗತ್ತಿನಲ್ಲಿ ತನ್ನನ್ನು ಕಾಣಿಸಿಕೊಳ್ಳದೆ ವಾಸಿಸುತ್ತಾನೆಂದು ಈ ವಚನದ ತಾತ್ಪರ್ಯವು.

೫. **ವಚನಃ—** ಅಡವಿಯೊಳಗರಸುವಡೆ ಸಿಡಿಗಂಟೆ ತಾನಲ್ಲ. ಮಡುವಿನೊಳಗರಸುವಡೆ ಮತ್ಸ್ಯಮಂಡುಕನಲ್ಲ. ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ. ಅಷ್ಟತನುವಿನೊಳಗೆ ಹುದಗಿರ್ಪ ಲಿಂಗವ ನಿಲುಕಿ ನೋಡಿಯೇ ಕಂಡನಂಬಿಗ ಚೌಡಯ್ಯ.

**ಭಾವಃ**— ವಚನಕಾರನು ಲಿಂಗದ ಸ್ಥಿತಿಯನ್ನು ಹಿಂದಿನ ವಚನಗಳಲ್ಲಿ ವಿವರಿಸಿ, ಅವನನ್ನು ಎಲ್ಲಿ ಹುಡುಕಬೇಕೆಂಬುದನ್ನು ಮೇಲಿನ ವಚನದಲ್ಲಿ ಹೇಳಿರುವನು ಅನೇಕರು ಪರಮಾತ್ಮನು ಅಡವಿಯಲ್ಲಿರುತ್ತಾನೆಂದು ಭಾವಿಸಿ ಅಲ್ಲಿಗೆ ಹೋಗುವದುಂಟು. ಆದರೆ ಅಡವಿಯಲ್ಲಿ ಸಿಡಿಗಂಟೆ ಮೊದಲಾದ ವನಸ್ಪತಿಗಳನ್ನು ಮಾತ್ರ ಕಾಣಬಹುದು. ಆದರೆ ಅಲ್ಲಿ ಪರಮಾತ್ಮನು ಕಾಣಲಾರನು. ಅನೇಕರು ಪರಮಾತ್ಮನನ್ನು ಕಾಣಬೇಕೆಂದು ಹಳ್ಳ, ಕೊಳ್ಳ, ಕೆರೆ, ತೊರೆ. ತೀರ್ಥ ಯಾತ್ರೆಗಳಿಗೆ ಹೋಗುವದುಂಟು ಆದರೆ ಈ ಕೆರೆತೊರೆಗಳಲ್ಲಿ ಮೀನು ಕಪ್ಪೆಗಳು ಕಾಣಬಹುದೇ ಹೊರ್ತು ಪರಮಾತ್ಮನು ಅಲ್ಲಿ ಕಾಣಲಾರನು. ಇನ್ನು ಅನೇಕರು ತಮ್ಮ ದೇಹದ ದಂಡನೆಯನ್ನು ಮಾಡಿದ್ದಾದರೆ ಪರಮಾತ್ಮನು ಕಾಣುವನೆಂದು ತಿಳಿಯುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಸಾಹುಕಾರರು ಸಾಲಿಗರನ್ನು ಹಿಡಿದು ಅವರನ್ನು ಶಿಕ್ಷಿಸಿ ಧನವನ್ನು ವಸೂಲು ಮಾಡಿಕೊಳ್ಳಬಹುದು. ಆದರೆ ಹೀಗೆ ದೇಹದಂಡನೆ ಮಾಡಿದ್ದಾದರೆ ಪರಮಾತ್ಮನು ಸಿಕ್ಕಲಾರನು. ಪರಮಾತ್ಮನು ಬೇರೆ ಇಂಥ ವಿಶಿಷ್ಟ ಸ್ಥಾನದಲ್ಲಿ ಎಲ್ಲಿಯೂ ಇಲ್ಲ. ಆದರೆ ಅವನು ಅಷ್ಟತನುವಿನಲ್ಲಿಯೇ ಇದ್ದಾನೆ. ಅವನು ತನ್ನ ಶರೀರದಲ್ಲಿಯೇ ವಾಸವಾಗಿದ್ದಾನೆ. ಇಲ್ಲಿಯೇ ಲಿಂಗವು ಹುದುಗಿರ್ದು ಆ ಲಿಂಗವನ್ನು ಇದರಲ್ಲಿ ಇಣಿಕಿ ಹಾಕಿ ನೋಡುತ್ತೇನೆಂದು ವಚನಕಾರನು ಚೇಷ್ಟೆಯಿಂದ ಅಂದಿರುವನು.

೬. **ವಚನಃ**— ಮನದಲ್ಲಿ ನೆನೆಯೆ. ವಚನಕ್ಕೆ ತಾರೆ. ಪಾಷಾಣವ ಪೂಜಿಸೆ. ಹೊಡೆಹೊಂಟು ಬೇರುಮಾಡೆ. ತಾಯ ಬಸುರೊಳಗಿರ್ದು ಕಾಲ ನಿಡುವ ಬುದ್ಧಿ ಕೊಡದು, ಕೊಡದೆಂದನಂಬಿಗರ ಚೌಡಯ್ಯ.

**ಭಾವಃ**— ವಚನಕಾರನು ಪರಮಾತ್ಮನನ್ನು ತನ್ನಲ್ಲಿ ಹೇಗೆ ಇಣಿಕಿ ನೋಡಬೇಕೆಂಬುದನ್ನು ಇದರಲ್ಲಿ ಸ್ವಲ್ಪ ನಿರ್ದೇಶಿಸಿರುವನು. ಅನೇಕರು ಪರಮಾತ್ಮನನ್ನು ಧ್ಯಾನಿಸಿ ಧ್ಯಾನಿಸಿ ಅವನನ್ನು ಕಾಣುವೆವೆಂದು ಸದಾ ಸ್ಮರಣೆಮಾಡುವದುಂಟು. ಇದು ತಪ್ಪೆಂದು ವಚನಕಾರನ ಅಭಿಪ್ರಾಯವು. ಆದ್ದರಿಂದ ನಾನು ಪರಮಾತ್ಮನನ್ನು ಧ್ಯಾನಿಸಲಾರೆನೆಂದು ಅವನು ಇದರಲ್ಲಿ ಅಂದಿರುವನು. ಅನೇಕರು ಪರಮಾತ್ಮನನ್ನು ಹೊಗಳಿ ಹೊಗಳಿ ಅವನ ಪ್ರೀತಿಯನ್ನು ಸಂಪಾದಿಸುವೆವೆಂದು ಭಾವಿಸಿರುವರು. ಇದೂ ತಪ್ಪಾದದ್ದು. ಬೇರೆ

ಅನೇಕರು ಅವನ ಮೂರ್ತಿಯನ್ನು ಮಾಡಿ ಅನೇಕ ರೀತಿಯಿಂದ ಪೂಜಿಸುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಹೀಗೆ ಪ್ರಯತ್ನಿಸುವದೆಂದರೆ ಪರಮಾತ್ಮನು ತನ್ನಿಂದ ಬೇರೆಯಾದ ಒಂದು ವಸ್ತುವಿವೆ ಎಂದು ತಿಳಿದು ಅವನನ್ನು ಹುಡುಕುವಂತೆಯೇ ಸರಿ. ಈ ರೀತಿಯಿಂದ ಪರಮಾತ್ಮನು ಸಿಕ್ಕಲಾರನೆಂದು ವಚನಕಾರನ ಭಾವವು. ಮನುಷ್ಯನು ಗರ್ಭಿಣೀ ಸ್ತ್ರೀಯಲ್ಲಿದ್ದ ಶಿಶುವಿನಂತೆ ಇದ್ದಾನೆಂದು ಅವನು ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿರುವನು. ಹೇಗೆ ಗರ್ಭಿಣೀಸ್ತ್ರೀಯು ತನ್ನ ರಕ್ತ ಮತ್ತು ಸಾಮರ್ಥ್ಯವನ್ನು ಕೊಟ್ಟು ಶಿಶುವನ್ನು ಸಂರಕ್ಷಿಸುತ್ತಾಳೋ ಹಾಗೆಯೇ ಮನುಷ್ಯನು ಪರಮಾತ್ಮನಲ್ಲಿದ್ದು ಅವನಿಂದ ರಕ್ಷಣೆಯನ್ನು ಹೊಂದುತ್ತಾನೆ. ಎಂದರೆ ಪರಮಾತ್ಮನ ಅಂಶದಿಂದಲೇ ಅವನು ಪೋಷಣೆ ಹೊಂದುತ್ತಾನೆ. ಆದ್ದರಿಂದ ನಾನು ಸ್ವತಂತ್ರನು, ನಾನು ಪರಮಾತ್ಮನ ಸಂಬಂಧವನ್ನು ಬಿಟ್ಟುಕೊಟ್ಟು ಸಂಚರಿಸುವೆನು ಎಂದು ಹೇಳಿದ್ದಾದರೆ ಅವನು ಗತಿಗೆ ಮುಟ್ಟಲಾರನು. ಈ ಸಂಗತಿಯನ್ನು ಅಂಬಿಗರಚೌಡಯ್ಯನು ಇದರಲ್ಲಿ ಹೇಳಿ, ಹಾಗೆ ಮಾಡಕೂಡದೆಂದು ಉಪದೇಶಿಸಿರುವನು.

## ೨. ದೇವರು ಒಬ್ಬನೇ ಇದ್ದಾನೆ.

**ವಿವರಣೆ:—** ವೀರಶೈವರಲ್ಲಿ ಮೇಲೆ ಹೇಳಿದಂತೆ ದೇವರ ಸಂಬಂಧವಾಗಿ ವಿಚಾರಗಳಿರುವದರಿಂದ ಅವರು ದೇವರು ಒಬ್ಬನೇ ಇದ್ದಾನೆ ಎಂದು ಅಭಿಪ್ರಾಯಪಡುತ್ತಾರೆ.

**ವಚನ:—** ನಾಲ್ಕು ವೇದವನೋದಿದಂತವರ ಮನೆಯ ಬೋನವ ಶಿವಭಕ್ತರ ಮನೆಯಲ್ಲಿರುವ ನಾಯಿ ಮೂಸಿ ನೋಡಲಾಗದು. ಸಾಮವೇದಿ ಹೋಗುತ್ತಿರಲು ಶ್ವಪಚಯ್ಯಗಳು ತಮ್ಮ ಪಾದುಕೆಯಿಂದೆ ಪಾಕವ ಮುಚ್ಚಿದರು. "ಶ್ವಾನೋ ಶ್ರೇಷ್ಠ" ವೆಂದು ಇಕ್ಕಿದೆನು ಮುಂಡಿಗೆಯ. ಎತ್ತಿರೋ ಸಂತೆಯ ಸೂಳೆಯ ಮಕ್ಕಳು. ಜಗಕ್ಕೆ ಪಿತನೊಬ್ಬನಲ್ಲದೆ ಇಬ್ಬರೆಂದು ಬೊಗಳುವರ ಮೋರೆಯ ಮೇಲೆ ಹೊಡೆ ಎಂದಾತ ನಮ್ಮ ಅಂಬಿಗರಚೌಡಯ್ಯ ನಿಜಶರಣನು.

**ಭಾವ:—** ದೇವರು ಒಬ್ಬನೇ ಇದ್ದದ್ದರಿಂದ ಜಗಕ್ಕೆಲ್ಲ ಒಬ್ಬನೇ ಕರ್ತಾರನು, ಇಬ್ಬರಿದ್ದಾರೆಂದು ಭಾವಿಸಿಕೂಡದೆಂದು ಇಲ್ಲಿ ವಚನಕಾರನು ಹೇಳಿರುವನು. ವೇದಗಳು ಅನೇಕ ದೇವತೆಗಳನ್ನು ಪೂಜಿಸಬೇಕೆಂದು ನುಡಿ

ಯುವದರಿಂದ ಅವುಗಳನ್ನು ಇಲ್ಲಿ ವಚನಕಾರನು ತಿರಸ್ಕರಿಸಿ ನುಡಿದಿರುವನು. ಆದ್ದರಿಂದ ಒಬ್ಬ ಪರಮಾತ್ಮನನ್ನು ನಂಬಿದವರೇ ಶ್ರೇಷ್ಠರೆಂದು ಅವನು ಕೆಲವು ಶಿವಶರಣರ ಚರಿತ್ರೆಗಳನ್ನು ಉಲ್ಲೇಖಿಸಿರುವನು

**ವಚನ:**— ಕಲ್ಲದೇವರ ಪೂಜೆಮಾಡಿ ಕಲಿಯುಗದಿ ಕತ್ತೆಗಳಾಗಿ ಹುಟ್ಟಿದರು. ಮಣ್ಣದೇವರ ಪೂಜಿಸಿ ಮಾನಹೀನರಾದರು. ಮರನು ದೇವರೆಂದು ಪೂಜಿಸಿ ಮಣ್ಣ ಕೂಡಿದರು. ದೇವರ ಪೂಜಿಸಿ ಸ್ವರ್ಗಕ್ಕೇರದೆ ಹೋದರು. ಜಗದ್ಭರಿತವಾದ ಪರಶಿವನೊಳಗ ಕಿಂಕರನಾದ ಶಿವಭಕ್ತನೇ ಶ್ರೇಷ್ಠನೆಂದಾತ ನಮ್ಮ ಅಂಬಿಗರಚೌಡಯ್ಯ ನಿಜಶರಣನು.

**ಭಾವ:**— ಪರಮಾತ್ಮನು ಜಗದ್ಭರಿತನಾಗಿದ್ದಾನೆ. ಆದ್ದರಿಂದ ಇಂಥ ಪರಮಾತ್ಮನೊಬ್ಬನನ್ನೇ ನಂಬಬೇಕೇ ಹೊರ್ತು ಕಲ್ಲು, ಮಣ್ಣು, ಗಿಡ ಇವು ಗಳಿಂದ ಮೂರ್ತಿಗಳನ್ನು ಮಾಡಿ ಅವುಗಳತ್ನು ಪೂಜಿಸುವದು ಯೋಗ್ಯವಲ್ಲ. ಹೀಗೆ ಪೂಜಿಸುವವರಿಗೆ ಮೋಕ್ಷವಿಲ್ಲೆಂದು ವಚನಕಾರನ ಭಾವವು.

**ವಚನ:**— ಅರಳಿಯ ಮರ, ವಿಷ್ಣುಕಾಂತಿ, ಬನ್ನಿ, ಮುತ್ತ, ತುಳಸಿ ಎಂದು ಹೊಡೆಹೊಮ್ಮನಿರಿ. ಎಲ್ಲಿ ಭೋ, ಎಲ್ಲಿ ಭೋ. ನಿಮ್ಮ ನಡೆ ಎಲ್ಲ ಅನಾಚಾರ. ನಿಮ್ಮ ನುಡಿ ಎಲ್ಲ ಶಿವದ್ರೋಹ. ಇವಂದಿರ ಗಡಣ ಬೇಡೆಂದ ನಂಬಿಗಚೌಡಯ್ಯ.

**ಭಾವ:**—ಅನೇಕರು ಅರಳಿಯ ಮರ, ವಿಷ್ಣುಕಾಂತಿ, ಬನ್ನಿ, ಮುತ್ತುಗ, ತುಲಸಿ ಮುಂತಾದವುಗಳು ದೇವರೆಂದು ಭಾವಿಸಿ ನಮಸ್ಕಾರ ಮಾಡುವ ದುಂಟು. ಹೀಗೆ ಪೂಜಿಸುವಂಥವರಿಗೆ ದೇವತೆಗಳು ಗಿಡಮರಗಳೇ ಹೇಗೆ ಎಂದು ವಚನಕಾರನು ಹಾಸ್ಯದಿಂದ ನುಡಿದಿರುವನು. ಹೀಗೆ ಭಾವಿಸುವದು ಅನಾಚಾರ, ಪರಮಾತ್ಮನ ದ್ರೋಹವು. ಇಂಥವರ ಸ್ನೇಹ ಬೇಡವೆಂದು ವಚನಕಾರನು ನುಡಿದಿರುವನು.

೧೦. **ವಚನ:**— ಬ್ರಹ್ಮ, ವಿಷ್ಣು, ಕುಮಾರ, ಲೆಕ್ಕವಿಲ್ಲದ ರುದ್ರರು ನೋಡಾ. ದೇವರ್ಕಳೆಲ್ಲ ಸರ್ವದಲ್ಲೈದಿಹರು. ಅವರೆತ್ತ ಬಲ್ಲರು, ಶಿವನಾದಿಯಂತುವ ? ಶಾಶ್ವತ ಪದಕ್ಕೆ ಸಲ್ಲದ ಕಾರಣ ಇವರು ವೇಷಧಾರಿಗಳೆಂದಾತ ಅಂಬಿಗರ ಚೌಡಯ್ಯ.

**ಭಾವ:—** ವಿಷ್ಣು, ಬ್ರಹ್ಮ, ರುದ್ರಾದಿಗಳು ಕೇವಲ ವೇಷಧಾರಿಗಳೆಂದು ವಚನಕಾರನು ಅವರನ್ನು ಟೀಕಿಸಿದ್ದಾನೆ. ಅವರು ನಿಜವಾದ ದೇವರಲ್ಲ. ಒಂದು ವೇಳೆ ದೇವರಾಗಿದ್ದರೆ ಎಂದೆಂದಿಗೂ ಅಳಿಯದ ಪದದಲ್ಲಿ ಇರುತ್ತಿದ್ದರು. ಇಂಥ ಆ ಸ್ಥಿತಿಯು ಇವರಿಗಿಲ್ಲ. ಅವರು ಬರೀ ಅಹಂಕಾರಿಗಳಾಗಿ ತಾವು ದೇವರೆಂದು ಹೇಳಿಕೊಳ್ಳುತ್ತಾರೆಯೋ ಹೊರತು ಪರಮಾತ್ಮನ ಆದಿ ಮತ್ತು ಅಂತ್ಯವನ್ನು ಅರಿಯರು.

೧೧. **ವಚನ:—** ಆರುಹಿರಿಯರ ದೈವದ ಪರಿ ನೋಡಾ. ಹೊಲೆಯರ ಬೊಮ್ಮಗ ತೊಗೆ ತುಪ್ಪವ ಬೇಡುವಂತೆ ಬ್ರಹ್ಮಾವಿಷ್ಣುಗಳಿನ್ನು ಕಾಣರು. ವೇದಂಗಳು ನಾಚದೆ ಉಲಿವ ಪರಿ ನೋಡಾ ! ಗಂಗೆ ವಾಳುಕ ಸಮರುದ್ರರೆಲ್ಲರು ಲಿಂಗವ ಕಂಡರೈಸೆ ? ಸ್ವಯಂಭುವ ಕಾಣರೆಂದನಂಬಿಗ ಚೌಡಯ್ಯ.

**ಭಾವ:—** ಅಜ್ಞಾನಿಗಳಾಗಿರುವಂಥ ಜನರು ಭಾವಿಸುವ ದೇವರ ಪರಿಯನ್ನು ನೋಡಿದರೆ, ಅವು ಹೊಲೆಯರ ದೇವರಾದ ಬ್ರಹ್ಮನು ಬೇಳೆ ತುಪ್ಪವನ್ನು ತಿನ್ನಲಿಕ್ಕೆ ಬೇಡಿದಂತೆಯೇ ಸರಿ. ಎಂದರೆ ಆ ದೇವರು ಇಂಥ ಜನರ ಪರಿಸ್ಥಿತಿಗೆ ಅನುಸರಿಸಿ ಇರುತ್ತವೆಯೋ ಹೊರತು ಹೆಚ್ಚಿನದನ್ನು ಕಾಣಲಾರವು. ಬ್ರಹ್ಮ ವಿಷ್ಣುಗಳು ಸಹ ಪರಮಾತ್ಮನನ್ನು ಅರಿಯರು. ವೇದಗಳು ಸಹ ಪರಮಾತ್ಮನ ಸ್ತೋತ್ರ ಮಾಡಿ ಮಾಡಿ ಅವನನ್ನು ಕಾಣದೆ ಹೋದವು. ಇಂಥ ಮಹತ್ತರ ದೇವತೆಗಳಿಗೆ ಇಂಥ ಸ್ಥಿತಿಯಾದ ಬಳಿಕ ಗಂಗಾನದಿಯ ದಡದಲ್ಲಿರುವ ಉಸುಕಿನ ಕಣಗಳಷ್ಟು ಅಸಂಖ್ಯಾತರಾಗಿರುವ ರುದ್ರಗಣಂಗಳು ಲಿಂಗವನ್ನು ಕಾಣುವ ಬಗೆ ಹೇಗೆ ? ಇವರಾರಿಗೂ ಸ್ವಯಂಭೂ ಮೂರ್ತಿಯಾದ ಪರಮಾತ್ಮನು ಕಾಣಿಸಿಕೊಳ್ಳಲಾರನೆಂದು ಅಂಬಿಗರ ಚೌಡಯ್ಯನು ನುಡಿದಿರುವನು

೧೨ **ವಚನ:—** ತಡೆ ನೆಲೆ ಇಲ್ಲದ ಮಹಾ ನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟಡೆ, ಕಡೆಗಣಿಸಿ ಹಾಯಿಸುವೆ ಮಹಾ ಹೊಳೆಯ ನುಡಿ ಇಲ್ಲದ ನಿಸ್ಸಿಮ ಗ್ರಾಮದಲ್ಲಿರಿಸುವೆನೆಂದಾತನಂಬಿಗ ಚೌಡಯ್ಯ.

**ಭಾವ:—** ಈ ವಚನದಲ್ಲಿ ಅಂಬಿಗರಚೌಡಯ್ಯನು ತನ್ನ ಉದ್ಯೋಗವನ್ನು ಉಲ್ಲೇಖಿಸಿ ಆದರ ಉದಾಹರಣೆಯಿಂದ ಮನುಷ್ಯನು ಹೇಗೆ ಮೋಕ್ಷ

ಪದವನ್ನು ಹೊಂದಬೇಕೆಂಬದನ್ನು ಉಲ್ಲೇಖಿಸಿರುವನು. ಅವನು ಅನ್ನುವ ದೇನೆಂದರೆ, ಸಂಸಾರವೆಂಬುದೊಂದು ಮಹಾ ನದಿಯಂತೆ ಇರುತ್ತದೆ. ಇದರ ಪ್ರವಾಹವನ್ನು ದಾಟುವದು ದುಸ್ತರವು. ಯಾಕಂದರೆ ಇದಕ್ಕೆ ದಂಡೆಯೂ ಇಲ್ಲ ಮತ್ತು ಆಳವೆಷ್ಟಿದೆ ಎಂಬುದೂ ತಿಳಿಯಲು ಶಕ್ಯವಿಲ್ಲ. ಇಂಥ ನದಿಯೊಳಗಿಂದ ನಾನು ನಿಮ್ಮನ್ನು ದಾಟಿಸುವೆನೆಂದು ಇಲ್ಲಿ ಹೇಳಿರುವನು. ಇಂಥ ಮಹಾನದಿಯನ್ನು ದಾಟಿಸಲು ನನಗೆ ಹೇಗೆ ಶಕ್ಯವೆಂದರೆ ನನಗೆ ಒಡಲು ಎಂದರೆ ಸಂಸಾರವೆಂಬುದು ಇಲ್ಲ, ಆದ್ದರಿಂದ ತನಗೆ ಇದು ಶಕ್ಯವೆಂಬ ಭಾವವನ್ನು ತೋರಿಸಿರುವನು. ಎಂದರೆ ಯಾವನು ಸಂಸಾರವನ್ನು ಬಿಟ್ಟಿರುವನೋ ಅವನೇ ಈ ಮಹಾನದಿಯನ್ನು ದಾಟಲಿಕ್ಕೆ ಸಮರ್ಥನೆಂಬ ಭಾವವು. ಆದರೆ ತಾನು ಹೀಗಿದ್ದರೂ ಹೆರವರನ್ನು ದಾಟಿಸಬೇಕಾದರೆ ಅದಕ್ಕೊಂದು ಶರ್ತನ್ನು ಹಾಕಿರುವನು. ಏನೆಂದರೆ ಅತ್ತ ಇತ್ತ ಹರಿದಾಡುವ ನಿಮ್ಮ ಚಂಚಲ ಮನಸ್ಸನ್ನು ನನಗೆ ಕೂಲಿಯಾಗಿ ಕೊಟ್ಟು ನಿಮ್ಮ ದೇಹವನ್ನು ನನ್ನ ಕಡೆಗೆ ಒಪ್ಪಿಸಬೇಕು. ಎಂದರೆ ನಾನು ಈ ಮಹಾ ಹೊಳೆಯನ್ನು ದಾಟಿಸುವೆನೆಂದು ಹೇಳಿರುವನು. ಅಂದರೆ ದೃಢಮನಸ್ಸಿನವರೇ ಈ ಸಂಸಾರವನ್ನು ದಾಟುವರೆಂದು ಅವನ ಭಾವವು. ಈ ಪ್ರಕಾರ ವರ್ತಿಸಿದರೆ ಮೋಕ್ಷ ಪದವು ಲಭಿಸುವದು. ಈ ಮೋಕ್ಷಪದವು ನಡಿ ಇಲ್ಲದ ನಿಸ್ಸೀಮ ಗ್ರಾಮವೆಂದು ಅವನು ಇದರಲ್ಲಿ ವರ್ಣಿಸಿರುವನು. ಎಂದರೆ ಈ ಗ್ರಾಮಕ್ಕೆ ಸೀಮೆ ಎಂದರೆ ಮೇರೆಯು ಇಲ್ಲ. ಮತ್ತು ಅದು ವರ್ಣನೆಗೆ ಅಶಕ್ಯವಾಗಿರುವದು ಎಂದು ಹೇಳಿರುವನು

ಈ ಪ್ರಕಾರ ಅಂಬಿಗರ ಚೌಡಯ್ಯನು ಸಂಸಾರವು ಹೇಗೆ ಇರುತ್ತದೆ, ಇದನ್ನು ಹೇಗೆ ದಾಟಬೇಕು ಮತ್ತು ದಾಟಿ ಯಾವ ಸ್ಥಿತಿಗೆ ಹೋಗಬೇಕೆಂಬುದನ್ನು ಸ್ವಲ್ಪದರಲ್ಲಿ ವಿವರಿಸಿರುವನು.

---

## (೩) ಶುದ್ಧ ಮನಸ್ಸಿನವರಲ್ಲಿ ಪರಮಾತ್ಮನಿರುವನು.

(೩ **ವಚನ:**— ತಾನು ತನ್ನಿಚ್ಛೆಗೆ ಬಾಹಲ್ಲಿ ಪಿನಾಕಿ ಓಸರಿಸಿದನಯ್ಯ. ಮನವ ಕಟ್ಟಿ ಐದು ಭೂತವು ಸುಟ್ಟಡೆ ಎನ್ನಲ್ಲಿ ದೇವನುಂಟು, ಇಲ್ಲೆನಬೇಡ. ಮನದಲಾಯಲಾರದೆ, ತನು ಗಾಸಿಗೊಳಿಸಿದಲ್ಲಿ ಎನ್ನ ದೇವ ಇಲ್ಲೆಂದಾತನಂಬಿಗ ಚೌಡಯ್ಯ.

**ಭಾವಃ—** ಮನುಷ್ಯನು ಮನಬಂದಂತೆ ನಡೆದರೆ ದೇವರು ಅಲ್ಲಿರಲಾರನು. ಆದರೆ ಮನಸ್ಸನ್ನು ಗಟ್ಟಿಪಡಿಸಿದರೆ ಅಂದರೆ ಪಂಚಭೂತದಿಂದಾದ ದೇಹಧರ್ಮಗಳನ್ನು ಸುಟ್ಟರೆ, ಅಲ್ಲಿ ದೇವನಿರುವನು. ದೇವನನ್ನು ಮನಸ್ಸಿನಲ್ಲಿಯೇ ಹುಡುಕಬೇಕು. ಅದಕ್ಕೋಸ್ಕರ ಶರೀರವನ್ನು ಪೀಡಿಸಬಾರದು. ಪೀಡಿಸಿದಲ್ಲಿ ಅಲ್ಲಿ ದೇವರಿಲ್ಲ. ಹೀಗೆ ನಾನು ಹೊಂದಿದ ಸ್ಥಿತಿಯು ಉಂಟಾದಕೂಡಲೆ, ದೇವನು ಇದ್ದಾನೋ ಇಲ್ಲವೋ ಎಂಬ ಸಂಶಯವು ಅವನಲ್ಲಿ ಹೊರಟು ಹೋಗುವದು. ಆಗ ಅವನಿಗೆ ಪರಮಾತ್ಮನು ಕೈಸೆರೆ ಸಿಕ್ಕ ಹಾಗೆಯೇ ಆಗುವದು. ಮನಸ್ಸನ್ನು ಶುದ್ಧಪಡಿಸಿದರೆ ಪಿನಾಕಿಯನ್ನು ತನ್ನಲ್ಲಿಯೇ ಕಾಣಬಹುದೆಂಬ ಭಾವವು.

**೧೪. ವಚನಃ—** ವೇದದಲುಳ್ಳೊಡೆ ಪ್ರಾಣವಧೆಯುಪ್ಪುದೆ ? ಶಾಸ್ತ್ರದಲುಳ್ಳೊಡೆ ಸಮವಾಗದಿಪ್ಪುದೆ ? ಪರ್ವತದಲ್ಲಿ ಉಳ್ಳೊಡೆ ಹೋದವರು ಮರಳಿ ಬಪ್ಪರೇ ? ನಿರ್ಬುದ್ಧಿ ಮಾನವರನೇನೆಂಬೆನು ? ಮನ ವಚನ ಕಾಯ ದೇಹ ಶುದ್ಧರಾಗಿರ್ಪಾತನ ಹೃದಯದಲ್ಲಿ ನಿಮ್ಮ ಕಂಡೆನೆಂದ ಅಂಬಿಗರ ಚೌಡಯ್ಯ.

**ಭಾವ:—** ಪರಮಾತ್ಮನು ಮತ್ತೆಲ್ಲೆಲ್ಲಿಯೂ ಇಲ್ಲ ಯಾವನಲ್ಲಿ ಮನಸ್ಸು ವಚನ ಮತ್ತು ಕಾಯ ಇವುಗಳು ಶುದ್ಧವಾಗಿರುತ್ತವೋ ಅವನ ಹೃದಯದಲ್ಲಿಯೇ ಅವನು ಯಾವಾಗಲೂ ವಾಸಿಸುತ್ತಾನೆ. ಅನೇಕರು ಪರಮಾತ್ಮನು ವೇದದಲ್ಲಿ ಇರುತ್ತಾನೆಂದು ಹೇಳುತ್ತಾರೆ. ಇದು ತಪ್ಪು. ಒಂದು ವೇಳೆ ಹೀಗೆ ಇದ್ದರೆ, ಆ ವೇದವು ಪ್ರಾಣವಧೆಯನ್ನು ಹೇಳುತ್ತಿದ್ದಿಲ್ಲ. ಬೇರೆ ಅನೇಕರು ಪರಮಾತ್ಮನು ಶಾಸ್ತ್ರಗಳಲ್ಲಿ ಇದ್ದಾನೆಂದು ಹೇಳುತ್ತಾರೆ. ಇದೂ ತಪ್ಪು. ಒಂದು ವೇಳೆ ಅವುಗಳಲ್ಲಿ ಇದ್ದಿದ್ದಾದರೆ, ಅವುಗಳಲ್ಲಿ ವಿರೋಧ ಅಭಿಪ್ರಾಯಗಳು ಎಂದೂ ಇರುತ್ತಿದ್ದಿಲ್ಲ. ಅವು ಒಂದೇ ಮಾತನ್ನು ಹೇಳುತ್ತಿದ್ದವು. ಬೇರೆ ಕೆಲವರು ಪರಮಾತ್ಮನು ಶ್ರೀ ಪರ್ವತದಲ್ಲಿ ಇದ್ದಾನೆಂದು ಅನ್ನುತ್ತಾರೆ. ಇದೂ ತಪ್ಪು. ಯಾಕೆಂದರೆ ಪರ್ವತಕ್ಕೆ ಹೋದವರು ಮೋಕ್ಷವನ್ನು ಹೊಂದಿ ಅಲ್ಲಿಯೇ ಉಳಿಯತಕ್ಕದ್ದು. ಅವರು ತಿರುಗಿ ತಮ್ಮ ಮನೆಗೆ ಬರತಕ್ಕದ್ದಲ್ಲ. ಅದ್ದರಿಂದ ಅವಾವುಗಳಲ್ಲಿ ಪರಮಾತ್ಮನು ಇರುವದಿಲ್ಲ. ಆದರೆ ಅವನು ಶುದ್ಧ ಮನಸ್ಸಿನವರಲ್ಲಿ ಇರುತ್ತಾನೆ. ಪರಮಾತ್ಮನನ್ನು ಕಾಣಲು ಇದೇ ಹಾದಿಯು, ಎಂದು ವಚನಕಾರನ ಭಾವವು.

———

## ಪರಮಾತ್ಮನನ್ನು ಕಾಣುವ ರೀತಿ

**ವಿವರಣೆ** :— ವಚನಕಾರರು ಸ್ವರ್ಗ, ನರಕ, ಕೈಲಾಸ ಇಂಥವುಗಳು ಒಂದು ವಿಶಿಷ್ಟ ಸ್ಥಾನದಲ್ಲಿವೆ ಎಂದು ಭಾವಿಸುವದಿಲ್ಲ. ಇವೆಲ್ಲವೂ ಮನುಷ್ಯನ ದೇಹದಲ್ಲಿಯೇ ಇವೆ ಎಂದು ತಿಳಿಯುತ್ತಾರೆ. ಆದ್ದರಿಂದ ಮೋಕ್ಷವನ್ನು ಹೊಂದಲಿಕ್ಕೆ ಅನೇಕ ದೇಶಗಳಲ್ಲಿ ತೊಳಲಾಡುವ ಪ್ರಯೋಜನವಿಲ್ಲ. ಅದನ್ನು ತನ್ನಲ್ಲಿಯೇ ಸಂಪಾದಿಸಿಕೊಳ್ಳಬಹುದು. ಅಂಬಿಗರ ಚೌಡಯ್ಯನು ಹಿಂದಿನ ವಚನಗಳಲ್ಲಿ ಪರಮಾತ್ಮನು ಎಲ್ಲಿರುವನೆಂಬುದನ್ನು ವಿವರಿಸಿರುವನಷ್ಟೇ. ಈ ವಚನಗಳಿಂದ ಪರಮಾತ್ಮನು ತನ್ನಲ್ಲಿಯೇ ಇದ್ದಾನೇದು ಗೊತ್ತಾಗುತ್ತದೆ. ಆದ್ದರಿಂದ ತನ್ನನ್ನು ತಾನು ತಿಳಿಯುವದೇ ಮೋಕ್ಷವೆಂದು ಅವನ ಅಭಿಪ್ರಾಯವು. ಇವೇ ವಿಚಾರಗಳನ್ನು ಎಲ್ಲ ವಚನಕಾರರು ಮೇಲಿಂದ ಮೇಲೆ ಪ್ರತಿಪಾದಿಸುತ್ತಾರೆ. ಆದ್ದರಿಂದ ಮನುಷ್ಯನ ದೇಹವು ಸುಳ್ಳು, ಮಾಯೆಯುಳ್ಳದ್ದು, ತ್ಯಾಜ್ಯವು ಎಂಬ ವಿಚಾರಗಳು ವೀರಶೈವರಲ್ಲಿ ಇಲ್ಲ. ಅದು ಒಂದು ಶ್ರೇಷ್ಠ ವಸ್ತುವೆಂದು ಅವರು ತಿಳಿಯುತ್ತಾರೆ. ವಚನಕಾರರು ಅನ್ನುವದೇನಂದರೆ:—

ತನ್ನನ್ನು ತಾನು ಅರಿತಾಗಳೇ ಮೋಕ್ಷಪ್ರಾಪ್ತಿಯು. ಯಾವಾಗ್ಗೆ ಈ ಅರಿವೇ ತಾನು ಎಂಬ ಭಾವವು ಉತ್ಪನ್ನವಾಗುತ್ತದೋ ಆಗ್ಗೆಯೇ ಮನುಷ್ಯನು ಉಚ್ಚ ಸ್ಥಿತಿಯನ್ನು ಹೊಂದುತ್ತಾನೆ. ಈ ವಿಚಾರಗಳನ್ನು ಕೆಳಗಿನ ವಚನಗಳಲ್ಲಿಯೂ ಕಾಣಬಹುದು.

೧೫. **ವಚನ**: - ಈಶ್ವರನನ್ನು ಕಾಂಬುವುದೊಂದಾಸೆಯುಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು. ಕಾಶಿಯಲ್ಲಿ ಕಾಯವ ವಿನಾಶವ ಮಾಡಲು ಬೇಡ. ನಿನ್ನಲ್ಲಿ ನೀ ತಿಳಿದು ನೋಡಾ. ಜಗವು ನಿನ್ನೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ**:— ಇದರಲ್ಲಿ ವಚನಕಾರನು ಈಶ್ವರನನ್ನು ಹೇಗೆ ಕಾಣಬೇಕೆಂಬುದನ್ನು ವಿವರಿಸಿರುವನು. ಅವನು ಅನ್ನುವದೇನಂದರೆ, ನೀನು ಈಶ್ವರನನ್ನು ಕಾಣಬೇಕಾದರೆ ಅನೇಕ ದೇಶಗಳಿಗೆ ಹೋಗಿ ಕಷ್ಟಪಡಬೇಡ. ಅನೇಕರು ವಾರಣಾಸಿಗೆ ಹೋಗಿ ಗಂಗಾ ನದಿಯಲ್ಲಿ ಮುಳುಗಿ ಸತ್ತುಹೋದರೆ ಮೋಕ್ಷಪ್ರಾಪ್ತಿಯೆಂದು ಭಾವಿಸುತ್ತಾರೆ. ಹಾಗೆ ನೀನು ನಿನ್ನ ಶರೀರವನ್ನು

ನಾಶಮಾಡಬೇಡೆಂದು ಇಲ್ಲಿ ಹೇಳಿರುವನು. ಆದರೆ ನಿನ್ನಲ್ಲಿರುವ ನಿನ್ನನ್ನು ನೀ ತಿಳಿದು ನೋಡಿದರೆ ಮೋಕ್ಷವೆಂದು ಅವನು ಕೆಲವು ಶಬ್ದಗಳಲ್ಲಿಯೇ ಇದನ್ನು ಹೇಳಿರುವನು. ಮತ್ತು ಇದಕ್ಕೆ ಒಂದು ಕಾರಣವನ್ನೂ ಕೊಟ್ಟಿರುವನು. ಏನೆಂದರೆ ಜಗವೆಲ್ಲವು ನಿನ್ನ ಶರೀರದದಲ್ಲಿಯೇ ಇದೆ. ಜಗತ್ತು ತನ್ನ ಬಿಟ್ಟು ಬೇರೆ ಇರುವದಿಲ್ಲ. ಆದ್ದರಿಂದ ಅಲ್ಲಿಯೇ ಪರಮಾತ್ಮನನ್ನು ಹುಡುಕಬೇಕೆಂದು ಹೇಳಿರುವನು. ಬೇರೆ ಬೇರೆ ದೇಶಗಳಿಗೆ ಹೋಗಿ ಕಷ್ಟಪಡುವ ಅವಶ್ಯವಿಲ್ಲೆಂದು ಉಪದೇಶಿಸಿರುವನು.

೧೬. **ವಚನಃ—** ತನ್ನ ಮರೆದು ದೇವರ ಕಂಡಿಹೆನೆಂದೆಂಬರು. ತನ್ನುವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿಸುರ ಬ್ರಹ್ಮಾದಿಗಳೆಲ್ಲರೂ ತಲೆಕೆಳಗಾಗಿ ಹೋದರು. ಆ ದೇವರ ಮರೆದು ತನ್ನುವನರಿದರೆ ತಾನೇ ನಿಜವೆಂದನಂಬಿಗ ಚೌಡಯ್ಯ.

**ಭಾವಃ—** ಅನೇಕರು ಮೋಕ್ಷಸಂಪಾದನೆಗಾಗಿ ಹಿಂದೆ ಹೇಳಿದಂತೆ ದೇಶಗಳನ್ನೆಲ್ಲ ತಿರುಗುತ್ತಾರೆ. ಇನ್ನು ಕೆಲವರು ಈ ಸಂಸಾರವು ಸಟಿ. ತಮ್ಮ ದೇಹವು ಸುಳ್ಳು ಎಂದು ಭಾವಿಸಿ ಇವುಗಳನ್ನೆಲ್ಲವನ್ನು ಮರೆತರೆ ದೇವರು ಕಾಣುವನೆಂದು ಅನ್ನುತ್ತಾರೆ. ಈ ವಿಚಾರಗಳು ತಪ್ಪೆಂದು ವಚನಕಾರನು ಇಲ್ಲಿ ಅಂದಿರುತ್ತಾನೆ. ಈ ಪ್ರಕಾರ ಹರಿ, ಸುರ, ಬ್ರಹ್ಮಾದಿಗಳು ಹಿಂದೆ ಪ್ರಯತ್ನಿಸಿದರು. ಅವರು ಅಸಂಖ್ಯಾತ ವರುಷ ಜಪ ತಪಗಳನ್ನು ಮಾಡಿ ದೇಹವನ್ನು ಕ್ಲೇಶಪಡಿಸಿದರು. ಆದರೆ ಅವರು ಕಟ್ಟ ಕಡೆಗೆ ತಮ್ಮ ವಾಂಛಿತವನ್ನು ಪಡೆಯಲಾರದೆ ಮಾನಹೀನರಾಗಿ ಹೋಗ ಬೇಕಾಯಿತು. ಆದರೆ ಈ ತೆರದ ದೇವರನ್ನು ಬಿಟ್ಟುಕೊಟ್ಟು ತನ್ನನ್ನೇ ಅರಿದಡೆ ತಾನೇ ನಿಜವು. ತಾನೇ ನಿರಂತರವಾಗಿರುವ ಸತ್ಯ ವಸ್ತುವು ಎಂದು ವಚನಕಾರನು ಹೇಳಿರುವನು.

೧೭. **ವಚನಃ—** ತನ್ನ ಹುಸಿ ಮಾಡಿ ಇನ್ನೊಂದ ದಿಟ ಮಾಡುವ ಅಣ್ಣಂಗೆ ನಂಬುಗೆ ಇನ್ನಾವುದೋ? ತನ್ನೊಳಗಣ ಘನವ ತಾ ತಿಳಿಯಲರಿಯದೆ, ಪರಬ್ರಹ್ಮಕ್ಕೆ ತಲೆವಾರನಿಕ್ಕಿ ಸಳೆದಿಹೆನೆಂಬಣ್ಣಗಾವಿಲನೆಂದಾತ ನಂಬಿಗರಚೌಡಯ್ಯ.

**ಭಾವಃ—** ಹಿಂದಿನ ವಚನಗಳಲ್ಲಿಯ ವಿಷಯವನ್ನೇ ವಚನಕಾರನು ಇಲ್ಲಿ ಬೇರೊಂದು ರೀತಿಯಿಂದ ಹೇಳಿರುವನು. ತನ್ನ ದೇಹವು ಹುಸಿ ಎಂದು ತಿಳಿದು ಮತ್ತೊಂದು ದಿಟವೆಂದು ಹೇಳುವ ಅಣ್ಣಗಳಿಗೆ ಯಾವುದರಲ್ಲಿಯೂ,

ನಂಬುಗೆ ' ಹುಟ್ಟಲಾರದೆಂದು ವಿನೋದದಿಂದ ಅಂದಿರುವನು. ಯಾಕಂದರೆ ತಾನು ಎಂಬುದನ್ನು ಇವರು ಕಣ್ಮುಟ್ಟ ನೋಡುತ್ತಾರೆ. ಆದರೊಡನೆ ಅವರು ವ್ಯವಹರಿಸುತ್ತಾರೆ. ಇಂಥದನ್ನೇ ಅವರು ಸುಳ್ಳು ಎಂದು ಭಾವಿಸಿದ ಬಳಿಕ ಉಳಿದದ್ದು ನಿಜವೆಂದು ಭಾವಿಸುವ ಬಗೆ ಹೇಗೆ ಎಂದು ಇಲ್ಲಿ ಅಂದಿದ್ದಾನೆ. ಶ್ರೇಷ್ಠ ವಸ್ತುವು ತನ್ನಲ್ಲಿಯೇ ಇರುತ್ತದೆ. ಇದನ್ನು ತಿಳಿಯಲಾರದೆ ಬೇರೆ ಕಡೆಗೆ ಇದೆ ಎಂದು ಭಾವಿಸಿ ಅದನ್ನು ಹಠಾತ್ತಾಗಿ ಸೆಳೆದುಕೊಂಡು ಬರುವೆವೆಂದು ಅನ್ನುವವರು ಪೂರ್ಣ ಹುಂಬರು ಎಂದು ವಚನಕಾರನು ಅಂದಿರುವನು.

೧೮. **ವಚನ:—** ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದುರತೆಯಲ್ಲವೆ ? ತಾ ತನ್ನನರಿದಲ್ಲಿ ಅರಿಕೆ, ಇದಿರಿಗೆ ತೋರಿದಲ್ಲಿ ಅದೇ ದೇವತ್ವವೆಂದನಂಬಿಗಚೌಡಯ್ಯ.

**ಭಾವ:—** ಇದರಲ್ಲಿ ವಚನಕಾರನು ತನ್ನನ್ನು ತಾನು ತಿಳಿಯುವದೆಂದರೇನು ಎಂಬುದನ್ನು ಹೇಳಿರುವನು. ತಿಳಿಯುವದೆಂದರೆ ಬಹಳ ಓದುವದೂ, ಅಭ್ಯಾಸ ಮಾಡುವದೂ ಎಂದು ತಿಳಿಯಬೇಕೋ ಹೇಗೆ? ಇದು ತಪ್ಪು ಎಂದು ಅಭಿಪ್ರಾಯವು. ಅವನು ವಚನಕಾರನ ಅಭಿಪ್ರಾಯದಂತೆ ಇದು ಚತುರತೆಯನ್ನು ಮಾತ್ರ ಸಂಪಾದಿಸಿದಂತಾಗುವದು. ಆದರೆ ಹೀಗೆ ಜಾಣತನವನ್ನು ಹೆಚ್ಚಿಸಿಕೊಂಡರೆ ಪರಮಾತ್ಮನ ಜ್ಞಾನವನ್ನು ಸಂಪಾದಿಸಿದಂತಾಗಲಿಲ್ಲ. ಆದರೆ ಮನುಷ್ಯನು ತನ್ನನ್ನು ತಾನು ಅರಿಯಬೇಕು, ಮತ್ತು ಹೀಗೆ ಅರಿತ ಅರಿಕೆಯು ತನಗೆ ಪ್ರತ್ಯಕ್ಷವಾಗಬೇಕು. ಹೀಗೆ ಆದಲ್ಲಿ ಅದೇ ದೇವತ್ವವೆಂದು ಇಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಇಂತಿಂಥ ಅವಯವವುಳ್ಳವನು, ಇಂತಿಂಥ ಸ್ವರೂಪುಳ್ಳವನು ಎಂದು ಭಾವಿಸಿ, ಅವನನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಬಯಸುವರು. ಇದು ತೀರ ಭ್ರಮೆಯು. ಇಂಥ ವಿಚಾರಗಳು ವೀರಶೈವರಲ್ಲಿ ಇಲ್ಲ. ಪರಮಾತ್ಮನು ಹೀಗೆ ಎಂದೂ ಕಾಣಿಸಿಕೊಳ್ಳಲಾರನು. ಯಾಕಂದರೆ ಕಾಣಿಸಿಕೊಳ್ಳತಕ್ಕ ವಸ್ತುವು ತನ್ನಲ್ಲಿಯೇ ಇದೆ ಅದನ್ನು ಪ್ರತ್ಯಕ್ಷ ಮಾಡಿಕೊಳ್ಳುವದೇ ಪರಮಾತ್ಮನನ್ನು ಕಾಣುವದು ಎಂದು ವಚನಕಾರನ ಭಾವವಿದೆ.

೧೯. **ವಚನ:—** ಅಷ್ಟಮದಂಗಳ ಗಟ್ಟಿಯನೆ ಕರಗಿಸಿ ಸತ್ವ ರಜ ತಮಂಗಳ ಬಿಟ್ಟು ಕಳೆದು, ಸುತ್ತುವ ಮನದ ಸುಳಿಯ ತಪ್ಪಿಸಿ ಮುಂದೆ ಹುಟ್ಟದೆ ಹೋಗೆಂದನಂಬಿಗಚೌಡಯ್ಯ,

**ಭಾವ:**— ತನ್ನನ್ನು ತಾನು ತಿಳಿಯುವದೆಂದರೇನು ಎಂಬದನ್ನು ವಚನಕಾರನು ಇಲ್ಲಿ ನಿರ್ದೇಶಿಸಿರುವನು. ತನಗೆ ಅರಿವು ಆಯಿತು ಎಂಬುದನ್ನು ತಿಳಿಯುಲಿಕ್ಕೆ ಒಂದು ಗುರುತು ಇರುವದು. ಇದು ಯಾವದೆಂದರೆ ಪುನರ್ಜನ್ಮವನ್ನು ಹೊಂದದೆ ಇರುವದೇ ಇರುತ್ತದೆ. ಎಲ್ಲಿಯು ವರೆಗೆ ಜ್ಞಾನವು ಇರುವದಿಲ್ಲವೋ ಅಲ್ಲಿಯು ವರೆಗೆ ಪುನರ್ಜನ್ಮಗಳು ತಪ್ಪಲಾರವು. ಆದರೆ ಈ ಜ್ಞಾನವು ಉಂಟಾಗಬೇಕಾದರೆ ಅಷ್ಟಮದಂಗಳೆಂಬ ಕಠಿಣ ವಸ್ತುಗಳು ತನ್ನಲ್ಲಿ ಇವೆ. ಅವುಗಳನ್ನು ಮನುಷ್ಯನು ಕರಗಿಸಿ ಹೋಗಲಾಡಿಸಿಕೊಳ್ಳಬೇಕು. ಹಾಗೆಯೇ ರಜ, ತಮೋಗುಣಗಳೆಂಬವು ತನ್ನನ್ನು ಆವರಿಸಿಕೊಂಡಿರುತ್ತವೆ. ಅವುಗಳ ಸಂಕೋಲೆಯಿಂದ ಪಾರಾಗಬೇಕು. ಹೀಗೆ ಮನುಷ್ಯನು ವರ್ತಿಸಿದಾಗ್ಗೆ, ಅದೇ ಪರಮಾತ್ಮನ ಅರಿವು. ಈ ಅರಿವು ಪ್ರಾಪ್ತವಾದ ಬಳಿಕ ಪುನರ್ಜನ್ಮವು ಆಗಲಾರದೆಂದು ವಚನಕಾರನ ಭಾವವು. ಇದೇ ತನ್ನನ್ನು ತಾನು ತಿಳಿಯುವ ರೀತಿಯಾಗಿದೆ.

೨೦. **ವಚನ:**— ಅಂದಾದಿ ಬಿಂದುವಿನ ಹೊಂದಿದ ಹುಟ್ಟು, ಆ ಹುಟ್ಟನೆ ಹಿಡಿದು, ಅಂದ ಚಂದದಲ್ಲಿ ತೊಳಲಾಡುತ್ತಿದ್ದಿತು ಜಗವೆಲ್ಲ. ಅಂದಗೇಡಿಗಳೆಲ್ಲ ಒಂದೇರಿಹರು. ಇದನೊಂದೇ ಹುಟ್ಟಿನಲ್ಲಿ ಇಳುಹುವೆನೆಂದ ನಂಬಿಗರ ಚೌಡಯ್ಯ.

**ಭಾವ:**— ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಪುನರ್ಜನ್ಮವನ್ನು ಒಂದೇ ಜನ್ಮದಲ್ಲಿ ಕಳೆದು ಬಿಡುವೆನೆಂದು ಹೇಳಿರುವನು. ಜಗತ್ತಿನ ಜನರೆಲ್ಲ ಆದರಲ್ಲಿಯು ಅಂದಚಂದಗಳಿಗೆ ಮೋಹಿಸಿ ಅನೇಕ ಕರ್ಮಗಳನ್ನು ಮಾಡುತ್ತ ಅನೇಕ ಜನ್ಮಗಳನ್ನು ತಾಳುತ್ತಿರುವರು. ಅಂದಗೇಡಿ ಜನಗಳು ಇದೇ ರೀತಿಯನ್ನು ಅವಲಂಬಿಸುವದುಂಟು. ಆದರೆ ನಾನು ಅವರಂತೆ ವರ್ತಿಸದೆ ಒಂದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವೆನೆಂದು ವಚನಕಾರನು ಅಂದಿರುವನು.

೨೧. **ವಚನ:**— ಕಲಿತು ಹೇಳಿಹೆನೆಂತು ? ಕಾಣಬೇಕಾದರೆ ಅರಿತಿದ್ದೇ ಅರುಹು. ಹಿರಿಯತನ ಬೇಡ. ಅರಿದು ಮರೆದೆನೆಂಬ ಸಂದೇಹ ಬೇಡ. ದರ್ಪಣದಲ್ಲಿ ತೋರುವ ತನ್ನ ಒಪ್ಪದ ಪ್ರತಿಬಿಂಬದಂತೆ ಇದು ನಿಶ್ಚಯವಾಗಿ ನಿಶ್ಚೈಸಿದಲ್ಲಿ ಬೇರೊಂದಿಪ್ಪುದಿಲ್ಲ ಎಂದನಂಬಿಗ ಚೌಡಯ್ಯನು.

**ಭಾವಃ—** ತನ್ನ ಜ್ಞಾನವು ತನಗೆ ಹೇಳಲಿಕ್ಕೆ ಬರಲಾರದು. ತಿಳಿಯಬೇಕಾದರೆ ತನಗೆ ತಿಳಿದದ್ದೇ ಜ್ಞಾನವು. ಎಂದರೆ ತನ್ನ ಅನುಭವಕ್ಕೆ ಬಾರದೆ ಹೆರರ ಹೇಳಿಕೆಯಿಂದ ಕಲಿತದ್ದು ಜ್ಞಾನವಲ್ಲವೆಂದು ವಚನಕಾರನ ಭಾವವು. ಹಾಗೆಯೇ ಇದರಲ್ಲಿ ನಾನು ಜ್ಞಾನವುಳ್ಳವನೆಂದು ಹಿರಿಯತನದಿಂದ ಸೊಕ್ಕಿನಿಂದ ನಡೆಯುವದು ಬೇಡ. ಜ್ಞಾನದ ರೀತಿ ಏನಂದರೆ, ಅದು ಪಕ್ವ ಸ್ಥಿತಿಗೆ ಬಂದಬಳಿಕ ಅದರ ಅರಿವು ಸಹ ಅವನಿಗೆ ಇರುವದಿಲ್ಲ. ಅದರಲ್ಲಿ ಅವನು ತನ್ಮಯನಾದ ಬಳಿಕ ಅದು ಹೀಗೆ ಹಾಗೆ ಇರುತ್ತದೆಂದು ಹೇಳಲಿಕ್ಕೆ ಬರಲಾರದು. ಈ ಸ್ಥಿತಿಯಾಗುವದು ತಿಳಿದು ಮರೆತಂತೆಯೇ ಸರಿ. ಕನ್ನಡಿಯಲ್ಲಿ ಹೇಗೆ ತನ್ನ ಪ್ರತಿಬಿಂಬವು ಕಾಣುತ್ತದೋ ಹಾಗೆ ಜ್ಞಾನವು ಇರುವದು. ಜ್ಞಾನದ ಈ ಪರಸ್ಥಿತಿಯನ್ನು ತನ್ನಲ್ಲಿ ಧೃಡಪಡಿಸಿದಲ್ಲಿ ಕಡೆಗೆ ಅದರ ಹೊರ್ತು ಏನೂ ಉಳಿಯುವದಿಲ್ಲ. ಹೀಗೆ ಅಂಬಿಗರ ಚೌಡಯ್ಯನು ಜ್ಞಾನದ ಹೊಳವಿಕೆಯ ನಿಜಸ್ಥಿತಿಯನ್ನು ಅರುಹಿರುತ್ತಾನೆ.

೨೨. **ವಚನಃ—** ಆದಿಶಕ್ತಿ ವಿಡಿದವರೆಲ್ಲರು ಜಂಗಮವಲ್ಲ. ಅನಾದಿಶಕ್ತಿ ವಿಡಿದವರೆಲ್ಲರು ಜ್ಞಾನಿಗಳಲ್ಲ. ಅದಿ ಅನಾದಿ ಎಂಬೆರಡ ಭೇದಿಸಿ ದಾಂಟಿ ಇಚ್ಛಾಶಕ್ತಿಯ ಇಚ್ಛೆಯ ಮರೆದು ಜ್ಞಾನಶಕ್ತಿಯ ತಾಪನೊಲ್ಲದೆ ಕ್ರಿಯಾಶಕ್ತಿಯ ಭಾವವ ಬಿಟ್ಟು ತಾನು ತಾನಾದವಂಗೇನು ಇದಿರು ಇಲ್ಲವೆಂದನಂಬಿಗ ಚೌಡಯ್ಯ.

**ಭಾವಃ—** ಇಲ್ಲಿ ಜ್ಞಾನದ ನಿಜಸ್ಥಿತಿಯನ್ನು ವಚನಕಾರನು ವರ್ಣಿಸಿದ್ದಾನೆ. ಇದರಲ್ಲಿ ಅವನು ಮನುಷ್ಯನ ಶಕ್ತಿಗಳಾವವು, ಪರಮಾತ್ಮನ ಜ್ಞಾನವು ಆದ ಹಾಗೆ ಆ ಶಕ್ತಿಗಳ ಸ್ಥಿತಿಯು ಹೇಗೆ ಆಗುತ್ತ ಹೋಗುತ್ತದೆ, ಮತ್ತು ಮನುಷ್ಯನಲ್ಲಿ ವಿಕಾಸವು ಹೇಗೆ ಹೆಚ್ಚುತ್ತ ಹೋಗುತ್ತದೆ ಎಂಬುದನ್ನು ವಿವರಿಸಿದ್ದಾನೆ. ಮನುಷ್ಯನು ಜಗತ್ತಿನಲ್ಲಿ ವ್ಯವಹರಿಸುವದು ಶಕ್ತಿಯ ಮೂಲಕ. ಈ ಶಕ್ತಿಯಲ್ಲಿ ಆದಿ, ಅನಾದಿ ಎಂದು ಎರಡು ಮೂಲಭೇದಗಳಿವೆ. ಇವುಗಳ ತರುವಾಯ ಪುನಃ ಮೂರು ಶಕ್ತಿಗಳಿರುತ್ತವೆ. ಅವು ಯಾವವೆಂದರೆ ಇಚ್ಛಾ, ಜ್ಞಾನ, ಮತ್ತು ಕ್ರಿಯೆ. ಈ ಯಾವತ್ತು ಶಕ್ತಿಗಳ ವ್ಯವಹಾರಕ್ಕೆ ತಾನು ಅತೀತನಾಗಿ ವರ್ತಿಸಬೇಕೆಂದು ವಚನಕಾರನ ಮುಖ್ಯ ಭಾವವು. ಹೀಗೆ ವರ್ತಿಸುವದರಿಂದಲೇ ಅವನು ನಿಜತ್ವವನ್ನು ಹೊಂದುವನು.

ಅನಾದಿಶಕ್ತಿಯು ಅತ್ಯಂತ ವಿರಳವಾದುದು. ಅದಕ್ಕೂ ಸ್ಥೂಲವಾದದು ಆದಿಶಕ್ತಿಯು. ಅನಾದಿ ಶಕ್ತಿಯನ್ನು ಹಿಡಿದು ಆಚರಿಸುವವರು ಜ್ಞಾನಿಗಳು. ಮತ್ತು ಆದಿಶಕ್ತಿಯನ್ನು ಹಿಡಿದು ಆಚರಿಸುವವರು ಜಂಗಮರು. ಆದರೆ ಇವರು ತಮ್ಮ ತಮ್ಮ ಶಕ್ತಿಗಳಲ್ಲಿ ಮಾತ್ರ ಆಸಕ್ತರಾದರೆ, ಅವರ ವಿಕಾಸ ಭಾವಕ್ಕೆ ಅನುಕೂಲ ವಾಗಲಾರದು. ಆದರೆ ಈ ಶಕ್ತಿಗಳಲ್ಲಿ ಇದ್ದೂ ಇಲ್ಲದವರಂತೆ ಅವರು ವ್ಯವಹರಿಸಬೇಕು. ಇವುಗಳ ತರುವಾಯ ಇಚ್ಛಾ, ಜ್ಞಾನ, ಕ್ರಿಯೆ ಎಂಬವು ಳು ಕ್ರಮವಾಗಿ ಬರುತ್ತವೆ. ಇವು ಹೆಚ್ಚು ಹೆಚ್ಚು ಸ್ಥೂಲ ತೆರನಾಗಿರುವವು. ಇವುಗಳ ಮೂಲಕ ಮನುಷ್ಯನ ಸ್ಥೂಲವ್ಯಾಪಾರಗಳು ನಡೆಯುತ್ತವೆ. ಇಚ್ಛಾ ಶಕ್ತಿಯಲ್ಲಿ ಮನುಷ್ಯನು ಆಸಕ್ತನಾಗಿ ಅದಕ್ಕೆ ಅನುಸರಿಸಿ ಅದು ಹರಿದತ್ತ ಹೋಗಕೂಡದು. ಅದನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಬೇಕು ಜ್ಞಾನಶಕ್ತಿಯ ಸ್ಥಿತಿಯನ್ನೂ ಕೂಡ ತನ್ನಾಧೀನದಲ್ಲಿ ಇಟ್ಟುಕೊಳ್ಳಬೇಕು. ಹಾಗೆಯೇ ಕ್ರಿಯಾಶಕ್ತಿಯ ಕಾರ್ಯಗಳ ಎಳೆತಕ್ಕೂ ಒಲೆಯದಿರಬೇಕು. ಮನುಷ್ಯನು ತನ್ನನ್ನು ಹೀಗೆ ಹೊಯ್ದಾಡಿಸುವ ಶಕ್ತಿಗಳಿಗೆ ಮೀರಿ ನಡೆದದರೆ ಮಾತ್ರ ಅವನು "ತಾನು ತಾನಾಗುವನು." ಎಂದರೆ ಅವನು ಸ್ವತಂತ್ರನಾಗುವನು. ಇಂಥವನಿಗೆ ಇದಿರು ಎಂಬುದು ಇಲ್ಲ. ಅವನು ಪರಮಾತ್ಮನ ಸ್ವರೂಪವೇ ಆಗುವನೆಂದು ವಚನಕಾರನ ಭಾವವಿದೆ.

೨೩. **ವಚನ:**— ಕಾಳಗಕ್ಕೆ ಹೋಗದಿರಯ್ಯ. ಕಲ್ಲು ಗುಂಡು ತಾಕಿಹವು. ಆರು ದರ್ಶನಗಳಿಗೆ ನಿಮ್ಮನ್ನು ತೋರದಿರಯ್ಯ. ನಾಲ್ಕು ವೇದ ಹದಿನೆಂಟು ಪುರಾಣವೆಂಬುವರ ಬೆನ್ನು ಹತ್ತದಿರು. ಬೇರೆ ತೀರ್ಥಯಾತ್ರೆ ಎಂಬುವ ಅಧ್ಯಾತನಬೇಡ. ಪುಣ್ಯ ಪಾಪವೆಂಬವೆರಡು ಭಾಂಡಾರವನು ಬೆನ್ನಿನಲ್ಲಿಕ್ಕಿಕೊಂಡು ಬಾರದಿರು ನೀನು. ನಿನ್ನಲ್ಲೇ ನೀನು ತಿಳಿದುನೋಡು ಜಗದೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**— ಶಕ್ತಿಗಳನ್ನು ಅಧೀನದಲ್ಲಿ ಇಟ್ಟುಕೊಂಡು ವರ್ತಿಸಿದರೆ ಅವನಲ್ಲಿ ಪುಣ್ಯಪಾಪಗಳು ಉಂಟಾಗಲಾರವು, ಎಂಬುದನ್ನು ವಚನಕಾರನು ಇದರಲ್ಲಿ ವಿವರಿಸಿ ನುಡಿದಿರುವನು. ಇದು ಉಂಟಾದಲ್ಲಿ ಅವನಿಗೆ "ನಿನ್ನಲ್ಲಿ ನೀನು ತಿಳಿದುನೋಡು'' ಎಂಬುವದನ್ನು ತಿಳಿಯುವ ಸ್ಥಿತಿಯು ಪ್ರಾಪ್ತವಾಗುವದು.

ಇಲ್ಲಿ ಅವನು ಕಾಳಗಕ್ಕೆ ಹೋಗದಿರು ಎಂದು ಹೇಳಿದ್ದಾನೆ. ಯಾಕಂದರೆ ಅಲ್ಲಿ ಗಾಸಿಯಾಗುವದೇ ನಿಜವು. ಅದೇ ಪ್ರಕಾರ ಪ್ರಪಂಚದ ಜಂಜಡ

ದಲ್ಲಿ ಸೇರಿದರೆ ಮನುಷ್ಯನು ಗಾಸಿಯಾಗದೆ ಇರನು. ಅದೇ ಪ್ರಕಾರ ಆರು ದರ್ಶನಗಳಿದ್ದು ಅವುಗಳಿಗೆ ಮನ ಸೋಲಬಾರದು. ಹಾಗೆಯೇ ನಾಲ್ಕು ವೇದ ಹದಿನೆಂಟು ಪುರಾಣಗಳನ್ನು ಓದಿದವರೆಂದು ಅಂಥವರ ಬೆನ್ನು ಹತ್ತ ಬಾರದು. ಹಾಗೆಯೇ ತೀರ್ಥ ಯಾತ್ರೆಗಳೂ ಇವೆ: ಅವುಗಳಿಗೆ ನಾನು ಹೋಗಿ ಬರುವೆನೆಂದು ಸೊಕ್ಕಿನ ವರ್ತನೆಯೂ ಬೇಡ. ಯಾಕಂದರೆ ಇವೆಲ್ಲವೂ ಪುಣ್ಯಪಾಪಗಳನ್ನು ಮಾತ್ರ ಹೆಚ್ಚಿಸುತ್ತವೆ. ಇವು ಹೆಚ್ಚಿದಲ್ಲಿ ಭವದಲ್ಲಿ ಸಿಲ್ಕುವದೇ ನಿಶ್ಚಯವು. ನಿನ್ನನ್ನು ನೀನು ತಿಳಿಯಲಾರಿ ಎಂದು ಅಂಬಿಗರಚೌಡಯ್ಯನು ಎಚ್ಚರು ಕೊಟ್ಟಿರುವನು.

೨೪. **ವಚನಃ**— ಅಂಬಿಗನು ಜಗದೊಳಗೆ ಆಡುವನು. ತುಂಬಿದ ಸಾಗರದೊಳಗೆ ನೋಡಯ್ಯ! ನಿಂದ ಡೋಣಿಯನೇರಿದಂತು ಹುಟ್ಟಕಡಿವಂದವ ನರಿದಾತ ತೊಳಸುತ್ತಿದ್ದನು. ಚಂದಗಟ್ಟವರೆಲ್ಲ ಒಂದೇರಿ ಡೋಣಿಯನು ಶಿವನೊಂದೆ ಠಾವಿಗೊಯಿದಿಳುಹುವೆನೆಂದ ನಂಬಿಗಚೌಡಯ್ಯ.

**ಭಾವ:**— ಈ ವಚನದಲ್ಲಿ ಅಂಬಿಗರಚೌಡಯ್ಯನು ತನ್ನ ಸ್ವಭಾವವನ್ನು ಮತ್ತು ತನ್ನ ವೃತ್ತಿಯನ್ನು ಕುರಿತು ಅತ್ಯಂತ ಅಭಿಮಾನಪೂರ್ವಕವಾಗಿ ನುಡಿದಿರುವನು. ಈ ವಚನದಿಂದ ಚೌಡಯ್ಯನು ಎಂಥ ವಿಶಾಲವೃತ್ತಿಯಿಂದ ಆಚರಿಸುತ್ತಿದ್ದನೆಂಬದನ್ನು ಊಹಿಸಬಹುದಾಗಿದೆ. ಅವನು ಇದರಲ್ಲಿ ಅನ್ನುವದೇನಂದರೆಃ— ನಾನು ಒಬ್ಬ ಸಾಮಾನ್ಯ ಅಂಬಿಗನಲ್ಲ. ನಾನು ಜಲದಿಂದ ತುಂಬಿ ತುಳುಕುವ ಮಹಾಸಾಗರದಲ್ಲಿ ಓಲಾಡುತ್ತಲಿದ್ದೇನೆ ಎಂದು ಹೇಳುತ್ತಾನೆ. ನನಗೆ ಈ ಡೋಣಿಯು ಪ್ರಾಪ್ತವಾದಂದಿನಿಂದ ಹುಟ್ಟನ್ನು ಕಡಿಯುವ ರೀತಿಯನ್ನು ಅರಿತುಕೊಂಡು ಅದನ್ನು ಅತ್ತಿತ್ತ ಹರಿದಾಡಿಸುತ್ತಲಿದ್ದೇನೆ. ಯಾರು ಈ ಪ್ರಪಂಚಸಾಗರವನ್ನು ದಾಟಲಾರದೆ ಇರುವರೋ ಅವರು ನನ್ನ ಈ ಡೋಣಿಯಲ್ಲಿ ಬಂದು ಕುಳ್ಳಿರೆಂದು ವಚನಕಾರನು ಹೇಳುತ್ತಾನೆ. ಮತ್ತು ಹೀಗೆ ಬಂದು ಕುಳಿತುಕೊಂಡಲ್ಲಿ ಶಿವನಿರುವಂಥ ಠಾವಿಗೆ ನಿಮ್ಮನ್ನು ಒಯ್ದು ಇಳುಹುತ್ತೇನೆಂತಲೂ ಇದರಲ್ಲಿ ಅಂದಿದ್ದಾನೆ. ವಚನಕಾರನು ತನ್ನ ಅಂಬಿಗರ ವೃತ್ತಿಯಿಂದ ಜೀವಿಸುತ್ತಿದ್ದ ಅವನು ಜನತೆಯ ಉದ್ಧಾರಕ್ಕಾಗಿ ಹೇಗೆ ವರ್ತಿಸುತ್ತಿದ್ದನೆಂಬದನ್ನೂ ಈ ವಚನದಿಂದ ಕಂಡುಹಿಡಿಯಬಹುದಾಗಿದೆ.

# ಭಕ್ತಸ್ಥಲ.

೨೫. **ವಚನ:—** ಹಿಂದಣ ಜನ್ಮದಲ್ಲಿ ಹಲವು ಸುಕೃತಂಗಳ ಮಾಡಿ ಬೇಡಿಕೊಂಡಿದ್ದರ ದೆಸೆಯಿಂದ ಬಂದು ಹುಟ್ಟಿದರಯ್ಯಾ ಶಿವಭಕ್ತರ ಬಸಿರಲ್ಲಿ ಮುಂದೆ ಶಿವಭಕ್ತರ ಭಕ್ತಿ ದೊಡ್ಡಿತ್ತೆಂದು ನಂಬಲರಿಯದೆ ಭ್ರಮಿತರಾಗಿ ಘನಸುಖವ ನೀಗಿ ಭಕ್ತಿಯ ಪದಸೇವೆಯೊಳು ಇರಲೊಲ್ಲದೆ ಹಿಂದಿನ ಬಯಕೆಯ ಮರೆದು ಕಂಡ ಹಂದಿಯೊಳಾಡಿ ನರಕವ ತಿಂದಂತೆ, ಸಂಸಾರ ಹೃದಯದೊಳು ಬಂದು ಮುಂದುಗೆಟ್ಟು ಮುಳುಗಿ ಈಸಾಡುವ ಲೋಗರಂತೆ ಹೊನ್ನು. ನನ್ನದೆಂದು ಹೆಣ್ಣು, ನನ್ನದೆಂದು ಮಣ್ಣು, ನನ್ನದೆಂದು ಭಿನ್ನ ಭಾವದೊಳು ಮನ ಸಂದು ಹೆಂಡತಿಗಾಗಬೇಕು, ಮಕ್ಕಳಿಗಾಗಬೇಕೆಂಬ ಭಂಡ ಮೂಕೊರೆಯ ಮೂಳರಿರಾ, ನೀವು ಶಿವಭಕ್ತರಾಗಿ ಹುಟ್ಟಿದ್ದ ಫಲವೋ? ಹೋತಿಂಗೆಂಬಂತೆ ಲಿಂಗವ ಕಟ್ಟಿಕೊಂಬಿರಿ. ವರ್ತನೆಗೊಬ್ಬ ಗುರುವಾದವಂಗೆ ಹರಕೆಗೆ ನೀಡುವಿರಿ. ಚರಲಿಂಗಕ್ಕೆ ಬೋನವಿಲ್ಲೆಂಬಿರಿ. ಅರಿಕೆಯಲ್ಲಿ ಆಚಾರವಿಲ್ಲ. ಕಿರುಕುಳ ದೈವದ ಬೆನ್ನಬಿಡದೆ ಹರಿಕೆಯ ಹರಣವೆಂದು ಹರಿಹೋದು ಹೋಗಿ ಕೊಲ್ಲ ನರಕಿಗಳ ಕೊಂಡೊಯ್ದು ಯಮನು ಇವರ ನಡುವಿಂಗೆ ಗಿರಿಕಿಯ ಕಟ್ಟಿ ಮೆಟ್ಟಿ ಮೆಟ್ಟಿ ಬಿಗಿದಾಗ ತಿಗದಲ್ಲಿ ಹಾಯ್ದ ಗೂದಿಯ ಕಂಡು ಜಗವರಿಕೆಯಲ್ಲಿ ನಗುತಿರ್ದನೆಂತ ನಮ್ಮ ಅಂಬಿಗರಚೌಡಯ್ಯನು.

**ಭಾವಃ—** ಈ ವಚನದಲ್ಲಿ ಭಕ್ತನು ಹೇಗೆ ಆಚರಿಸಬೇಕೆಂಬುದನ್ನು ವಚನಕಾರನು ಸಾಮಾನ್ಯವಾಗಿ ವಿವರಿಸಿದ್ದಾನೆ. ಮನುಷ್ಯನು ಹುಟ್ಟಿ ಹುಟ್ಟಿ ಬರಲಿಕ್ಕೆ ಅವನು ಮಾಡುವ ಕರ್ಮಗಳೇ ಕಾರಣವು. ಅವನು ಸತ್ಕರ್ಮಗಳನ್ನು ಮಾಡಿದರೆ ಉತ್ತಮ ಜನ್ಮದಲ್ಲಿ ಹುಟ್ಟುವನು. ದುಷ್ಕರ್ಮಗಳನ್ನು ಮಾಡಿದರೆ ಕೆಡಕು ಜನ್ಮದಲ್ಲಿ ಹುಟ್ಟುವನು. ಆದರೆ ಶ್ರೇಷ್ಠರಾದ ಶಿವಭಕ್ತರ ಜನ್ಮದಲ್ಲಿ ಹುಟ್ಟಬೇಕಾದರೆ ಹಿಂದಿನ ಜನ್ಮದಲ್ಲಿ ಅವನು ಸುಕೃತವನ್ನು ಮಾಡಿರಬೇಕು. ಇಂಥ ಜನ್ಮದಲ್ಲಿ ಹುಟ್ಟಿದ ಬಳಿಕ ದೇವರಲ್ಲಿ ಭಕ್ತಿಯನ್ನು ತಾಳದೆ ಭಕ್ತಿಯಿಂದೆ ಉತ್ಪನ್ನವಾಗುವ ಘನಸುಖವನ್ನು ಹೊಂದುವದನ್ನು ಬಿಟ್ಟುಕೊಟ್ಟು ಭಕ್ತಿಪದದ ಸೇವೆಯನ್ನು ಮಾಡದೆ ಕೀಳ ಜನರ ಸಂಗತಿಯನ್ನು ಹಿಡಿಯುವವನು ನರಕವನ್ನು ತಿಂಬುವ ಹಂದಿಯಂತೆಯೇ ಸರಿ. ಹೀಗೆ ವರ್ತಿಸುವ ಜನರು ಲೌಕಿಕರ ಹಾಗೆ ಹೊನ್ನು ಹೆಣ್ಣು ಮಣ್ಣು ಇವುಗಳಲ್ಲಿ ಆಶೆಯನ್ನು ತಾಳಿ ಅವುಗಳ ಸದುಪಯೋಗವನ್ನು ಮಾಡುವದಿಲ್ಲ.

ಇದು ಶಿವಭಕ್ತರಾಗಿ ಹುಟ್ಟಿದ್ದಕ್ಕೆ ಸಾರ್ಥಕವಾದುದಲ್ಲ. ಹೋತಿಗೆ ಗಡ್ಡ ವಿದ್ದಂತೆ ಲಿಂಗವನ್ನು ಮಾತ್ರ ಕಟ್ಟಿಕೊಂಡರು ಆ ಲಿಂಗ ಅವರಿಗೆ ಪ್ರಯೋಜನವಾದುದಲ್ಲ. ಅವರು ಗುರುವನ್ನು ವರ್ತನೆಗಾಗಿ ಮಾತ್ರ ಇಟ್ಟುಕೊಳ್ಳುತ್ತಾರೆ. ಅವನಿಗೆ ಏನಾದರೂ ಹರಿಕೆ ಕೊತ್ತು ಆ ಹರಿಕೆ ತೀರಿಸಲು ದಾನ ಮಾಡುವರು. ಆದರೆ ಯಾರಾದರೂ ಪುಣ್ಯ ಪುರುಷರು ಬಂದರೆ ಅವರಿಗೆ ಏನೂ ದಾನ ಧರ್ಮ ಮಾಡುವದಿಲ್ಲ. ಇಂಥವರಿಗೆ ತಿಳುವಳಿಕೆ ಇಲ್ಲ, ಆಚಾರವೆಂಬುದಿಲ್ಲ. ಹಾಗೆಯೇ ಕಿರುಕುಳ ದೈವಗಳಲ್ಲಿ ನಂಬಿಗೆ ಇಟ್ಟು ಅವುಗಳಿಗೆ ಬಲಿಕೊಟ್ಟು ಜೀವ ಹಿಂಸೆ ಮಾಡುವರು. ಇಂಥವರನ್ನು ಪರಮಾತ್ಮನು ನಿಶ್ಚಯವಾಗಿ ಶಿಕ್ಷಿಸುವನೆಂದು ಅಂಬಿಗರಚೌಡಯ್ಯನು ಬಹು ರೋಷದಿಂದ ಇವರನ್ನು ಬೈದಿರುವನು.

———

## ಸದಾಚಾರಿಯೇ ಲಿಂಗಧಾರಣೆಗೆ ಯೋಗ್ಯನು.

**ವಿವರಣೆ:**— ಲಿಂಗ ಮತ್ತು ಸದಾಚಾರ ಸದ್ವೃತ್ತಿಗಳು ಪರಸ್ಪರ ಸಂಬಂಧವುಳ್ಳವು. ಸದಾಚಾರವಿಲ್ಲದಿದ್ದರೆ, ಲಿಂಗವಿಲ್ಲವೆಂದು ವಚನಕಾರರು ಮೇಲಿಂದ ಮೇಲಿ ಹೇಳುವದುಂಟು. ಇದೇ ಅಭಿಪ್ರಾಯವನ್ನೇ ಅಂಬಿಗರ ಚೌಡಯ್ಯನು ಕೆಳಗೆ ಕಾಣಿಸಿದ ವಚನಗಳಲ್ಲಿ ಹೇಳಿರುವನು. ಲಿಂಗ ಧಾರಣ ಮಾಡುವ ಗುರುವಿಗೂ ಶಿಷ್ಯನಿಗೂ ಅತ್ಯಂತ ನಿಕಟಸಂಬಂಧವಿದೆ. ವಚನಕಾರರ ಪ್ರಕಾರ ಗುರುವಿನ ಕರ್ತವ್ಯವು ಲಿಂಗಧಾರಣವಾದಕೂಡಲೆ ಮುಗಿಯುವದಿಲ್ಲ. ಗುರುವಿನ ಸಂಬಂಧವು ಶಿಷ್ಯನೊಡನೆ ಆಮರಣ ಉಳಿಯತಕ್ಕದ್ದು. ಶಿಷ್ಯನು ತನ್ನ ಆಯುಷ್ಯವನ್ನು ಹೇಗೆ ಕಳೆಯಬೇಕೆಂಬುದನ್ನು ಅವನು ಸದಾ ಬೋಧಿಸುತ್ತಿರಬೇಕು. ಇಷ್ಟೇ ಅಲ್ಲ, ಉಭಯತರ ಪ್ರಾಣಗಳು ಸಹ ಒಂದೇ ಎಂದು ಭಾವಿಸಿ ವರ್ತಿಸತಕ್ಕದ್ದು. ಶಿಷ್ಯನು ಹೀಗೆ ವರ್ತಿಸಿದಲ್ಲಿ ಅವನ ಅಂತರಂಗ ಬಹಿರಂಗಗಳಲ್ಲಿ ಸರ್ವಾವಯವಗಳಲ್ಲಿ ಕೂಡ ಲಿಂಗದ ಕಳೆಯು ವೇಧಿಸ ಹತ್ತುವದು. ಈ ಕಳೆಯು ಅವನಲ್ಲಿ ದೃಢವಾಗುತ್ತ ಹೋದ ಹಾಗೆ ಅವನು ಮೋಕ್ಷಸ್ಥಾನವನ್ನು ಸಮೀಪಿಸ ಹತ್ತುವನು. ಮತ್ತು ಕಡೆಗೆ ಲಿಂಗಾಂಗ ಸಾಮರಸ್ಯವನ್ನು ಹೊಂದುವನು. ಈ ಭಾವವನ್ನು ಅಂಬಿಗರ ಚೌಡಯ್ಯನು ಕೆಳಗಿನ ವಚನಗಳಲ್ಲಿ ಹೇಳಿದ್ದಾನೆ.

೨೬. **ವಚನ:—** ಎರಡು ಗ್ರಾಮದ ನಡುವೆ ಕಟ್ಟಿದ ಸೀಮೆಯ ಕಲ್ಲು ಆದಿಯನರಿಯದ ಗುರು, ಭೇದಿಸಲರಿಯದ ಶಿಷ್ಯ, ಅದ ಕಟ್ಟಿದಾತ ಗುರುವಲ್ಲ. ಕಟ್ಟಿಸಿಕೊಂಡಾತ ಶಿಷ್ಯನಲ್ಲ, ಇವರಿಬ್ಬರು ಭ್ರಷ್ಟರೆಂದಾತ ಅಂಬಿಗರ ಚೌಡಯ್ಯ.

**ಭಾವ:—** ವಚನಕಾರನು ಲಿಂಗವೆಂದರೆ ಎರಡು ಗ್ರಾಮಗಳ ನಡುವೆ ನಡಿಸಿದ ಸೀಮೆಯ ಕಲ್ಲು ಎಂದು ಅದನ್ನು ವಿವರಿಸಿದ್ದಾನೆ. ಹೇಗೆ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಹೋಗುವಾಗ ಸೀಮೆಯ ಕಲ್ಲು ಒಂದು ಗ್ರಾಮದ ಮೇರೆಯು ಅಲ್ಲಿಗೆ ತೀರಿತು, ಅಲ್ಲಿಂದ ಮತ್ತೊಂದು ಗ್ರಾಮವು ಪ್ರಾರಂಭವಾಯಿತು, ಎಂದು ಹೇಳುವದೋ ಹಾಗೆಯೇ ಲಿಂಗಧಾರಣವಾದ ಕೂಡಲೆ ಮನುಷ್ಯನು ತನ್ನ ಮೊದಲಿನ ಸ್ಥಿತಿಯು ಮುಗಿದು ಹೊಸ ಸ್ಥಿತಿಯು ಪ್ರಾರಂಭವಾಯಿತೆಂದು ತಿಳಿಯಬೇಕು. ಭವಸಂಬಂಧದ ಆಚಾರಗಳನ್ನು ಮತ್ತು ವರ್ತನೆಗಳನ್ನು ಅವನು ಬಿಡಬೇಕು, ಮತ್ತು ಪರಮಾತ್ಮನಿಗೆ ಸಂಬಂಧಿಸಿದ ಹೊಸ ವರ್ತನೆಯನ್ನು ಸ್ವೀಕರಿಸಬೇಕು. ಈ ರೀತಿಯನ್ನು ತೋರಿಸತಕ್ಕವನು ಗುರುವು. ಆದರೆ ಈ ರೀತಿ ಯಾವುದೆಂಬುದನ್ನು ಅರಿಯದ ಗುರುವು ಮತ್ತು ಅದನ್ನು ತಿಳಿಯಲಾರದ ಶಿಷ್ಯನು ಇದ್ದರೆ ಹೀಗೆ ಲಿಂಗಧಾರಣ ಮಾಡುವಂಥವ ಗುರುವೂ ಅಲ್ಲ, ಕಟ್ಟಿಸಿ ಕೊಂಡಾತ ಶಿಷ್ಯನೂ ಅಲ್ಲ. ಉಭಯತರೂ ಭ್ರಷ್ಟರೆಂದು ವಚನಕಾರನು ಅಂದಿದ್ದಾನೆ. ಅಂದರೆ ಲಿಂಗಧಾರಣವಾದ ಬಳಿಕ ಶಿಷ್ಯನು ಪರಮಾತ್ಮನಿಗೆ ಉಚಿತವಾದ ಹೊಸ ವೃತ್ತಿಯನ್ನು ಗುರುವಿನಿಂದ ತಿಳಿದುಕೊಂಡು ಹಾಗೆ ವರ್ತಿಸಬೇಕೆಂದು ವಚನಕಾರನ ಅಭಿಪ್ರಾಯವು.

೨೭. **ವಚನ:—** ಅರಿಯದ ಗುರು ಅರಿಯದ ಶಿಷ್ಯ ಇವರಿಬ್ಬರಿಗೇನಪ್ಪುದೋ? ಕುರುಡ ಕುರುಡನ ಕೈಯ್ಯ ಪಿಡಿದು ಪಥವ ನಡೆಯಬಲ್ಲರೇ? ತೊರೆಯಲದ್ದ ಹೋಹನ ಈಸಲರಿಯದವ ತೆಗೆದಂತಾಯಿತ್ತೆಂದ ಅಂಬಿಗರ ಚೌಡಯ್ಯ.

**ಭಾವ:—** ಅರಿಯದ ಗುರು ಮತ್ತು ತಿಳಿಯದ ಶಿಷ್ಯ ಇವರ ಸ್ಥಿತಿಯನ್ನು ವಚನಕಾರನು ಇಲ್ಲಿ ಬೇರೊಂದು ಉದಾಹರಣೆಯನ್ನು ಕೊಟ್ಟು ಹೇಳಿರುವನು. ಇಂಥವರ ಸ್ಥಿತಿಯು ಒಬ್ಬ ಕುರುಡನು ಇನ್ನೊಬ್ಬ ಕುರುಡನಿಗೆ ದಾರಿ ತೋರಿಸುವೆನೆಂದು ಹೇಳಿ ಅವನನ್ನು ಕರೆದುಕೊಂಡು ಹೋದಂತೆಯೇ

ಸರಿ. ಕಡೆಗೆ ಇಬ್ಬರೂ ನಷ್ಟವಾಗುವರು. ಅದೇ ಪ್ರಕಾರ ಒಬ್ಬನು ಹೊಳೆಯಲ್ಲಿ ಮುಳುಗುತ್ತಿರುವಾಗ ಅವನನ್ನು ಈಸಲರಿಯದವ ಹೊರಗೆ ತೆಗೆಯಲಿಕ್ಕೆ ಹೋದಂತೆಯೇ ಸರಿ. ಇಬ್ಬರೂ ಮುಳುಗಿ ಸಾಯುವದು ನಿಶ್ಚಯವು. ಅಜ್ಞಾನಿಗಳಾದ ಇಂಥ ಗುರುಶಿಷ್ಯರು ಕಡೆಗೆ ವ್ಯರ್ಥ ಸತ್ತು ಹೋಗುವರು. ಮತ್ತು ಮೋಕ್ಷವನ್ನು ಹೊಂದಲಾರರೆಂದು ವಚನಕಾರನ ಭಾವವು.

೨೮. **ವಚನ:**— ತುತ್ತಿನಾಸೆಗೆ ಲಿಂಗವ ಕೊಟ್ಟು ಹೋಗುವ ವ್ಯರ್ಥ ಮೂಳ ನಿನಗೆ ಗುರುವಾದನಲ್ಲದೆ, ಸತ್ಯ ಸದಾಚಾರವ ಬಲ್ಲಡೆ, ತತ್ವಜ್ಞಾನವ ಬೋಧಿಸಿ, ಲಿಂಗಕ್ಕೂ ನಿನಗೂ ಸಂಬಂಧ ಮಾಡದಿಹ ಕರ್ತೃಗುರುವಿನ ಪಾದ ಹಿಡಿದಿಹೆಯಾಗಿ ಸ್ವಯಲಿಂಗವೇ ನಿನಗೆ ಕಿರಿದಾಯಿತ್ತು. ಕ್ಷೇತ್ರಲಿಂಗವೇ ನಿನಗೆ ಹಿರಿದಾಯಿತ್ತು. ಕಂಕಣಪತಿ ಲಿಂಗವ ಕಿರಿದು ಮಾಡಿ, ಕೊಂಕಣಪತಿ ಲಿಂಗವ ಹಿರಿದು ಮಾಡುವೆ. ಮುಕ್ಕಣ್ಣ ಲಿಂಗವನು ನಮ್ಮ ಕೈಯ್ಯಲ್ಲಿ ಕೊಡಲಾರದಿರ್ದೊಡೆ ಈ ಹರಿಗೋಲ ಹೊರಲಾರದೆ, ಭೋಂಕನೆ ಮುಳುಗುವದೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಇಲ್ಲಿ ವಚನಕಾರನು ಲಿಂಗದ ಮರ್ಮವನ್ನು ಅರುಹಿ ಗುರುವು ಹೇಗಿರಬೇಕೆಂಬುದನ್ನು ಹೇಳಿರುವನು. ಲಿಂಗಧಾರಣದ ಉದ್ದೇಶವು ಪರಮಾತ್ಮನಿಗೂ ಶಿಷ್ಯನಿಗೂ ಸಂಬಂಧವನ್ನುಂಟುಮಾಡುವದಿರುತ್ತದೆ. ಈ ಸಂಬಂಧವು ಕೇವಲ ಬಹಿರಂಗ ಮಾತ್ರವಾಗಿರದೆ, ಅಂತರಂಗಿಕವಾಗಿಯೂ ಇರತಕ್ಕದ್ದು. ಈ ಅಂತರಂಗಿಕ ಸಂಬಂಧವನ್ನು ಜ್ಞಾನಮೂಲಕವಾಗಿಯೇ ತಿಳಿಯತಕ್ಕದ್ದು. ಈ ಜ್ಞಾನದ ರೀತಿಯನ್ನು ಗುರುವು ಬೋಧಿಸತಕ್ಕದ್ದು. ಇದು ಆತನ ಕರ್ತವ್ಯವು. ಈ ರೀತಿಯನ್ನು ಆತನು ಅರಿಯದೆ ಕೇವಲ ಬರೇ ತನ್ನ ತುತ್ತಿನ ಆಶೆಗಾಗಿ ಲಿಂಗವನ್ನು ಕೊಟ್ಟದ್ದಾದರೆ ಅದು ವ್ಯರ್ಥವೆಂದು ವಚನಕಾರನ ಭಾವವು. ಸರಿಯಾಗಿ ಕೊಟ್ಟ ಲಿಂಗವೇ ಮಹತ್ತರವಾದದ್ದು. ಆದರೆ ಕ್ಷೇತ್ರದಲ್ಲಿ ಇರುವಂಥ ಲಿಂಗವು ಮಹತ್ವದ್ದೆಂದು ಎಣಿಸತಕ್ಕದ್ದಲ್ಲ. ಯಾಕೆಂದರೆ ಈ ಅಂತರಂಗಿಕ ಲಿಂಗವು ಮುಕ್ಕಣ್ಣನಿಂದ ಬಂದಂಥಾದ್ದು. ಈ ರೀತಿಯಿಂದ ಲಿಂಗವನ್ನು ಕೊಡದಿದ್ದರೆ ಅದು ಪರಮಾತ್ಮನ ಅರುಹೆಂದು ತಿಳಿಯಲಿಕ್ಕೆ ಬರಲಾರದು. ಲಿಂಗವು ನದಿಯನ್ನು ದಾಟಿಸುವ ಹರಿಗೋಲಿನಂತೆ ಇದೆ. ಆದರೆ ಅರಿಯದ ಗುರುವು ಕೊಟ್ಟ ಲಿಂಗವು ಶಿಷ್ಯನನ್ನು ಭವಸಾಗರದೊಳಗಿಂದ ದಾಟಿಸಲಾರದು. ಅದು ಅವನನ್ನು ಮುಳುಗಿಸಿಯೇ ಬಿಡುವದೆಂದು ವಚನಕಾರನು ಇಲ್ಲಿ ಅಂದಿರುವನು.

**೨೯. ವಚನ:**— ಗುರುಲಿಂಗ ಜಂಗಮವೆಂದರಿಯದ ಗೊಡ್ಡುಗಳ ಶಿಷ್ಯರ ಮಾಡಿಕೊಂಬ ಹೆಡ್ಡ ಜೀವಿಗಳನೇನೆಂಬೆನಯ್ಯ? ಆಚಾರ ಅನಾಚಾರದ ಭೇದವನರಿಯದ ಹೆಡ್ಡ ಮಾನವರಿಗೆ ಉಪದೇಶವ ಕೊಡುವ ಮತಿಭ್ರಷ್ಟರನೇನೆಂಬೆನಯ್ಯ? ಅವನ ಅಜ್ಞಾನವಳಿಯದೆ ಅವನ ನಡೆ ನುಡಿ ಹಸನಮಾಡದೆ ಅವನ ಆದಿ ಅಂತ್ಯವ ತಿಳಿಯದೆ ಧನಧಾನ್ಯದಾಸೆಗೆ ಶಿವದೀಕ್ಷೆಯ ಮಾಡುವನೊಬ್ಬ ಗುರುವು ಹುಟ್ಟಂಧಕನೆಂಬೆನಯ್ಯ. ತನ್ನ ಗುರುತ್ವವನರಿಯದೆ ಗುರುವಿನಿಂದುಪದೇಶವ ಪಡೆವನೊಬ್ಬ ಶಿಷ್ಯ ಕೆಟ್ಟಗಣ್ಣವನೆಂಬೆನಯ್ಯ. ಇಂತಿವರ ಗುರುಶಿಷ್ಯರೆಂದರೆ ನಮ್ಮ ಪ್ರಮಥರು ಮೆಚ್ಚರಯ್ಯ. ನಮ್ಮ ಪ್ರಮಥರು ಮೆಚ್ಚರಲ್ಲಿ. ಇಂತಿಪ್ಪ ಗುರುಶಿಷ್ಯರಿಬ್ಬರಿಗು ಯಮದಂಡನೆ ತಪ್ಪದೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಅರ್ಥ:**— ಗುರು ಶಿಷ್ಯರಿಬ್ಬರು ಸದಾಚಾರವುಳ್ಳವರಿರಬೇಕೆಂಬದನ್ನು ಇಲ್ಲಿ ವಚನಕಾರನು ಪುನ: ಬೇರೆ ಶಬ್ದಗಳಿಂದ ಹೇಳಿದ್ದಾನೆ. ಗುರುವು ಮಾತ್ರ ಸದಾಚಾರಿಯಾಗಿರಬೇಕೆಂಬುದಲ್ಲ, ಶಿಷ್ಯನೂ ಕೂಡ ಸದಾಚಾರಿಯಾಗಿರಬೇಕೆಂದು ಇಲ್ಲಿ ಹೇಳಿರುವನು. ಹಿಂದಿನ ವಚನಗಳಲ್ಲಿಯ ಭಾವವೇ ಇದರಲ್ಲಿ ಬಂದಿದೆ.

**೩೦. ವಚನ:**— ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ? ಏನೇನು ಅರಿಯದ ಎಡ್ಡ ಮಾನವರಿಗೆ ಉಪದೇಶವ ಮಾಡುವ ಗೊಡ್ಡ ಮಾನವನ ಮುಖವ ತೋರದಿರಯ್ಯ. ಅದೇನು ಕಾರಣವೆಂದೊಡೆ ಆ ಮೂಢ ಜೀವಿಯು ಪ್ರಪಂಚವ ಕಳೆಯಲಿಲ್ಲ. ಅವನ ಪಂಚೇಂದ್ರಿಯಂಗಳು ಸಪ್ತವ್ಯಸನಂಗಳು ಅಷ್ಟಮದಂಗಳೆಂಬ ಖೊಟ್ಟಿಗುಣಂಗಳ ಬಿಡಿಸಲಿಲ್ಲ. ಸೂತಕ ಪಾತಕಂಗಳ ಕೆಡಿಸಿ, ಮೂರು ಮಲಂಗಳ ಬಿಡಿಸಿ, ಮುಕ್ತಿಪಥಂಗಳನರುಹಲಿಲ್ಲ. ಮಹಾಶೂನ್ಯ ನಿರಾಳ ನಿರಂಜನ ಲಿಂಗವ ಕರಮನಭಾವ ಸರ್ವಾಂಗದಲ್ಲಿ ತುಂಬಿ ನಿತ್ಯನೆಂದೆನಿಸಲಿಲ್ಲ. ಇದನರಿಯದ ವ್ಯರ್ಥಕಾಯರುಗಳ ಗುರುವೆಂದಡೆ ಪ್ರಮಥರು ಮೆಚ್ಚುವರೇ? ಇಂತಪ್ಪ ಗುರುಶಿಷ್ಯರೀರ್ವರು ಅಜ್ಞಾನಿಗಳು, ಅವರು ಇಹಲೋಕ ಪರಲೋಕಕ್ಕೆ ಹೊರರಗೆಂದಾತ ಅಂಬಿಗರ ಚೌಡಯ್ಯ.

**ಭಾವ:**— ಗುರುವು ಶಿಷ್ಯನಲ್ಲಿ ಸದಾಚಾರವನ್ನು ದೃಢಪಡಿಸಬೇಕೆಂಬ ಭಾವವನ್ನು ಇಲ್ಲಿ ಹೆಚ್ಚಿಗೆ ಬಲವಾದ ರೀತಿಯಿಂದ ಹೇಳಿರುವನು. ಲಿಂಗವು

ಮಹಾಶೂನ್ಯ ನಿರಾಳ ನಿರಂಜನ ಸ್ವರೂಪವಾಗಿದೆ. ಅದಕ್ಕೆ ಆಕಾರವಿಲ್ಲ, ಬರಿದಾಗಿದೆ, ಶುದ್ಧವಾಗಿದೆ. ಇಂಥದನ್ನು ಕರ, ಮನ, ಭಾವಗಳಲ್ಲಿ ಬರ ಮಾಡಿಕೊಳ್ಳಬೇಕೆಂದು ವಚನಕಾರನು ಹೇಳಿರುವನು. ಮನುಷ್ಯನು ಹೇಗೆ ವರ್ತಿಸಬೇಕೆಂಬುದನ್ನು ಗುರುವು ಹೇಳಿಕೊಟ್ಟರೆ, ಲಿಂಗದ ಚೈತನ್ಯವು ಅವ ನಲ್ಲಿ ಬರುವದು. ಶಿಷ್ಯನು ನೀತಿ, ನಡತೆಯಲ್ಲಿ ಅತ್ಯಂತ ಶುದ್ಧನಾಗಿದ್ದರೆ ಲಿಂಗದ ಕಳೆಯು ಅವನಲ್ಲಿ ಬರುವದು. ಈ ರೀತಿಯನ್ನು ಅರಿಯದ ಅಜ್ಞಾನಿ ಗುರುಶಿಷ್ಯರು ಇಹಲೋಕ ಪರಲೋಕಕ್ಕೆ ಹೊರತಾಗಿರುವರು.

---

## ಮಾಯೆಯನ್ನು ದೂರುಮಾಡು.

೩೧. **ವಚನ**:— ಅಡವಿಯ ಹೊಗೆಸಿತ್ತು; ನೀರಲದಿತ್ತು; ಜಡೆಗಟ್ಟಿ ಭಸ್ಮವ ತೊಡಿಸಿತ್ತು; ಹಿಡಿದೊತ್ತಿ ಕೇಶವ ಕೀಳಿಸಿತ್ತು; ಹುಡಿ ಹುಚ್ಚು ಗೊಳಿಸಿತ್ತು ಊರೊಳಗೆಲ್ಲ. ಬೆಡಗಿನ ಮಾಯೆಗೆ ನಾಚುವೆನೆಂದ ಅಂಬಿಗರ ಚೌಡಯ್ಯ.

**ಭಾವ**:— ಮನುಷ್ಯನು ಮಾಯಾವಶನಾಗಿದ್ದಾನೆ. ಈ ಮಾಯೆಯು ಅವನ ಮನಸನ್ನು ಚಂಚಲ ಮಾಡಿಬಿಡುತ್ತದೆ. ಅದು ಅವನನ್ನು ಲಿಂಗ ನಿಷ್ಠೆಯಲ್ಲಿ ಇರಿಸುವದಿಲ್ಲ. ಒಮ್ಮೆ ಅದು ಅರ್ವತಗಳಿಗೆ ಹೋಗುವಂತೆ ಮಾಡಿ ಏಕಾಂತವಾಸಕ್ಕೆ ಗುರಿಮಾಡುವದು. ಅಥವಾ ಕ್ಷೇತ್ರಯಾತ್ರೆಗಳಿಗೆ ಹೊರಡಿ ಸುವದು. ಮತ್ತೊಮ್ಮೆ ತಪಸ್ಸನ್ನು ಆಚರಿಸಲಿಕ್ಕೆ ಹಚ್ಚುವದು. ಇನ್ನೊಮ್ಮೆ ಜೈನಸನ್ಯಾಸಿಯನ್ನಾಗಿ ಮಾಡಿ ಕೇಶವನ್ನು ಕೀಳಿಸಿಕೊಳ್ಳುವಂತೆ ಮಾಡುವದು. ಈ ಪ್ರಕಾರ ಅದು ಮನುಷ್ಯನನ್ನು ಹುಡಿ ಹೊಯ್ದು ಕೊಳ್ಳುವ ತಿಳಿಗೇಡಿ ಹುಚ್ಚನಂತೆ ಮಾಡಿ ಬಿಡುತ್ತದೆ. ಹೀಗೆ ಮಾಡಿಸುವ ಇಂಥ ಮಾಯೆಯನ್ನು ಕಳೆಯು ಬೇಕೆಂದು ವಚನಕಾರನು ಇದರಲ್ಲಿ ಅನ್ನುತ್ತಾನೆ.

೩೨. **ವಚನ**:— ಊರೆಲ್ಲ ಏರಿದ ಹರಿಗೋಲವ ನೀರಿನಲ್ಲಿ ದಾರಿಯ ಕೊಂಡು ಹೊದವನಾರೈಕೆಯಲ್ಲದೆ ಏರಿದವರೆಲ್ಲಕ್ಕೂ ಪರೈಕೆ ಉಂಟೇ? ಹೇಳು ವಾತನ ವಿರಕ್ತಿ, ಕೇಳುವಾತನ ಸದ್ಭಕ್ತಿ, ಉಭಯದ ನೆಲೆಯ ಅರಿಂದರಿ ಯಬೇಕೆಂದ ಅಂಬಿಗರ ಚೌಡಯ್ಯ.

**ಭಾವಃ—** ಊರವರು ಹರಿಗೋಲನ್ನು ಏರಿ ಹೊಳೆದಾಟುತ್ತಾರೆ. ಆಗ ಅವರನ್ನು ಕಾಯುವ ಭಾರ ನಾವಿಕನ ಮೇಲೆ ಇದೆ. ಅದು ಹರಿಗೋಲಿನಲ್ಲಿ ಇದ್ದವರ ಮೇಲೆ ಇರುವದಿಲ್ಲ. ಉಪದೇಶಿಸುವಂಥ ವಿರಕ್ತಿ ಮತ್ತು ಉಪದೇಶವನ್ನು ಕೇಳುವಂಥಾತನ ಭಕ್ತಿ ಇವುಗಳ ರೀತಿಯನ್ನು ಅರಿಯಲು ಪರಮಾತ್ಮನ ಕೃಪೆ ಬೇಕು ಎಂದು ವಚನಕಾರನು ಹೇಳಿರುತ್ತಾನೆ.

———

## ವೇಳೆಗನುಸರಿಸಿ ಕೆಲಸ ಮಾಡು.

**೩೩. ವಚನಃ—** ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯಾ ! ಗಾಳಿ ನಿನ್ನಾಧೀನವಲ್ಲವಯ್ಯಾ ! ನಾಳೆ ತೂರಿಹೆನೆಂದಡೆ ಇಲ್ಲವಯ್ಯಾ ! ಶಿವಶರಣ ಎಂಬುದೊಂದು ಗಾಳಿ ಬಿಟ್ಟಲ್ಲಿ ಬೇಗ ತೂರೆಂದ ಅಂಬಿಗರ ಚೌಡಯ್ಯ.

**ಭಾವಃ—** ವೇಳೆಯು ಮನುಷ್ಯನ ಕೈಯ್ಯಲಿಲ್ಲ. ವೇಳೆಯನ್ನು ಸಾಧಿಸಿ ಕಾರ್ಯ ಮಾಡಬೇಕು. ಗಾಳಿ ಬಿಟ್ಟಾಗ ತೂರಿಕೊಳ್ಳಬೇಕೆಂದು ನಾಣ್ಣುಡಿ ಇದೆ. ಹಾಗೆಯೇ " ಶಿವಶರಣ " ಎಂಬಭಾವವು ಮನಸ್ಸಿನಲ್ಲಿ ಉಂಟಾದ ಕಾಲಕ್ಕೆ ಸತ್ಕಾರ್ಯಗಳನ್ನು ಮಾಡಲೇಬೇಕು. ಈ ವೇಳೆಯು ತಪ್ಪಿಹೋದ ಬಳಿಕ ಸತ್ಕಾರ್ಯಗಳು ಜರಗುವದಿಲ್ಲ.

———

## ಮನಸ್ಸಾಕ್ಷಿಯಾಗಿ ಕೆಲಸ ಮಾಡು.

೩೪. **ವಚನಃ—** ಮಾಡುವ ಭಕ್ತಂಗೆ ಮನವೇ ಸಾಕ್ಷಿ. ಹೊರ ಹೊಮ್ಮಿ ಬಯಲ ಹೊರಲೇನು ? ಹೆಮ್ಮೆಲ್ಲದೆ ಮಾಡಿ ಮನದಲ್ಲಿ ಮರುಗದಿರ್ದಡೆ ಅಲ್ಲಿ ತಾ ಹಿರೆಹಿಂಗದಿರ್ಪ ಅಂಬಿಗರ ಚೌಡಯ್ಯ.

**ಭಾವಃ—** ಜನರಿಗೆ ಕಾಣಬೇಕೆಂದು ಭಕ್ತಿಯನ್ನು ಮಾಡಬಾರದು. ಗುಪ್ತ ಭಕ್ತಿಯನ್ನು ಮಾಡಬೇಕು. ಮಾಡುವ ಭಕ್ತಿಗೆ ತನ್ನ ಮನವೇ ಸಾಕ್ಷಿಯಾಗಿರಬೇಕು. ತನ್ನನ್ನು ತಾನು ಹೊಗಳಿಕೊಳ್ಳಬಾರದು. ಹೊಗಳಿಕೊಂಡಲ್ಲಿ ಅದು ಬಯಲು. ಅಲ್ಲದೆ ಮನಸ್ಸಿನಲ್ಲಿ ಅಹಂಕಾರವಿಲ್ಲದೆ ಮಾಡಬೇಕು. ಮಾಡಿ ಆನಂದ ಪಡಬೇಕು. ಹೀಗೆ ವರ್ತಿಸುವವನಲ್ಲಿ ಪರಮಾತ್ಮನು ವಾಸಿಸುತ್ತಾನೆ.

———

# ಮನುಷ್ಯನ ವರ್ತನೆ

**ವಿವರಣೆಃ—** ವೀರಶೈವ ವಚನಕಾರರು ವ್ಯವಹಾರದಲ್ಲಿ ಮನುಷ್ಯನು ಹೇಗೆ ಆಚರಿಸಬೇಕೆಂಬುದಕ್ಕೆ ಬಹಳ ಮಹತ್ವ ಕೊಡುತ್ತಾರೆ. ಆದ್ದರಿಂದ ಅವರು ಈ ವಿಷಯವನ್ನು ತಮ್ಮ ವಚನಗಳಲ್ಲಿ ಚೆನ್ನಾಗಿ ವಿವರಿಸುವದುಂಟು. ಅವರು ಪ್ರಪಂಚವು ಅಥವಾ ಜಗತ್ತು ಮಿಥ್ಯವಾದುದೆಂದು ತಿಳಿಯುವದಿಲ್ಲ. ಇಲ್ಲಿ ನಡೆಯುತ್ತಲಿರುವ ಕಾರ್ಯಗಳೆಲ್ಲವೂ ಸತ್ಯವೆಂತಲೇ ಅವರು ನಂಬುತ್ತಾರೆ. ಆದ್ದರಿಂದ ಮನುಷ್ಯನು ತನ್ನ ಕಾರ್ಯಗಳನ್ನು ಹೇಗೆ ನಿರ್ವಹಿಸಬೇಕೆಂಬುದಕ್ಕೆ ಅವರು ಮಹತ್ವ ಕೊಡುತ್ತಾರೆ. ಮತ್ತು ಈ ವಿಷಯವನ್ನು ಕುರಿತು ಅವರು ಆಗಿಂದಾಗ್ಗೆ ವಿವೇಚಿಸುತ್ತಾರೆ. ಕಾರ್ಯಗಳನ್ನು ಯೋಗ್ಯ ರೀತಿಯಿಂದ ಮಾಡುವದರಿಂದಲೇ ಆತ್ಮವಿಕಾಸಕ್ಕೆ ಕಾರಣವೆಂದು ಅವರು ಭಾವಿಸುತ್ತಾರೆ. ಆತ್ಮವಿಕಾಸವೆಂದರೆ ತಮ್ಮಲ್ಲಿ ಲಿಂಗದ ಗುಣಗಳನ್ನು ಬರ ಮಾಡಿಕೊಳ್ಳುವದೇ ಇರುತ್ತದೆ. ಲಿಂಗದ ಗುಣಗಳನ್ನು ತನ್ನಲ್ಲಿ ಬರಮಾಡಿಕೊಳ್ಳುವದು, ವ್ಯವಹಾರವನ್ನು ಸರಿಯಾಗಿ ನಿರ್ವರ್ತಿಸುವದು, ಮತ್ತು ನೈತಿಕಾಚರಣೆ ಇವುಗಳಲ್ಲಿ ವಚನಕಾರರು ಭಿನ್ನತ್ವವನ್ನು ಎಣಿಸುವದಿಲ್ಲ. ಇವೆಲ್ಲವೂ ಒಂದೇ ಎಂದು ಅವರ ಅಭಿಪ್ರಾಯವು. ಪ್ರತಿಯೊಬ್ಬ ವಚನಕಾರನ ವಚನಗಳಲ್ಲಿ ಈ ಬಗೆಯ ವಿಚಾರಗಳು ತುಂಬಿ ಹೋಗಿರುತ್ತವೆ. ಆದರೆ ಅವುಗಳನ್ನು ವಿವರಿಸುವ ರೀತಿಗಳು ಮಾತ್ರ ಅವರವರ ಬಗೆಯ ಪ್ರಕಾರ ಭಿನ್ನ ಭಿನ್ನ ತೆರನಾಗಿರುತ್ತವೆ. ಅವರಲ್ಲಿ ಅಂಬಿಗರ ಚೌಡಯ್ಯನು ಈ ವಿಷಯವನ್ನು ಅತ್ಯಂತ ಸ್ಪಷ್ಟರೀತಿಯಿಂದ ಹೇಳುವದುಂಟು. ಅವನು ಬಹುಗಂಭೀರವಾಗಿಯೂ, ಹಾಗೆಯೇ ಅತ್ಯಂತ ಸ್ಫುಟವಾಗಿಯೂ ಹೇಳುವ ಅವನ ತರಹವು ಅಪ್ರತಿಮವಾಗಿರುತ್ತದೆ.

**೩೫ ವಚನಃ—** ಆಳಾಪದ ಸೊಬಗು, ಘಂಟಾವಾದ್ಯದ ಕೂಗಿನ ಕೊರಚು, ಪರಿಚಾರಕರೆಡೆಯಾಟದಿಂದ ಸೊಬಗು ಮರೆಯಿತ್ತು. ಎನಗಿನ್ನಾವದೂ ಇಲ್ಲ. ಇನ್ನೇವೆನೆಂದನಂಬಿಗರ ಚೌಡಯ್ಯ.

**ಭಾವಃ —** ಗಾಯಕರ ಗಾಯನದ ಇಂಪು, ದೇವಾಲಯಗಳಲ್ಲಿ ಬಾರಿಸುವ ಗಂಟೆಯ ನಾದ, ಇಲ್ಲವೆ ಪರಿಚಾರಕರಿಂದ ತನ್ನ ಸೇವೆ ಮಾಡಿಸಿಕೊಳ್ಳುವದು ಇವೆಲ್ಲವು ಹೊರಗಿನ ತೋರಿಕೆಗಳು. ಅವು ಬಾಹ್ಯ ಸೌಂದರ್ಯ

ವನ್ನು ಹೆಚ್ಚಿಸುತ್ತವೆ. ಇನಾವೂ ನನ್ನಲ್ಲಿ ಇಲ್ಲವಲ್ಲ! ಇನ್ನೇನು ಮಾಡಲಿ!! ಎಂದು ದುಃಖಿತನಾದವನಂತೆ ನಟಿಸುತ್ತ ವಚನಕಾರನು ಇವುಗಳನ್ನು ಹೀಯಾಳಿಸುತ್ತಾನೆ.

೩೬. **ವಚನ:**— ಕಾಯುವ ಶೃಂಗಾರ ಕಾಮಿನಿಯರ ಕೂಟಕ್ಕೊಳಗು. ಜೀವನ ಬಾಳುವೆ ಸಕಲ ಜೀವಂಗಳಲ್ಲಿ ಸಾಧನೆ, ಕಾಯುದ ಶೃಂಗಾರ, ಜೀವನಭವ ಎರಡರ ಠಾವನರಿಯಬೇಕೆಂದನಂಬಿಗರ ಚೌಡಯ್ಯ.

**ಭಾವ:**— ಮನುಷ್ಯನು ತನ್ನ ದೇಹವನ್ನು ಶೃಂಗಾರ ಮಾಡಿಕೊಳ್ಳುತ್ತಾನೆ. ಇದರಿಂದ ಅವನು ವ್ಯಭಿಚಾರಿಯಾಗುವ ಸಂಭವವಿದೆ. ಸಂಸಾರದಲ್ಲಿ ಮಗ್ನನಾದವನು ತನ್ನೊಡನೆ ಇದ್ದ ಜನರ ಕೂಡ ಕೆಲವೊಂದು ಉದ್ದೇಶ ಸಾಧನೆಯನ್ನು ಇಟ್ಟುಕೊಂಡು ನಡೆಯುತ್ತಾನೆ. ಇವೆರಡೂ ಸರಿಯಾದವುಗಳಲ್ಲ. ಅವುಗಳಿಂದ ದೂರಿರಬೇಕೆಂದು ವಚನಕಾರನ ಭಾವವು.

೩೭ **ವಚನ:**— ಎಲುವೆಂಬ ಹಂಜರ ತಟ್ಟಾಗಿ ಉಭಯವ ಘಟ್ಟಿಸಿದ ತೊಗಲು, ಬ್ರಹ್ಮನೆಂಬ ಅಳಿಲೆಯ ಕಾಯಲ್ಲಿ ವಿಷ್ಣುವೆಂಬ ನೀರ ಹೊಯ್ದು, ರುದ್ರನೆಂಬ ಚೂರ್ಣದಲ್ಲಿ ಖಾರಕ್ಕೆ ಮೆಟ್ಟಿಲಾಗಿ ತೊಗಲು ಹೊಲಸು ಕೆಟ್ಟಿತ್ತು. ಹರಿಗೋಲು ಪುದುವಾಯಿತ್ತು. ವರ್ತನವೆಂಬ ಹುಟ್ಟು ಹಿಡಿದು ಮಾಟಕೂಟವೆಂಬ ಹೊಳೆಯ ದಾಂಟುತ್ತಿದೆನೆಂದನಂಬಿಗರ ಚೌಡಯ್ಯ.

**ಭಾವ:**—ವಚನಕಾರನು ತಾನು ಎಂಥ ಹರಿಗೋಲಲ್ಲಿ ದಾಟುತ್ತಿದ್ದೇನೆಂಬುದನ್ನು ತಿಳಿಸಿ ಹೇಳುತ್ತಾನೆ. ದೇಹದಲ್ಲಿ ಎಲವು, ತೊಗಲು ಇವೆ. ಈ ತೊಗಲನ್ನು ನಾನು ಮೊದಲು ಸರಿಯಾಗಿ ಹದಮಾಡುತ್ತೇನೆಂದು ಹೇಳುತ್ತಾನೆ. ಅದರ ರೀತಿಯನ್ನೂ ಇದರಲ್ಲಿ ಹೇಳಿದ್ದಾನೆ. ಇಂಥ ಹರಿಗೋಲು ಮಾಡಿ ಸದ್ವರ್ತನೆ ಎಂಬ ಹುಟ್ಟು ಹಿಡಿದು ಕರ್ಮವೆಂಬ ಹೊಳೆಯನ್ನು ದಾಟುತ್ತೇನೆಂದು ಹೇಳುತ್ತಾನೆ.

೩೮. **ವಚನ:**— ಕಂಗಳು ನೋಡುವ ದೃಷ್ಟಿ, ಕರಣೇಂದ್ರಿಯವೆಂಬ ಬಹುಜನಂಗಳು ಕೂಡಿ ಆಸೆ ಎಂಬ ಹೊಳೆಯ ದಾಂಟುವದಕ್ಕೆ ಹುಟ್ಟುಗಾಣದೆ ಹರಿಗೋಲ ಇಟ್ಟಲೆ ಉಳಿಯಿತ್ತೆಂದನಂಬಿಗರ ಚೌಡಯ್ಯ.

**ಭಾವ:**— ದೇಹವೆಂಬುದು ಹರಿಗೋಲದಂತಿದ್ದು ಇದರ ಸಹಾಯದಿಂದ ಸಂಸಾರವೆಂಬ ಹೊಳೆಯನ್ನು ದಾಟತಕ್ಕದ್ದು. ಇದು ನನ್ನಿಂದ ಆಗ

ದ್ದರಿಂದ ಆ ಹರಿಗೋಲು ಇದ್ದಲ್ಲಿಯೇ ಉಳಿಯಿತೆಂದು ಹೇಳುತ್ತಾನೆ. ಯಾಕೆಂದರೆ ನನ್ನ ಕಣ್ಣುಗಳು ನಾನೆತ್ತ ಹೋಗಬೇಕೆಂಬುದನ್ನು ಸೂಚಿಸ ತಕ್ಕದ್ದು. ಅವು ಹಾಗೆ ಸೂಚಿಸುವದಿಲ್ಲ. ಕರ್ಣೇಂದ್ರಿಯಗಳು ನನ್ನ ಸುತ್ತಲೂ ಮುಕುರಿರುತ್ತವೆ. ಅವುಗಳು ನನ್ನಲ್ಲಿ ಅನೇಕ ದುರಾಸೆಗಳನ್ನು ಉಂಟು ಮಾಡುತ್ತವೆ. ಅವುಗಳಲ್ಲಿ ನಾನು ಸಿಕ್ಕಿಕೊಂಡು ಅವುಗಳೊಳಗಿಂದ ಪಾರಾ ಗಿಹೋಗಲು ಬೇಕಾಗುವ ಹುಟ್ಟು ನನ್ನಲಿ ಇಲ್ಲದ್ದರಿಂದ ನನ್ನಲ್ಲಿ ಹರಿಗೋಲು ಅಲ್ಲಿಯೇ ನಿಂತಿತೆಂದು ವಚನಕಾರನು ಹೇಳುತ್ತಾನೆ.

೩೯. **ವಚನ:**— ಪಿಸಿತದ ನಡುವೆ ಇದ್ದ ಕಿರಾತ ಹೊರವಾಸನೆಯ ಬಲ್ಲನೇ ? ಸಕಲ ವ್ಯಾಪಾರದಲ್ಲಿ ಮೂಡಿ ಮುಳುಗುವಂಗೆ ಸುಖದ ನಿಜರೂ ಪವ ಬಲ್ಲನೇ ? ವಿಕಳತೆಗೊಂಡು ಅಖಿಳರ ಕೂಡಿ ಸುಖದು:ಖದಲ್ಲಿ ಜೀವಂಗೆ ಅಕಳಂಕತನ ಉಂಟೇ ? ಎಂದನಂಬಿಗರ ಚೌಡಯ್ಯ.

**ಭಾವ:**— ಬೇಡನು ಯಾವಾಗಲೂ ಮಾಂಸದ ರುಚಿಯನ್ನು ರುಚಿ ಸುವವನು. ಅವನು ಅದನ್ನು ಬಿಟ್ಟು ಬೇರೊಂದನ್ನು ವಾಸಿಸಲಾರನು. ಸಂಸಾ ರದಲ್ಲಿ ಇರುವವನಿಗೆ ನಿಜಸುಖವು ತೋರಲಾರದು. ಯಾವನು ಲೋಕ ದಲ್ಲಿದ್ದುಕೊಂಡು ಆದರ ಸುಖದು:ಖಗಳಲ್ಲಿ ಇರುತ್ತಾನೋ ಅವನಿಗೆ ನಿಷ್ಕಳಂಕ ನಾದ ಪರಮಾತ್ಮನು ದೊರಕಲಾರನೆಂಬ ಭಾವವಿದೆ.

———

## ದುರ್ಗುಣಗಳನ್ನು ಬಿಡು.

೪೦. **ವಚನ:**— ಮೃಡನನೊಲಿಸಿಹೆನೆಂದು ನುಡಿವ ನಾಲಿಗೆ ಎಡ ಹಿದಲ್ಲಿ, ಅದು ಕಲ್ಲು ಕೊರಡೆ ? ಒಡಲಿಂಗೆ ಹೊನ್ನು ಹೆಣ್ಣು ಮಣ್ಣು ಅಡ್ಡ ಬಿದ್ದು ಕೊಲುವಾಗ ನಡೆವ ಗಂಡರುಂಟೇ ? ತನ್ನೊಡಲೊಳಗಣ ಅನ್ನ ಮರಳಿದೊಡೆ ಹೇಸುವಂತೆ, ಹೇಸಿ ಬಿಟ್ಟಡೆ ನಡೆದು ಶಿವನ ಕೂಡು ವನೆಂದಾತನಂಬಿಗರ ಚೌಡಯ್ಯ.

**ಭಾವ:**— ಮನುಷ್ಯನು ತನ್ನ ಪ್ರಪಂಚದಲ್ಲಿ ಹುಟ್ಟಿ ಹುಟ್ಟಿ ಬರ ಲಿಕ್ಕೆ ಅವನು ಮಾಡುವ ಕೃತ್ಯಗಳೇ ಕಾರಣವು. ಈ ಹುಟ್ಟನ್ನು ತೊಲ ಗಿಸಿ ಮೋಕ್ಷವನ್ನು ಹೊಂದಬೇಕಾದರೆ ಮೃದು ನುಡಿಗಳನ್ನು ಯಾವಾಗಲೂ

ನ್ನಡಿಯಬೇಕು. ಧನಲೋಭ ದುರಾಚಾರಗಳನ್ನು ಬಿಡಬೇಕು. ಅನ್ನವನ್ನು ಉಂಡಬಳಿಕ ಕಾರಿಕೊಂಡಲ್ಲಿ ಈ ಕಾರಿಕೆಯು ಹೇಗೆ ತ್ಯಾಜ್ಯವೂ ಅಸಹ್ಯವೂ ಎನಿಸುತ್ತದೋ ಹಾಗೆಯೇ ಮನುಷ್ಯನು ತನ್ನೊಳಗಿಂದ ಹೊರಗೆ ಬರುವ ದುರ್ಗುಣಗಳು ತ್ಯಾಜ್ಯವೆಂದು ತಿಳಿಯಬೇಕು. ಹೀಗೆ ವರ್ತಿಸಿ ಆಚರಿಸಿದರೆ ಅವನು ಮೋಕ್ಷವನ್ನು ಹೊಂದುತ್ತಾನೆ.

೪೦. **ವಚನ:**—ನುಡಿದ ನುಡಿವ ಶಬ್ದವೇ ? ಕಾಯದ ಕಳವಳಕ್ಕೆ ಒಡಲುಗೊಂಡವರೆಲ್ಲ ಕೇಳಿರಯ್ಯ. ಸಂಧ್ಯಾ, ನೇಮ, ನಿತ್ಯ, ಜಪ, ತಪ, ಸಮಾಧಿಯೊಳಾನೆಂಬ ನುಡಿಯೊಳಗಿರ್ದು ನುಡಿದು ತಪ್ಪಿದೆನೆಂಬ ಈ ನುಡಿಗೆ ನಾಚುವೆನೆಂದನಂಬಿಗಚೌಡಯ್ಯ.

**ಭಾವ:**— ವಚನವು ಅಶುದ್ಧವಿರುವದರಿಂದ ಭಾವವು ಚನ್ನಾಗಿ ಆಗುವದಿಲ್ಲ.

ಮಾತಾಡಿದ ಬಳಿಕ ಅದು ಕೇವಲ ಶಬ್ದವಲ್ಲ. ನುಡಿದಂತೆ ನಡೆಯಬೇಕೆಂದು ಇದರ ಮುಖ್ಯಾರ್ಥವಿದ್ದಂತೆ ತೋರುತ್ತದೆ.

———

## ನೈತಿಕ ವಚನಗಳು.

೪೧. **ವಚನ:**— ಐಶ್ವರ್ಯ ದುಃಖದಲ್ಲಿ ಜೀವ ಹೊಲೆ ಸಂಸಾರವನೆ ಕಚ್ಚಿ, ಕೊಲೆಗೀಡಾಗದೆ ಸಲೆ ಸತ್ಯ ಸದಾಚಾರದಲ್ಲಿ ನಡೆ. ಸಟೆಯನೆ ಬಿಡು. ದಿಟವನೆ ಹಿಡಿ. ಈ ಘಟವುಳ್ಳನ್ನಕ್ಕ ಕಾಲದಲ್ಲಿ ಶಿವಭಕ್ತಿಯ ನಟಿಸಿ ನಡೆ ಎಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವ:**— ಮನುಷ್ಯನು ಐಶ್ವರ್ಯ ಬಂದರೆ ಸುಖವೆಂದು ಭಾವಿಸುವನು. ಆದರೆ ಅದು ದುಃಖವೆಂದು ಅಂಬಿಗರಚೌಡಯ್ಯನು ಅಂದಿರುವನು. ಯಾಕಂದರೆ ಅದು ಸಂಸಾರಕ್ಕೆ ಒಳಗು ಮಾಡಿ, ಕೊಲೆಮಾಡಿಸುವದು, ಸುಳ್ಳು ಹೇಳಿಸುವದು, ದುರಾಚಾರಕ್ಕೆ ಹಚ್ಚುವದು. ಇಂಥ ಸಂಸಾರವನ್ನು ಬಿಟ್ಟುಕೊಟ್ಟು, ಶಿವಭಕ್ತಿಯಿಂದ ನಡೆ ಎಂದು ವಚನಕಾರನು ಉಪದೇಶಿಸಿದ್ದಾನೆ.

೪೨. **ವಚನ:**— ಹೊಡೆವಟ್ಟು ದೇವರ ತಲೆಯ ತಾಟಿಸಿಕೊಂಬರು. ನೆಲಕೆಯೂ ತಲೆಗೆಯೂ ನಂಟುತನವೇ ? ಕೊಲಬೇಡ ಪ್ರಾಣಿಗಳ. ಗೆಲ

ಬೇಡ ನಂಬಿದರ, ಛಲವ ಸಾಧಿಸಬೇಡ ಗೋತ್ರದಲ್ಲಿ. ಕೊಲುವವ ಗೆಲುವವ, ಛಲವ ಸಾಧಿಸುವ ಹೊಲೆಯು ಮಾದಿಗನೆಂದನಂಬಿಗಚೌಡಯ್ಯ.

**ಭಾವ:—** ಅನೇಕರು ಶಿವಭಕ್ತಿಯನ್ನು ಮಾಡಬೇಕೆಂದು ದೇವರ ಮುಂದೆ ಸಾಷ್ಟಾಂಗಹಾಕಿ ತಲೆಯನ್ನು ನೆಲಕ್ಕೆ ಹಚ್ಚುವರು. ಹೀಗೆ ಮಾಡ ಬೇಕಾದರೆ ನೆಲಕ್ಕೂ ತಲೆಗೂ ಏನಾದರೂ ನೆಂಟುತನವಿರುತ್ತದೆಂದು ತಿಳಿದು ಹೀಗೆ ಮಾಡುವಿರೋ ಎಂದು ಅಂಬಿಗರಚೌಡಯ್ಯನು ಕೇಳಿರುವನು. ಆದರೆ ಹೀಗೆ ಬಹಿರಂಗ ಕ್ರಿಯೆಗಳನ್ನು ಮಾಡುವದಕ್ಕಿಂತ ಪ್ರಾಣಿಗಳಲ್ಲಿ ದಯವಿರ ಬೇಕು. ನಂಬಿದವರ ವಿಶ್ವಾಸದ ದುರುಪಯೋಗ ಮಾಡಬಾರದು. ಬಂಧು ಬಳಗದವರೊಡನೆ ಛಲವನ್ನು ಸಾಧಿಸಬಾರದು. ಹೀಗೆ ಯಾವನು ನಡೆಯುವ ದಿಲ್ಲವೋ ಅವನು ಮಾದಿಗನೆಂದು ವಚನಕಾರನು ಅಂದಿರುವನು.

**೪೩. ವಚನ:—** ಎತ್ತ ಸುತ್ತಿ ಬಂದರೂ ಊರಿಗೆ ಬಪ್ಪುದು. ತಪ್ಪದು. ಹಲವು ಮಾತನಾಡಿದಡೇನು ? ಮೂರು ಮಲವ ಮರೆದಿರಬೇಕು. ಹೊಲಬು ದಪ್ಪಿದ ಮೃಗ ಬಲೆಯೊಳಗೆ ಬಿದ್ದಂತಾಗಬೇಡ. ಇದನರಿತು ಬದು ಕೆಂದ ಅಂಬಿಗರಚೌಡಯ್ಯ.

**ಭಾವ:—** ಊರಿಗೆ ಬರಲಿಕ್ಕೆ ಅನೇಕ ಹಾದಿಗಳು ಉಂಟು. ಆದರೆ ಊರಿಗೆ ಮುಟ್ಟಬೇಕೆಂಬ ಧ್ಯೇಯವು ಇರುವದರಿಂದ ಯಾವ ಹಾದಿಯಿಂದ ಬಂದರೂ ಮನುಷ್ಯನು ಅಲ್ಲಿಗೆ ಬಂದು ಮುಟ್ಟುಪನು. ಹಾಗೆಯೇ ನಾನಾ ವಿಧ ವಿಚಾರಗಳು ಮನಸ್ಸಿನಲ್ಲಿ ಬರಬಹುದು. ಆದರೆ ದೇಹ ಸಂಬಂಧದ ಮಾಯಾ ಸಂಬಂಧದ ಮತ್ತು ಕರ್ಮ ಸಂಬಂಧದ ಮೂರು ಮಲಗಳನ್ನು ಬಿಟ್ಟುಕೊಟ್ಟು ಯಾವನು ವ್ಯವಹರಿಸುತ್ತಾನೋ ಅವನು ಪರಮಾತ್ಮನನ್ನು ನಿಶ್ಚಯವಾಗಿ ಮುಟ್ಟುವನು. ಏನು ಮಾಡಬೇಕೆಂಬುದನ್ನು ತಿಳಿಯದೆ ಚಿಗ ರಿಯು ಹೇಗೆ ಬಲೆಯೊಳಗೆ ಬಿದ್ದು ಒದ್ದಾಡಿ ಸಾಯುವದೋ ಹಾಗೆ ಮಾತ್ರ ವರ್ತಿಸಬಾರದು. ಪರಮಾತ್ಮನೊಬ್ಬನ ಕಡೆಗೆ ಧ್ಯೇಯವಿಟ್ಟು ವರ್ತಿಸಿದರೆ ಬದುಕುವಿ ಎಂದು ವಚನಕಾರನು ಹೇಳಿರುವನು.

**೪೪ ವಚನ:—** ತಿಂಬ ಜಾತಿಗೆ ಮೇವ ಹಾಕಿ ಕರುಳು ಕಂಡವ ಕೊಯ್ದು ತಿಂಬುವನಂತೆ ದಾತರಿಗೆ ಚಂದದ ಮಾತನಾಡಿ ಮೂರು ಮಲ ಸಂಧಿಸಿಕೊಂಬುವಂಗೆ ಲಿಂಗವಿಲ್ಲೆಂದನಂಬಿಗ ಚೌಡಯ್ಯ.

**ಭಾವ:—** ಮಾಂಸ ಭಕ್ಷಕನು ತಾನು ತಿನ್ನುವಂಥ ದನಗಳಿಗೆ ಮೇವನ್ನು ಹಾಕಿ ಅವುಗಳನ್ನು ಪುಷ್ಟ ಮಾಡಿ ಕಡೆಗೆ ಅವನ್ನು ಹೇಗೆ ಕೊಂದು ತಿಂದು ಬಿಡುತ್ತಾನೋ, ಹಾಗೆ ದಾನಮಾಡುವಂಥ ಜನರಿಗೆ ಚಂದದ ಮಾತುಗಳನ್ನು ಹೇಳಿ ಅವರನ್ನು ಮೋಸಗೊಳಿಸಿ ಅವರ ಧನದ ಅಪವ್ಯಯ ಮಾಡಿ ಮಲದಲ್ಲಿ ಬಿದ್ದು ಯಾವನು ಗಾಸಿಯಾಗುತ್ತಾನೋ ಅವನಿಗೆ ಲಿಂಗವಿಲ್ಲೆಂದು ಇಲ್ಲಿ ವಚನಕಾರನು ಹೇಳಿದ್ದಾನೆ.

**೪೫. ವಚನಃ—** ಮೂರುವ ಮುಟ್ಟದೆ, ನಾಲ್ಕುವನಂಟದೆ. ಐದುವ ನೆಚ್ಚಲುಬೇಡ ಕಂಡಾ. ಆರರು ಜಾರದೆ, ಏಳುವ ಹಿಡಿಯದೆ, ಎಂಟುವ ಗಂಟಿಕ್ಕಬೇಡ ಕಂಡಾ. ಒಂಬತ್ತು ಬಾಗಿಲು ಹಿಂದಿಕ್ಕಿ ಹೋದರೆ ಅಂಬಿಗ ಚೌಡಯ್ಯನ ಉಪದೇಶ.

**ಭಾವಃ—** ಮನುಷ್ಯನಲ್ಲಿ ಕಿವಿ, ಕಣ್ಣು, ಮೂಗು ಇತ್ಯಾದಿ ನವ ರಂಧ್ರಗಳಿವೆ ಇವುಗಳ ಮೂಲಕ ಅವನಲ್ಲಿ ಅನೇಕ ಬಗೆಯ ವಿಕಾರಗಳು ಉತ್ಪನ್ನವಾಗುತ್ತವೆ, ಇವುಗಳೇ ಮನುಷ್ಯನನ್ನು ದುಃಖಕ್ಕೆ ಒಳಗು ಮಾಡುತ್ತವೆ. ಮತ್ತು ನರಕದಲ್ಲಿ ಹಾಕುತ್ತವೆ. ಈ ಸ್ಥಿತಿಯು ಉಂಟಾಗದಿರಲು ಮನುಷ್ಯನು ಮೂರು ಮಲಗಳನ್ನು ಬಿಟ್ಟುಕೊಡಬೇಕು. ಅಂಗಚತುಷ್ಟಯಗಳಿಗೆ ಅಂಟಿಕೊಳ್ಳಬಾರದು. ಪೃಥಿವ್ಯಾದಿ ಪಂಚಭೂತಗಳನ್ನು ನಂಬಬಾರದು. ಜಾತಿ ವರ್ಣ, ಆಶ್ರಮ, ಕುಲ, ಗೋತ್ರ, ನಾಮ ಇವುಗಳಿಗೆ ಸಂಬಂಧಿಸಿದ ಷಡ್ಭ್ರಮೆಗಳನ್ನು ದೂರಮಾಡಬೇಕು. ತನುವ್ಯಸನ ಧನವ್ಯಸನ ರಾಜ್ಯವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ, ವಿಶ್ವವ್ಯಸನವೆಂಬ ಸಪ್ತ ವ್ಯಸನಗಳನ್ನು ಬಿಡಬೇಕು. ಕುಲಮದ ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜ್ಯಮದ, ತಪೋಮದ ಎಂಬ ಅಷ್ಟಮದಗಳನ್ನು ಕಟ್ಟಿಕೊಳ್ಳಬಾರದು. ಹೀಗೆ ವರ್ತಿಸಿದಲ್ಲಿ ಮೇಲೆ ಹೇಳಿದ ಒಂಬತ್ತು ಬಾಗಿಲುಗಳನ್ನು ದಾಟಿ ಪರಮಾತ್ಮನ ಸಮೀಪಕ್ಕೆ ಹೋಗುವನು.

**೪೬. ವಚನ:—** ಲಿಂಗ ತನುವಿಂಗೆ ಶೃಂಗಾರವಪ್ಪ ತೆರನಾವುದೆಂದೊಡೆ ಕಾಮ, ಕ್ರೋಧ, ಲೋಭ, ಮೋಹಾದಿಗಳಲ್ಲಿ ತೆರಪುಗೊಡದಿಪ್ಪುದು. ಲಿಂಗವೇ ಅಂಗವಾಗಿ ಧ್ಯಾನ ಧಾರಣ ನಿಜ ಸಮಾಧಿ ನಿವಾಸವಾಗಿ ನಿಶ್ಚಯ ನಿಜ ತತ್ವವಾಗಿ ನಿಂದುದೆ ಆಭರಣವೆಂದನಂಬಿಗಚೌಡಯ್ಯ.

**ಭಾವ:**— ಎಲ್ಲರೂ ತಾವು ಜನರಲ್ಲಿ ಸೌಂದರ್ಯವುಳ್ಳವರಾಗಿ ಕಾಣಬೇಕೆಂದು ಅಪೇಕ್ಷಿಸುತ್ತಾರೆ. ಆದ್ದರಿಂದ ಅವರು ಆಭರಣಾದಿಗಳನ್ನು ಮತ್ತು ಅನೇಕ ಬಗೆಯ ವಸ್ತ್ರಗಳನ್ನು ತೊಟ್ಟುಕೊಂಡು ಜನರ ದೃಷ್ಟಿಯಲ್ಲಿ ಹೊಳಪುಳ್ಳವರಾಗಿ ಕಾಣಲು ಬಗೆಯುತ್ತಾರೆ. ಆದರೆ ಲಿಂಗಾಂಗಿಗಳಿಗೆ ಪಂಚಭೂತದಿಂದಾದ ತನುವಿಲ್ಲ. ಅವರಿಗೆ ಲಿಂಗವೇ ತನುವಾಗಿರುತ್ತದೆ. ಆದ್ದರಿಂದ ಇಂಥವರ ಶರೀರಗಳು ಸೌಂದರ್ಯಯುಕ್ತವಾಗಿ ತೋರಬೇಕಾದರೆ ಕಾಮ ಕ್ರೋಧಾದಿಗಳಿಗೆ ಅವರು ಸ್ಥಾನ ಕೊಡಬಾರದು. ಹೀಗೆ ವರ್ತಿಸುವದೇ ನಿಜವಾದ ಆಭರಣಗಳನ್ನು ತೊಟ್ಟಂತೆ, ಎಂದು ವಚನಕಾರನ ಅಭಿಪ್ರಾಯವು. ಹೀಗೆ ಲಿಂಗವೇ ಅಂಗವಾಗಿದ್ದು, ಲಿಂಗಧ್ಯಾನ ಲಿಂಗಧಾರಣ ಲಿಂಗಸಮಾಧಿ ಇವುಗಳಲ್ಲಿಯೇ ವಾಸಸ್ಥಳವುಳ್ಳವರಾಗಿ ಯಾರು ವ್ಯವಹರಿಸುತ್ತಾರೋ ಅವರಲ್ಲಿ ಪರಮಾತ್ಮನ ನಿಜತತ್ವ ಉಳಿಯುವುದು. ಹೀಗೆ ವರ್ತಿಸುವವರು ಎಲ್ಲರಿಗೂ ದರ್ಶನೀಯರಾಗುವರು.

**೪೭. ವಚನ:**— ಆಶೆಯುಳ್ಳಾತ ಒಬ್ಬರಧೀನದಲ್ಲಿಪ್ಪನು. ಆಶೆಯ ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ಅಂಬಿಗರ ಚೌಡಯ್ಯ.

**ಭಾವ:**— ನಿರಾಶೆಯುಳ್ಳವನೇ ನಿಜವಾದ ಸ್ವತಂತ್ರತೆಯುಳ್ಳವನೆಂದು ವಚನಕಾರನ ಅಭಿಪ್ರಾಯವು. ಮನವು ಯಾವಾಗಲೂ ಆಶಾಯುಕ್ತವಾಗಿರುತ್ತದೆ. ಇಂಥ ಮನದ ನಿಜಸ್ಥಿಯನ್ನು ಯಾವನು ತಿಳಿದಿರುತ್ತಾನೋ ಅವನು ಕೈಲಾಸದಾಚೆಗೆ ಹೋಗುವನು. ಅಂದರೆ ಅವನನ್ನು ಬಂಧಿಸಲಿಕ್ಕೆ ಪರಮಾತ್ಮನಿಗೆ ಸಹ ಆಗದೆಂದು ವಚನಕಾರನ ಭಾವವು.

**೪೮. ವಚನ:**— ಮಾತುಗಂಟುಕತನದಿಂದೆಷ್ಟು ಮಾತನಾಡಿದಡೇನು? ಕಾಮಿನಿಯರ ಕಾಲ ದೆಶೆಯಲ್ಲಿ ಸಿಕ್ಕಿ ಕ್ರೋಧದ ದಳ್ಳುರಿಯಲ್ಲಿ ಬೆಂದು ಆಶೆ ಎಂಬ ಪಾಶ ಕೊರಳಲ್ಲಿ ಸುತ್ತಿ ಅದೇಕೋ ಅದೇತರ ಮಾತೆಂದನಂಬಿಗರ ಚೌಡಯ್ಯ?

**ಭಾವ:**— ಬರೇ ವಾಚಾಳನಾಗಿದ್ದರೆ ಏನು ಪ್ರಯೋಜನ? ಅನೇಕ ದುರ್ಗುಣಗಳು ತನ್ನಲ್ಲಿರಲು ಬರೇ ಮಾತನಾಡುವ ಏಕೆ ಎಂದು ವಚನಕಾರನು ನುಡಿದಿರುವನು.

೪೯. **ವಚನ**:— ನಿಲ್ಲಿಸಬಹುದಯ್ಯಾ ಒಂದೇ ಮಂತ್ರದಲ್ಲಿ ಕಾಳೋರಗನ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹಾರುವ ಪಕ್ಷಿಯನು. ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹೆಬ್ಬುಲಿಯ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಹೊಯ್ವ ಹೆಮ್ಮಾರಿಯ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಬರುವ ಉರಿಬಾಣವನು. ಇಂತಿವೆಲ್ಲವನು ಒಂದೇ ಮಂತ್ರದಲ್ಲಿ ನಿಲ್ಲಿಸಬಹುದು. ಲೋಭವೆಂಬ ಗ್ರಹಣವ ಹಿಡಿದವರ ಏತರಿಂದಲೂ ನಿಲ್ಲಿಸಲಾಗದು. ಈ ಲೋಭಕ್ಕೆ ದಾರಿದ್ರ್ಯವೇ ಔಷಧವು. ಹೇಳಿದರೆ ಕೇಳರು, ತಾವು ತಿಳಿಯರು. ಶಾಸ್ತ್ರವ ನೋಡರು. ಭಕ್ತಿಯ ಹಿಡಿಯರು. ಇಂತಹ ಗೊಡ್ಡ ಮೂಳ ಹೊಲೆಯರಿಗೆ ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವದೇ ಸತ್ಯವೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ**:— ಲೋಭವು ಹೆಬ್ಬಾವು, ಹುಲಿ, ಹೆಮ್ಮಾರಿ, ಉರಿಯುವ ಬಾಣ ಇವುಗಳಿಗಿಂತಲೂ ಘಾತುಕವಾದದ್ದೆಂದು ವಚನಕಾರನು ಇಲ್ಲಿ ಅನ್ನುತ್ತಾನೆ. ಲೋಭಕ್ಕೆ ಒಳಗಾದವನು ಬೇಕಾದ ದುಷ್ಟ ಕೃತ್ಯಗಳನ್ನು ಮಾಡಲು ಹೇಸುವದಿಲ್ಲ. ಯಾವ ಮಂತ್ರ ತಂತ್ರಗಳು ಅವನ ಮೇಲೆ ನಡಿಯಲಾರವು. ಇವನ ಲೋಭವನ್ನು ಹೋಗಲಾಡಿಸಬೇಕಾದರೆ ದಾರಿದ್ರ್ಯವೇ ಮದ್ದು. ಇಂಥವನು ಏನು ಹೇಳಿದರೂ ಕೇಳುವದಿಲ್ಲ. ತನಗೂ ತಿಳಿಯದು. ಶಾಸ್ತ್ರಗಳನ್ನೂ ನಂಬುವದಿಲ್ಲ. ಭಕ್ತಿಯನ್ನು ಎಂದೂ ಹಿಡಿಯುವದಿಲ್ಲ. ಇಂಥವನು ಕರ್ಮವೆಂಬ ಸಂಸಾರದಲ್ಲಿ ಬಿದ್ದು ಕಡೆಗೆ ನಷ್ಟ ಹೊಂದುವದೇ ಸತ್ಯವೆಂದು ವಚನಕಾರನು ಹೇಳಿರುವನು.

೫೦. **ವಚನ**:— ಕೂಡಿದ ಧನವೆಲ್ಲವನು ಗುರುಲಿಂಗ ಜಂಗಮಕ್ಕೆ ವಂಚನೆಯ ಮಾಡಿ ಒಳಗಿಟ್ಟುಕೊಂಡು, ನೆಲನ ತೋಡಿ ಬಚ್ಚಿಟ್ಟುಕೊಂಡು, ಹಲವು ತೆರದ ಆಭರಣಂಗಳ ಮಾಡಿಸಿ, ಕರ ಚರಣ ಉರ ಕರ್ಣಂಗಳೊಳಗಿಟ್ಟು, ಮತ್ತಿಷ್ಟು ಬದುಕಾಗಲೆಂದು ತನ್ನ ಕಯ್ಯೊಳಗಿನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡುವ ಲಿಂಗಪೂಜಕನ ಪರಿ ಎಂತೆಂದೊಡೆ, ಆ ಭಕ್ತನು ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ಸುಣ್ಣದ ನೀರನೆತ್ತಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಪನ್ನೀರಿನಿಂದ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ತಣ್ಣೀರೊಳಗದ್ದಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ವಿಭೂತಿಯ ಧರಿಸಿದರೆ ಲಿಂಗದ ಚಿತ್ತದಲ್ಲಿ



ಸಂಚಿಕೆ ೯ ಸಂಪುಟ ೪೨

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಸಪ್ಟೆಂಬರ ೧೯೫೯.

# ವಿಷಯಾನುಕ್ರಮಣಿಕೆ







# ಗುರುವು.

(ಲೇಖಕ:— ಎಸ್. ಬಿ. ಸಾವಳಿಗಿ, ಸಾರವಾಡ.)

---

ಈಗ ಜಗತ್ತಿನಲ್ಲಿ ಮಾನವನು ಹೋಗಿ ದಾನವನಾಗಲು ಪ್ರತಿಯೊಬ್ಬರೂ ಪ್ರಯತ್ನಪಡುತ್ತಲಿರುವರು. ಆದರೂ ಮಾನವನು ತನ್ನ ನಿತ್ಯಕಾರ್ಯಗಳನು ಮಾಡುವಾಗ ತನ್ನಿಂದ ಇತರರಿಗೆ ಹಿಂಸೆ ಆಗದಂತೆ ಸತ್ಯವ್ರತದಿಂದ ನಡೆದುಕೊಳ್ಳಬೇಕು. ಹೀಗೆ ಅಹಿಂಸಾ ಮಾರ್ಗದಿಂದ ನಡೆದು ಸತ್ಯವನ್ನು ಸಾಧಿಸಬೇಕಾದರೆ ನಮಗೆ ಯೋಗ್ಯ ಗುರುಗಳ ಅನುಕರಣವು ಬೇಕೇಬೇಕು. ಗುರುವು ಎಂಥವನಿರಬೇಕು ?

ಗುರುವಾದವನು ತನ್ನ ಶಿಷ್ಯನನ್ನು ತನ್ನಂತೆ ಮಾಡಿಕೊಂಡು ಶಿಷ್ಯ ಮತ್ತು ಗುರು ಇವುಗಳ ಭಾವವು ಸಮರಸವಾಗಿ ದೇವನೆಂಬ ಒಂದು ರೂಪಕ್ಕೆ ಬರಬೇಕು. ಅದುವೇ ಪ್ರತಿಯೊಬ್ಬ ಮಾನವನು ದೊರಕಿಸಿಕೊಳ್ಳುವ ವಸ್ತುವು

ಸಾಧಿಸಬೇಕಾದರೆ ಅದಕ್ಕಾ ದೆ ವಬಲಬೇಕು.

ಸುರತರು ಒಂದು ಮರವಲ್ಲ,
ಸುರಭಿಯೊಂದಾವಲ್ಲ ॥
ಪರುಷಪಾಷಾಣದೊಳಗಲ್ಲ ।
ಗುರುರಾಯನರರೊಳಗಲ್ಲ ॥೧॥

ಎಂದು ಹೇಳಿದ ವಚನವನ್ನು ನೋಡಿದರೆ ಗುರುವಿನ ಮಹತ್ವವು ಎಷ್ಟು ದೊಡ್ಡದಿದೆ ಎಂಬುದನ್ನು ಅರಿತುಕೊಳ್ಳಬೇಕು. ಬಸವೇಶ್ವರನು ಕೂಡ "ಶಿವಪಥವನರಿಯಲು ಗುರುಪಥವೇ ಮೊದಲು ಎಂದು ಸಾರಿಹೇಳಿದ್ದಾರೆ.

ರಾಮಕೃಷ್ಣಪರಮಹಂಸರು ತಮ್ಮ ಆಯುಃಷ್ಯದಲ್ಲಿ ಒಬ್ಬ ಯೋಗ್ಯ ಶಿಷ್ಯನು ದೊರೆಯಲಿಲ್ಲ ಅಂತಾ ಚಿಂತೆಗೊಂಡಿರುವರು. ಮತ್ತು ಅಂತಃಕರುಣ ದೃಷ್ಟಿಯಿಂದ ಅತ್ತರಂತೆ.

ಇತ್ತಕಡೆ ಸ್ವಾಮಿ ವಿವೇಕಾನಂದರು ಎಷ್ಟು ಅಭ್ಯಾಸಮಾಡಿದ್ದರು? ಇಂಗ್ಲೀಷ, ಸಂಸ್ಕೃತ, ಕನ್ನಡ, ಇನ್ನೂ ಎಷ್ಟೋ ಭಾಷೆಗಳನ್ನು ಅವರು ಅಭ್ಯಾಸ ಮಾಡಿದ್ದರು. ಸಾಲೆಯಲ್ಲಿ ಗುರುಗಳಿಗೆ ದೇವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲಿಕ್ಕೆ ಬರುತ್ತದೆಯೋ ಎಂದು ಪ್ರಶ್ನಮಾಡಲು ಸಾಲೆಯ ಗುರುಗಳು ಎಷ್ಟೇ ಪ್ರಯಾಸದಿಂದ ಅವನ ಪ್ರಶ್ನಗೆ ಉತ್ತರವನ್ನು ಪ್ರತಿಪಾದಿಸಿದರೂ ಅವನು ಸಮಾಧಾನಹೊಂದಲಿಲ್ಲ. ಕಡೆಗೆ ಅವನಿಗೆ ನೀನು ರಾಮಕೃಷ್ಣ ಪರಮಹಂಸರ ಹತ್ತರ ಹೋದರೆ ನಿನ್ನ ಪ್ರಶ್ನಗೆ ಸಮರ್ಪಕ ಉತ್ತರ ದೊರೆಯುವದು ಎಂದು ಹೇಳಲು, ಶ್ರೀರಾಮಕೃಷ್ಣಪರಮಹಂಸರನ್ನು ಹುಡುಕುತ್ತ ಬಂದರು. ಆ ವೇಳೆಗೆ ರಾಮಕೃಷ್ಣರು ಕಾಳಿಕಾದೇವಿಯ ಮುಂದೆ ಕುಳಿತು ತಮ್ಮ ದೇಹದ ಭಾವವನ್ನೇ ಮರೆತು ಆಕೆಯ ಪಾದದಲ್ಲಿ ಭಕ್ತಿಪರವಶರಾಗಿ ಕುಳಿತಿದ್ದರು. ವಿವೇಕಾನಂದರು ಬಂದು ಎಷ್ಟು ಹೊತ್ತಾದರೂ ರಾಮಕೃಷ್ಣರು ಈತನನ್ನು ಮಾತನಾಡಿಸಲಿಲ್ಲ. ಒಂದೆರಡು ತಾಸಿನನಂತರ ತಮ್ಮ ಸಮಾಧಿಸ್ಥಿತಿಯಿಂದ ಉತ್ಥಾನರಾಗಿ ಈತನನ್ನು ನೋಡಿದರಂತೆ ಆಗ ವಿವೇಕಾನಂದರು ಅವರಿಗೆ ನಮಸ್ಕರಿಸಿ, ತಾವು ಪ್ರಶ್ನೆಯನ್ನು ಕೇಳದೆ ಅಂಜಿ ಹೊರಗೆ ಹೋದರಂತೆ. ಗುಡಿ ದಾಟಿದ ಬಳಿಕ ಪುನಃ ನಾನು ಕೇಳುವ ಪ್ರಶ್ನೆಯನ್ನೇಬಿಟ್ಟೆನಲ್ಲ. ಅಂದುಕೊಂಡು ಆ ದಿನ ಹೋದರು. ಮರುದಿನ ಒಳ್ಳೇ ಧೈರ್ಯ ಮಾಡಿ ಈಹೊತ್ತು ಮರಿಯಬಾರದು. ಈ ಪ್ರಶ್ನೆಯನ್ನು ಕೇಳೇ ಹೋಗಬೇಕು ಅಂತಾ ಬಂದರು. ಆ ದಿನವೂ ಅವರನ್ನು ಕೇಳುವ ಸಾಮರ್ಥ್ಯ ಬರದೇಹೋದರು. ಮರುದಿನ ಪುನಃ ತಮ್ಮ ನಿಶ್ಚಲ ಮನಸ್ಸಿನಿಂದ, ಭಕ್ತಿ

ಪರವಶರಾಗಿ ಅವರ ಪಾದಕ್ಕೆ ನಮಿಸಲು, ಆಗ ರಾಮಕೃಷ್ಣಪರಮಹಂಸರೇ ನೀನು ದೇವರನ್ನು ತೋರಿಸು ಅಂತಾ ಬಂದಿರುವಿಯಲ್ಲವೇ ? ಎಂದು ಕೇಳಿದರು. ಅದಕ್ಕೆ ಅವನು ಹಸನ್ಮುಖಿಯಾಗಿ ಗುರುಗಳ ಪಾದಕ್ಕೆ ತನ್ನ ದೇಹವನ್ನೇ ಅರ್ಪಿಸಲು, ಆಗ ಅವರು ಯೋಗ್ಯ ಶಿಷ್ಯನು ದೊರೆತನೆಂದು ಆನಂದಿತರಾದರು. ರಾಮಕೃಷ್ಣ ಪರಮಹಂಸರು ಸಮಾಧಿಸ್ಥಿತಿಯನ್ನು ಹೇಳಿ ಅವನನ್ನು ದೇವತ್ವಕ್ಕೆ ಮುಟ್ಟಿಸಿದರು. ಆ ಸ್ಥಿತಿಯನ್ನು ಕಂಡು ಆನಂದಿತನಾಗಿ ಸದಾವಕಾಲವೂ ಸಮಾಧಿಸ್ಥಿತಿಯಲ್ಲಿ ಇರಲು ಆರಂಭಿಸಿದರು. ಆಗ ರಾಮಕೃಷ್ಣ ಪರಮಹಂಸರು ನೀನು ಈ ಪ್ರಕಾರ ಯಾವಾಗಲೂ ಸಮಾಧಿಸ್ಥಿತಿಯಲ್ಲಿ ಮಗ್ನನಾಗಿ ಕುಳಿತರೆ ನಿನ್ನಷ್ಟಕ್ಕೆ ನೀನೇ ದೇವನಾದಿ. ಆದರೆ ನಿನ್ನಿಂದ ಎಷ್ಟೋ ಲೋಕೋತ್ತರ ಕಾರ್ಯಗಳು ಆಗಬೇಕಾಗಿರುತ್ತವೆ ಎಂದು ಹೇಳಿ ಅವನನ್ನು ಪುನಃಲೋಕಸಂಗ್ರಹ ಕಾರ್ಯಕ್ಕೆ ತೊಡಗಿಸಿದರು. ಅದೇ ವಿವೇಕಾನಂದರು ದೇಶವಿದೇಶಗಳನ್ನು ತಿರುಗಿ ಪ್ರಚಂಡ ಅಧ್ಯಾತ್ಮ ತತ್ವಗಳನ್ನು ಜಗತ್ತಿನಲ್ಲಿ ಸಾರಿ ವಿಜಯಪತಾಕೆಯನ್ನು ಹಿಡಿದು ಮೆರೆದರು. ಎಷ್ಟೋ ಜನರನ್ನು ಉದ್ಧಾರ ಮಾಡಿದರು. ಅವರ ಆ ತತ್ವಗಳೇ ಇಲ್ಲಿಯ ವರೆಗೆ ಅಜರಾಮರವಾದದ್ದನ್ನು ತಿಳಿದುಕೊಂಡು ನಾವುಗಳೆಲ್ಲರೂ ಅಂಥ ತತ್ವಗಳ ಅನುಕರಣ ಮಾಡಿ ಮನವು ಅದರಲ್ಲಿ ಲೀನಗೊಂಡು ಸಮರಸ ಜ್ಞಾನವನ್ನು ಪಡೆದುಕೊಳ್ಳಬೇಕು. ಇದುವೇ ಮಾನವನಕರ್ತವ್ಯ. ಹುಟ್ಟಿಬಂದು ಸಕಲರೊಡನೆ ಮಿತ್ರ, ಬಂಧು ಭಾವದಿಂದ ನಡೆದುಕೊಂಡು ಎಲ್ಲರಿಗೆ ಬೇಕಾಗುವ ಗುರುತ್ವವನ್ನು, ಕಂಡು ಹಿಡಿದರೆ, ದೇವತ್ವವನ್ನು ಸಾಧಿಸಿದಂತಾಗುವದು. ಅಂಥ ಮಹತ್ವವನ್ನು ಪಡೆಯಲು ನಮ್ಮ ದೈನಂದಿನ ಕಾರ್ಯಗಳನ್ನು ಗುರುಗಳು ಹೇಳಿದಂತೆ ಆಚರಣೆಯಲ್ಲಿ ತಂದುಕೊಂಡು ತದನುಸಾರ ಕೈವಲ್ಯಪ್ರಾಪ್ತಿಯನ್ನು ಮಾಡಿಕೊಳ್ಳಬೇಕು.

ಬಸವಣ್ಣನವರು ಇದರ ಬಗ್ಗೆ ಒಂದು ಸ್ವಾರಸ್ಯವಾದ ವಚನವನ್ನು ಹೇಳಿರುವರು. ಅದು ಯಾವದೇಂದರೆಃ—

ಸ್ವರ್ಗಲೋಕ, ಮೃತ್ಯುಲೋಕ ಎಂಬುದು ಬೇರಿಲ್ಲಕಾಣಿರೋ,
ಸತ್ಯನುಡಿವುದೇ ಸರ್ಗಲೋಕ, ಮಿಥ್ಯನುಡಿವುದೇ ಮೃತ್ಯುಲೋಕ,
ಆಚಾರವೇ ಸ್ವರ್ಗ, ಅನಾಚಾರವೇ ನರಕ,
ಇಲ್ಲಿ ಸಲ್ಲುವವರು, ಅಲ್ಲಿಯೂ ಸಲ್ಲುವರು,
ಇಲ್ಲಿ ಸಲ್ಲದವರು, ಅಲ್ಲಿಯೂ ಸಲ್ಲರಯ್ಯಾ, ಕೂಡಲಸಂಗಮದೇವಾ

ಎಂದು ಅತಿಸುಂದರವಾಗಿ, ಪಂಡಿತ ಪಾಮರರಿಗೆ ತಿಳಿಯುವಂತೆ ಬೋಧಿಸಿದ್ದಾರೆ. ಇದನ್ನು ಅರಿತುಕೊಂಡು ನಾವು ಪ್ರಪಂಚದಲ್ಲಿ ಎಲ್ಲರ ಕೂಡ ಆನಂದಿತರಾಗಿ ನಡೆದುಕೊಂಡು, ಜನ್ಮಸಾರ್ಥಕಮಾಡಿಕೊಳ್ಳಬೇಕು.

ಪ್ರಭುದೇವರು ಶಿವಾನುಭ ಮಂಟಪವನ್ನು ಸ್ಥಾಪಿಸಿ ಅಲ್ಲಿ ಪ್ರತಿನಿತ್ಯ ತತ್ವಬೋಧ ಮಾಡುತ್ತಿದ್ದರು. ಬಸವೇಶ್ವರ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ ಮುಂತಾದ ಎಷ್ಟೋ ಮಂದಿ ಶಿವಶರಣರು ಕೈವಲ್ಯ ಪದವಿಯನ್ನು ಪಡೆದಿರುವರೆಂದು ಅವರವರ ವಚನ ತತ್ವಗಳೇ ಸಾಕ್ಷಿಯಾಗಿ ಈ ವರೆಗೂ ಅಚ್ಚಳಿಯದೆ ನಿಚ್ಚಳವಾಗಿ ಎಲ್ಲರ ಮೋಕ್ಷಸಾಧನೆಗೆ ಮಾರ್ಗದರ್ಶಕವಾಗಿ ಪರಿಣಮಿಸುವದನ್ನು ನಾವು ನಮ್ಮ ಅನುಭವ ಜ್ಞಾನದಿಂದ ಕಂಡುಕೊಳ್ಳಬೇಕು. ಇವರುಗಳೆಲ್ಲರ ದೇಹರೂಪಗಳು ಮರೆಯಾದರೂ ತತ್ವರೂಪವು ಎಂದಿನಂಗೆ ಪ್ರಜ್ವಲಿಸುತ್ತಲೇ ಇರುವದು. ಅದು ಮಾತ್ರ ನಾಶರಹಿತವು. (ಶಾಶ್ವತವು.)

ಇದೇ ೨೦ನೇ ಶತಮಾನದಲ್ಲಿ ಮಹಾತ್ಮಾ ಗಾಂಧಿಯವರು ಬಸವನ ತತ್ವಗಳನ್ನೇ ಚಾಚೂಬಿಡದೇ ನಡೆದು ತೋರಿಸಿದ್ದು ನಮ್ಮೆಲ್ಲರ ಪ್ರತ್ಯಕ್ಷ ಅನುಭವದ ಮಾತಾಗಿದೆ. ಗಾಂಧಿಯವರು ಹಿಂದುಸ್ತಾನದ ಜನರಿಗಷ್ಟೇ ಅಲ್ಲ, ಇಡೀ ಮಾನವ ಜಗತ್ತಿಗೆ ಅನ್ನ, ಅರಿವೆ, ವಸತಿಗಳು ದೊರೆಯಬೇಕು. ಎಲ್ಲರೂ ಸಮಾನಸ್ಕಂದರು ಎಂದು ಸಾರಿ ಹೇಳಿದರು. ಅವರು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹೆ, ಶರೀರ, ಶ್ರಮ, ಶ್ವಾದ, ಸರ್ವತ್ರಭಯವರ್ಜನ, ಸರ್ವಧರ್ಮಸಮಾನತ್ವ, ಸ್ವದೇಶಸ್ಪರ್ಶಭಾವನಾ ಈ ಏಕಾದಶ ವೃತನಿಶ್ಚಯ ಅಂತಾ ನಿಯಮವನ್ನು ನಮ್ಮೆಲ್ಲರಿಗೆ ನಡೆದು ತೋರಿಸಿದ್ದಾರೆ.

ಮಹಾತ್ಮರಿಗೆ ನೀವು ಸತ್ಯ ವೃತದಿಂದ ನಡಿದಿರಿ. ಎಂದು ಕೇಳಿದ್ದಕ್ಕೆ ಅವರು ನಾನು ಇನ್ನೂ ಪೂರ್ಣಸತ್ಯದಿಂದ ನಡೆಯುವದು ಆಗಿಲ್ಲ. ಇನ್ನೂ ಎಷ್ಟೋ ಜನರು ನನ್ನ ಮತಕ್ಕೆ ಹೊರತಿದ್ದಾರೆ ಲೋಕದ ಆ ಎಲ್ಲ ಜನರೂ ಒಪ್ಪಿದರೆ ಮಾತ್ರ ನನ್ನ ಸತ್ಯವೃತ ಪೂರ್ಣವಾಗುತ್ತಿತ್ತು ಅಂತಾ ಉತ್ತರಿಸಿದ್ದಾರೆ.

ಅವರವರದರುಶನಕೆ ಅವರವರ ವೇಷದಲಿ,
ಅವರವರಿಗೆಲ್ಲ ಗುರು ನೀನೊಬ್ಬನೇ,
ಅವರವರ ಭಾವಕ್ಕೆ ಅವರವರ ಪೂಜೆಗಂ
ಅವರವರಿಗೆಲ್ಲ ದೇವ ನೀನೊಬ್ಬನೇ

ಎಂಬ ಶ್ಲೋಕದ ಅರ್ಥವನ್ನು ಗಮನಕ್ಕೆ ತಂದುಕೊಂಡು ತದನುಸಾರ ವರ್ತಿಸಿದಲ್ಲಿ ನಾವು ಕೃತಾರ್ಥರಾದಂತಾಯಿತು.

———

# ದೇವತಾರ್ಚನೆ

[ ಲೇಖಕರು:- ಶ್ರೀಯುತ ಭೀ. ಶ್ರೀ ಕುಲಕರ್ಣಿ, ವಿಜಾಪುರ. ]

ನಮ್ಮ ಭರತಭೂಮಿಯು ಅಸಂಖ್ಯ ಭಕ್ತಜನರ ಹಾಗೂ ಅನೇಕ ತೀರ್ಥ ಕ್ಷೇತ್ರಗಳಿಂದೊಡಗೂಡಿದ ಪುಣ್ಯಭೂಮಿ ಎನಿಸಿಕೊಂಡಿದೆ. ಧನವಂತರು ತಮ್ಮ ಪಾಪದ ಹೊರೆಯಾದ ಧನವನ್ನು ಧಾರಾಳವಾಗಿ ಸುರಿದು, ಪುಣ್ಯಕ್ಷೇತ್ರಗಳ ಸಂದರ್ಶನ ಮಾತ್ರದಿಂದ ಪುಣ್ಯಪಡೆಯುವದೆಂದರೆ ಹಾಸ್ಯಾಸ್ಪದವೇ ಸರಿ. ಇಂಥ ಮೂಢ ಭಕ್ತರೇ ನಮ್ಮ ದೇಶದಲ್ಲಿ ಹೆಚ್ಚು ಜನ. ಹಣವಂತನೇ ಪುಣ್ಯವಂತ ನೆಂದು ನಂಬುವಂತೆಯೂ ಪುರಾಣ ಪುಣ್ಯಕಥೆಗಳ ಕಟ್ಟಳೆಯು ದೇಶವೇ ಈ ದೇಶ. ಹಿಂದಿನ ಕಾಲದಲ್ಲಿ ಕೃಷಿಕಾಯಕದ ಹೊರತಾಗಿ ಮಿಕ್ಕ ಕಾಯಕಗಳು ಅತಿ ವಿರಳವಾಗಿದ್ದುದರಿಂದ ಮನೆತನದ ಸರ್ವಜನರೂ ಒಂದುಗೂಡಿ ಆ ಕೃಷಿ ಉತ್ಪಾದನೆಯಿಂದಲೇ ಆನಂದದಿಂದಲೂ ಮನದ ಕೃತಾರ್ಥಕ್ಕಾಗಿ ದೇವತಾರ್ಚನೆ ಮುಂತಾದ ಭವ ಭಕ್ತಿಗಳಿಂದೊಡಗೂಡಿ ಜೀವಿಸುತ್ತಿದ್ದರು. ಹೀಗೆ ಒಂದೆಡೆ ಇರುವದರಿಂದ ಮನಸ್ಸಿಗೆ ಬೇಸರ ಬರುವದು ಸ್ವಾಭಾವಿಕವಾದ ಮೂಲಕ ಆಗಾಗ್ಗೆ ದೂರ ದೂರಿನ ದೇವಾಲಯುಗಳಿಗೆ ಸಂದರ್ಶನವೀಯುತ್ತಿದ್ದರು. ಆದರೆ ಇಂದಿನ ಯುಗದಲ್ಲಿ ಅನೇಕ ಮನರಂಜನೆಗಳು, ಉದ್ಯೋಗ ವ್ಯವಸಾಯುಗಳು ಹಾಗೂ ಸುಶಿಕ್ಷತೆಯಿಂದ ಆಯಾ ಕ್ಷೇತ್ರಗಳಿಗೆ ಬರಹೋಗುವ ಜನ ವಿರಳ ವಾಗಿ ಆಯಾ ಜನರಿಂದ ಸಂಪಾದಿತವಾಗುತ್ತಿದ್ದ ಅರ್ಚಕರ ಹಣ ಅವರ ಬದಲಾಗಿ ಮನರಂಜನಾ ಮಂದಿರಗಳು ಇಂದು ಪಡೆಯುತ್ತಲಿವೆ. ದಿನದಿನ ಗಳುರುಳಿದಂತೆ ಹೊಸ ಹೊಸ ಶೋಧ ಹಾಗೂ ಉಡುಪು ತೊಡಪುಗಳಿಗಾಗಿ ದಿನವೊಂದರ ಇಪ್ಪತ್ತುನಾಲ್ಕು ಗಂಟೆ ಕಾಲ ದುಡಿದರೂ ಹೊಟ್ಟೆಬಟ್ಟೆ ಮನ ರಂಜನೆ ಮುಂತಾದವುಗಳಿಗಾಗಿ ಹಣದ ಅಭಾವವಾಗಿ ಜೀವಿಸುವ ಈ ಕಾಲ ದಲ್ಲಿ ಅಂಥ ಕ್ಷೇತ್ರಗಳ ಸಂದರ್ಶನವಾದರೂ ಹೇಗೆ ? ಒಂದು ವೇಳೆ ಧನ ವಂತರು ಸಂದರ್ಶನವೀಯಬಹುದು. ಆದರೆ ಹಿಂದಿನ ವಾತಾವರಣವನ್ನೇ ಬದಲಾಯಿಸಿದ ಅನೇಕ ದೊಡ್ಡ ದೊಡ್ಡ ಪಟ್ಟಣಗಳು ವಿಲಾಸಕ್ಕೆ ಎನಿತೂ ಕಡಿಮೆಯಿಲ್ಲದ ಪುರಾಣಪುಣ್ಯಕತೆಗಳಲ್ಲಿ ಹೇಳುವ ಸ್ವರ್ಗವನ್ನೇ ಭುವಿಗೆ ತಂದಿರುವರೇನೋ ಎನ್ನುವಂತೆ ಮಾರ್ಪಡಿಸಿದ ಅನೇಕ ಸಿರಿವರು ಚಾಣಾಕ್ಷತೆ

ಯಿಂದ ಹಣ ಸುಲಿಯುವ ಪ್ರೇಕ್ಷಣೀಯ ಸ್ಥಳಗಳಿಗೆ ಆಗಾಗ್ಗೆ ಹೋಗುವ ದುಂಟು. ಹೀಗೆ ಒಂದು ಸಲ ಅಂಥ ಸ್ಥಳಗಳ ಸಂದರ್ಶನ ಪಡೆದವರು ಮರಳಿ ತಮ್ಮ ಮನೆಮಾರುಗಳು ಇಂಥ ಗ್ರಾಮದಲ್ಲಿವೆ ಎಂಬುದನ್ನು ಸಹ ಮರೆತು, ಅಸಂಖ್ಯ ಜನರಿಂದ ಇಕ್ಕಟ್ಟಾದ ಅಂಥ ಪಟ್ಟಣಗಳಲ್ಲಿ ಬರಹೋಗುವ ದಾರಿಗಳ ಎಡಬಲ ನಿದ್ರಿಸಿಯಾದರೂ ಜೀವಿಸುವಂತೆ ಮಾರ್ಪಡಿಸಿದ ಪಟ್ಟಣಗಳಿಂದ ಹಿಂದೆ ಹಳ್ಳಿಗಳಲ್ಲಿರತಕ್ಕ ಶಿರಿವರು ಇಂದು ದುರ್ಭಿಕ್ಷೆಗೀಡಾದದ್ದು ಕಾಣದವ ರಿಲ್ಲ. ಹೀಗೆ ಮಾರ್ಪಾಟಾದ ಈ ನವವಿಶ್ವದಲ್ಲಿ ಮೂಲದಲ್ಲಿ ಮಾರ್ಪಾಟಾದ ಮೂಢ ನಂಬಿಗೆಯ ತೀರ್ಥಕ್ಷೇತ್ರಾದಿಗಳ ಸಂದರ್ಶನವು ವಿರಳವಾಗುವದರಲ್ಲಿ ಸಂದೇಹವೇನು ?

ಮೂರ್ತಿಪೂಜಕರ ಈ ನಮ್ಮ ದೇಶದಲ್ಲಿ ಮೂರ್ತಿಪೂಜೆಯೊಂದು ಸಹ ಅಲ್ಪಮತಿಗಳ ಮನ ಒಂದೆಡೆ ಸಂಗ್ರಹವಾಗಿಡಲು ಮಾತ್ರ ಮಾರ್ಪಾಟಾದ ಒಂದು ವಿಧಾನವೆಂಬುದನ್ನು ಅರಿತಾದರೂ ಅಂಥ ಅರ್ಚನೆಯನ್ನು ಬಿಟ್ಟರೂ ಬಿಡಬಹುದಾಗಿತ್ತು. ಆದರೆ ಅದು ಹಾಗಾಗದೆ ದುಡಿಮೆ ಹಾಗೂ ವಿಲಾಸತ್ವಕ್ಕೆ ಮೊರೆಹೋಗಿ ಕಾಲಚಕ್ರ ಉರುಳುತ್ತಲಿದೆ. ಹೀಗೆ ಸರ್ವರೂ ವಿಲಾಸಪ್ರಿಯ ರಾಗಿರುವರೆಂದು ಭಾವಿಸತಕ್ಕದ್ದಲ್ಲ. ಅಲ್ಪ ಜನ ಮಾತ್ರ ಇನ್ನೂ ಮೂರ್ತಿ ಪೂಜಕರೂ ಹಾಗೂ ಬೇರೆ ಬೇರೆ ವಿಧಾನಗಳಿಂದ ಆ ಪರಮಾತ್ಮನ ಪೂಜಕ ರಾಗಿದ್ದಾರೆ. ತೀರ್ಥಕ್ಷೇತ್ರಗಳಲ್ಲಿ ಇಂದು ನಾವು ಕಾಣುವ ದೃಶ್ಯವು ಹಾಹಾ ಕಾರ. ಭಕ್ತಜನರು ಕಡಿಮೆಯಾಗಿ ಅರ್ಚಕರ ಉದರ ನಿರ್ವಹಣೆ ಸಾಗದಾಗಿ ಇಂಥ ಹಾಹಾಕಾರಕ್ಕೆ ಆಸ್ಪದ ದೊರೆತಿದೆ. ಹೀಗಾಗಿ ಇಂದಿನ ಅರ್ಚಕರ ದೃಷ್ಟಿ ಪರಮಾತ್ಮನತ್ತ ಇರದೆ ಭಕ್ತರ ಜೇಬಿನತ್ತ ಧಾವಿಸಿದೆ. ಹಿಂದಿನ ಕಾಲದ ರತ್ನಖಚಿತಾದಿ ವಜ್ರವೈಢೂರ್ಯಗಳಿಂದ ಶೋಭಿಸ ಮೂರ್ತಿಗಳು ಇಂದಿಲ್ಲ. ಇದ್ದ ಅಲ್ಪ ಪ್ರಮಾಣದ ವಸ್ತುವಡವೆಗಳಿಂದ ಶೋಭಿಸ ದೇವಾಲಯಗಳಿಗೆ ಬೀಗಮುದ್ರೆಯನ್ನು ನೋಡಿದರೆ " ಸೃಷ್ಟಿಸಂರಕ್ಷಣನಿಗೆ ಮಾನವನು ಸಂರಕ್ಷಿಸ ಹತ್ತಿರುವನಲ್ಲ ! " ಎಂಬ ಅನುಭವ ಬಾರದೇ ಇರದು. ಹೀಗೆ ಸಂರಕ್ಷಿಸು ತ್ತಲಿದ್ದರೂ ಅನೇಕ ಸುವರ್ಣವಿಗ್ರಹಗಳ ಕಳವುಗಳನ್ನು ನಾವು ಆಗಾಗ್ಗೆ ಕೇಳುತ್ತಲಿರುತ್ತೇವೆ. ಹೀಗಾಗಿ ಅರ್ಚನಾಲಯಗಳು ಸಹ ಇತರ ಉದ್ಯೋಗ ವ್ಯವಸಾಯಗಳ ಬಾಗಿಲು ಮುಚ್ಚುವ ತೆಗೆಯುವ ವೇಳೆಯಂತೆ ಮಾರ್ಪಾಟಾ ದುದನ್ನೂ, ಅರ್ಚಕರು ಭಕ್ತರಿಂದ ಹಣಸುಲಿಯುವ ವಿಧಾನವನ್ನೂ ನೋಡಿ ದರೆ ಇದು ಸಹ ಒಂದು ವ್ಯವಸಾಯವೆಂಬ ಮನವರಿಕೆಯಾಗದೇ ಇರದು.

ಹೀಗೆ ಮಾರ್ಪಾಟಾದ ಸಮಯದಲ್ಲಿ ಉಳಿದೆಡೆ ಕಳುವುಗಳಾದಂತೆ ದೇವಾಲಯಗಳಲ್ಲಾದರೂ ಮಹತ್ವವೇನಲ್ಲ. "ಭಕ್ತಿ ಇಲ್ಲದೆಡೆ ದೇವನಿಲ್ಲ" ಎಂಬ ಮಹತ್ವ ಮಾತ್ರ ಇಲ್ಲಿ ಕಂಡುಬರುವದು.

ಅರ್ಚನೆಯು ಮನದ ಕೃತಾರ್ಥಕ್ಕಾಗಿ; ಫಲಪ್ರಾಪ್ತಿಗಲ್ಲ. ನಿಷ್ಕಾಮಮಯ ಭಕ್ತಿಯೇ ಭಕ್ತಿ. ಇಂದಿನ ಅನೇಕ ಜನ ಅರ್ಚಕರು ಪುರಾಣ ಪುಣ್ಯಕತೆಗಳು ಜನರ ನೀತಿಮಟ್ಟವನ್ನು ಸುಧಾರಿಸಲೋಸುಗ ಹಿಂದಿನ ಜನತೆಯು ಚಾಣಾಖ್ಯತೆಯ ಲೇಖಗಳೇನೋ ಎಂದು ಭಾವಿಸಿದಂತೆ ಕಾಣುತ್ತೆ. ಆದುದರಿಂದ ಅವರ ಭಕ್ತಿ ಇಂದು ಭಕ್ತ್ರರನ್ನೇ ಆವರಿಸಿದೆ ಹೊರತು ದೇವನಲ್ಲಿಲ್ಲ. ಮಾಡುವದೇನು ! ವಿಶ್ವದ ನೀತಿಮಟ್ಟವೇ ಬೇರೆ ರೂಪು ತಾಳಿದೆ. ಇಂದು ಒಳ್ಳೆಯವರಾರು ಕೆಟ್ಟವರಾರೆಂಬುದೇ ಅರಿಯದಂತಾಗಿದೆ.

"ನಂಬಿ ಕರೆದಡೆ ಓ ಎನ್ನನೇ ಶಿವನು ?" ಎಂಬ ವಾಕ್ಯವನ್ನೇನೋ ಹಲವರು ತಿಳಿದಿರಬಹುದು. ಹಾಗೂ ನಂಬಿ ಕರೆದಿರಬಹುದು. ಆದರೆ ಸಂಶಯವು ಮನವ ತುಂಬದ ಮೊದಲು ಕರೆದರೆ ಮಾತ್ರ ಓ ಎನ್ನುವ. ಆದರೆ ಮನದಲ್ಲಿಯ ಸಂಶಯವೇ ನಂಬಿಗೆಯ ಕುಂದು ಎಂಬುದನ್ನು ಮೊದಲು ಅರಿಯತಕ್ಕದ್ದು.

ಜ್ಞಾನಾಭಿವೃದ್ಧಿಯು ಕೆಲವರಿಗೆ ಹಲವು ತೆರನಾಗಿ ದೊರೆಯುವದುಂಟು. ಕೆಲವರಿಗೆ ದೃಷ್ಯಮಾತ್ರದಿಂದ ದೊರೆತರೆ, ಕೆಲವರಿಗೆ ಬೋಧೆಯಿಂದಲೂ, ಕೆಲವರಿಗೆ ನಡೆಯಿಂದಲೂ ದೊರೆಯುತ್ತದೆ. ಆದರೆ ಪ್ರತಿಯೊಬ್ಬನೂ ಮೊದಲು ಅರಿತುದು ತನ್ನ ನಡೆನುಡಿ ಹಾಗೂ ತನ್ನ ಆಚರಣೆಯೇ ಶ್ರೇಷ್ಠವೆಂದು. ಹೀಗೆ ತಮ್ಮ ತಮ್ಮ ಅನುಭವವನ್ನೇ ಇತರರಿಗೆ ಬೋಧಿಸುತ್ತಲೂ ಆಯಾ ಬೋಧೆಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುತ್ತಲೂ ಬಂದಿದ್ದಾರೆ. ಇಂಥ ಗ್ರಂಥಗಳಲ್ಲಿಯೂ ಲೋಪದೋಷಗಳಿರುವದೇನು ಮಹತ್ವದ್ದಲ್ಲ. ಆದರೆ ಆಯಾ ಜನಾಂಗಗಳು ತಮ್ಮ ತಮ್ಮ ಧರ್ಮಕ್ಕೆ ಸಂಬಂಧಿಸಿದವರ ಗ್ರಂಥಗಳಿಗೆ ಹಾಗೂ ಅವರಿಗೇ ಹೆಚ್ಚಿನ ಸ್ಥಾನ ಕೊಡುತ್ತ ಬಂದಿರುವದರಿಂದ ಅನೇಕ ಧರ್ಮೀಯರಲ್ಲಿ ಅತಿ ಹೀನ ಆಚರಣೆಗಳಿರುವದನ್ನು ನಾವು ಇಂದಿಗೂ ಕಾಣುತ್ತೇವೆ. ನಡೆ ನುಡಿಗಳು ಒಳ್ಳೆಯವನನ್ನು ಕೆಡುಕನನ್ನಾಗಿಯೂ, ಕೆಡುಕನನ್ನು ಒಳ್ಳೆಯವನನ್ನಾಗಿಯೂ ಮಾರ್ಪಡಿಸುವ ಸಾಧನವಾಗಿದೆ. ಮಾನವನ ಮನವು ಪ್ರವಾಹದಂತಿದೆ. ಪ್ರವಾಹವು ತಾನು ಸಾಗುತ್ತಿರುವ ಭೂಗುಣವನ್ನೇ ತನ್ನಲ್ಲಿ ಅಳವಡಿಸಿಕೊಂಬಂತೆ ಇರುವದರಿಂದ ಆತನಿಗೆ ಕಷ್ಟ ಸುಖಗಳು ಆವರಿಸುವವು.

ಕಷ್ಟ ಸುಖಗಳು ಕೇವಲ ಮಾನವನಿಂದ ಹಾಗೂ ತಮ್ಮ ತಮ್ಮ ಅಲ್ಪಮತಿತ್ವದಿಂದ ನಿರ್ಮಿತವಾದವುಗಳೆಂಬುದನ್ನು ಹಲವರು ಅರಿಯದೆ ತಮ ಗುಂಟಾದ ಕಷ್ಟನಿವಾರಣೆಗಾಗಿ ಅದೂ ಕೇವಲ ಕಷ್ಟಕಾಲದಲ್ಲಿ ಪರಮಾತ್ಮನಲ್ಲಿ ಮೊರೆಹೋಗುವರು. ವಿಶ್ವ ಸಂರಕ್ಷಣಾಸಿಗೆ ಸರ್ವರೂ ಸಮಾನರು. ಆತ ಒಬ್ಬನಿಗೆ ಸುಖವನ್ನಿತ್ತು ಇನ್ನೊಬ್ಬನಿಗೆ ಕಷ್ಟವನ್ನಿತ್ತು ಆನಂದಿಸನು. ನನ್ನನನ್ನದೆಂದು ಒಂದು ವಿಶ್ವವನ್ನು ತನ್ನದನ್ನಾಗಿ ಮಾಡಿಕೊಂಡು, ಎರಡನೆಯ ವಿಶ್ವಕ್ಕೂ ಆಶಿಪಡುತ್ತಲಿರುವ ಹಲವು ಮಾನವರಲ್ಲಿ ನನ್ನದೆಂಬ ಹೃದಯದಲ್ಲಿ ನಮ್ಮವ ರೆಂಬ ಉಸಿರು ಕೂಡ ಬಾರದಿರುವದನ್ನು ಕಂಡು ಮರುಗುತ್ತಿರಬಹುದು. ಆ ಮರುಗೇ ನಮ್ಮ ಅನಂತ ಬಡಜನರ ಹೃದಯದಿಂದ ಹೊರಬೀಳುತ್ತ ಲಿದೆ. ಅದು ಮುಂದೆ ಯಾವ ರೂಪವಾಗಿ ಮಾರ್ಪಾಟಾಗಲಿದೆ ಎಂಬುದನ್ನು ನಾವು ಹೊತ್ತಿಗೆಯಿಲ್ಲದೆ ಕೇಳಬಹುದಾದ ಭವಿಷ್ಯವಾಗಿದೆ.

ನಮ್ಮ ದೇಶದಲ್ಲಿ ಅನಂತ ಸಾಧು ಸತ್ಪುರುಷ ಕವಿಮಹರ್ಷಿಗಳಾಗಿ ಹೋಗಿದ್ದಾರೆ. ಅವರಲ್ಲನೇಕರ ಗ್ರಂಥಗಳು ಇಂದಿಗೂ ಪೂಜ್ಯವಾಗಿವೆ. ಅವರ ದೃಷ್ಟಿಯಲ್ಲಿ ಒಬ್ಬ ಸತ್ಪುರುಷನನ್ನು ದೇವನನ್ನಾಗಿಯೂ, ಹೀನಕೃತ್ಯವನ್ನೆಸ ಗಿದವನಿಗೆ ರಕ್ಕಸನೆಂದೂ ವರ್ಣನಾತೀತವಾಗಿ ಬರೆದುದನ್ನು ಮುಂದೆ ಅನಂತ ಕಾಲಗಳ ಅನಂತ ಮುಖಗಳಿಂದ ವರ್ಣನೆಯು ಹೆಚ್ಚುತ್ತ ಹೋಗಿ ಇಂದಿನ ಹಲವರಿಗೆ ದಿಗ್ಭ್ರಮೆಯುಂಟಾಗಿದೆ ಅಷ್ಟೆ. ಹೀಗಾಗಿ ಆಯಾ ಸತ್ಪುರುಷರಿ ಗಿಂತಲೂ ಮೂಲದಲ್ಲಿ ಆಗಿ ಹೋದ ಸತ್ಪುರುಷರ ಅವತಾರವೇ ಇವರದು ಎಂದು ನಂಬಿ ಹಾಗೂ ಗೀತೆಯಲ್ಲಿ ಶ್ರೀಕೃಷ್ಣನು ಉಪದೇಶಿಸಿದ "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ" ಎಂಬ ವಾಕ್ಯದ ಮರ್ಮವನ್ನರಿ ಯದೆ ಆತನೇ ಮರಳಿ ಜನ್ಮಿಸಿ ಈ ರೂಪು ತಾಳಿರುವನೆಂದು ಹಲವರ ಭಾವನೆ. ಆದರೆ ಅದು ಹಾಗಿರದೆ ಆತನು "ನಾನು" ಎಂಬಲ್ಲಿ "ಜೀವನು" ಎಂಬ ಭಾವವನ್ನಿಟ್ಟುಕೊಂಡು ನುಡಿದಿದ್ದಾನೆಂಬುದನ್ನರಿಯದೇ ದೇವ ಹಾಗು ಜೀವ ರೆಂದು ಬೇರ್ಪಡಿಸಿ ದೇವರೆಂಬರ ವಂಶಾವಳಿಯನ್ನೇ ಬೇರ್ಪಡಿಸುತ್ತ ಬಂದಿ ದ್ದಾರೆ. ಹೀಗಾಗಿಯೂ ಅನಂತ ವಿಗ್ರಹಗಳ ಅರ್ಚನೆಯು ಪ್ರಾರಂಭವಾಯಿತು. ಈಗ್ಗೆಯಾದರೂ ಹಾಗಾಗಬಹುದಾಗಿತ್ತು. ಆದರೆ ಇಂದಿನ ಮೇಲ್ತರಗತಿಯ ಜನ ಅಷ್ಟೊಂದು ಮೂಢನಂಬಿಗೆಯವರಲ್ಲವೆಂದೇ ಆ ಭಾವನೆ ಲೋಪವಾಗಿ, ಪ್ರಮುಖರ ಕಾರ್ಯದಕ್ಷತೆಗಷ್ಟೇ ವರ್ಣನೆಯಾಗುತ್ತಿದೆ ಹೊರತು ಅವರಿಗೆ ದೇವವರ್ಗದಲ್ಲಿ ಸ್ಥಳವಿತ್ತಿಲ್ಲ.

ಸುಖ ದುಃಖಗಳ ಸುಳಿಯಲ್ಲಿ ಸಿಲುಕಿದ ಮಾನವನು ನಿಜಸುಖ ದುಃಖಗಳನ್ನು ಗಮನಿಸ. ಸುಖ ದುಃಖಗಳು ಪಂಚೇಂದ್ರಿಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಲ್ಲಿಯೂ ಕೂಡಿದೆ.

**ಶಬ್ದ:—** ಮನೋಭಾವನೆಯು ತದ್ವಿರುದ್ಧವಾದ ನುಡಿಯಿಂದ ದುಃಖ, ಮನೋಭಾವನೆಗೆ ಹೊಂದಿದ ನುಡಿಯಿಂದ ಸುಖ. ವಿಚಾರ ಮಂಥನದಿಂದ ಮಾತ್ರ ಸುಖ ದುಃಖಗಳ ಕಲ್ಪನೆಯ ಲೋಪವಿದೆ.

**ಸ್ಪರ್ಶ:—** ಸುಪ್ಪತ್ತಿಗೆಯ ಮೇಲೆ ಒರಗುವದರಿಂದ ಸುಖ ಹಾಗೂ ಒಂದು ಚೇಪೆಯ ಮೇಲೊರಗುವದರಿಂದ ಕಷ್ಟ. ಆದರೆ ಅದು ಕ್ಷಣಿಕಾನಂದ ಕಷ್ಟವು. ನಿದ್ರಾವಸ್ಥೆಯಲ್ಲಿ ಆ ಕಷ್ಟ ಸುಖವೆಲ್ಲ ಮಾಯಾಮಯವೆಂಬುದು ಆಮೇಲೆ ಅರಿವಾಗದಿರದು.

**ರೂಪ:—** ವಿಶ್ವದ ಅನಂತ ಕೋಟಿ ಜನರೂ ಸುಂದರರಾಗಿಲ್ಲ. ಪ್ರತಿಯೊಂದು ರೂಪದಲ್ಲಿ ಹಲಕೆಲರು ದೋಷತೆಗೆಯಬಹುದು. "ಒಂದೊಂದು ಅಂದವು ತನತನಗೆ ಚಂದ" ಎಂಬಂತೆ ತನಗೆ ಕಾಣದ ಚಂದಕ್ಕೆ ಹೀಯಾಳಿಸಿದಲ್ಲಿ ದುಃಖ ವರ್ಣಿಸಿದಲ್ಲಿ ಆನಂದ. ಇವೆರಡೂ ಮಿಥ್ಯವಾದವುಗಳು. ಹಾಗು ಮನವೊಂದೇ ನಿತ್ಯವಾದುದೆಂದರಿತಲ್ಲಿ ಸುಖದುಃಖಗಳ ಸುಳಿವೇ ಅಲ್ಲಿ ಸುಳಿಯದು. ಆದುದರಿಂದ ಪರಮಾತ್ಮನು ನಿತ್ಯನು ಅಂದರೆ ಸುಖದು:ಖದಿಂದ ಹೊಂದದವನೆಂಬರ್ಥ.

**ರಸ:—** ಆನಂದದಲ್ಲಿ ಮಗ್ನರಾದ ಕಾಲಕ್ಕೆ ಸೇವಿಸುವ ಪ್ರತಿಯೊಂದು ಪದಾರ್ಥವು ನಮಗರಿಯದೆ ಸೇವನೆಯಾಗುತ್ತದೆ. ಆದರೆ ಸುಖದುಃಖಗಳ ಕಲ್ಪನೆಯು ಉಂಟಾದ ಮಾತ್ರದಲ್ಲಿ ಅದರ ನಿಜತ್ವವು ತಿಳಿದು ಬರುವದು. ಯೋಗಿಗಳು ನಿಜಾನಂದದಲ್ಲಿರುವದರಿಂದ ಕಷ್ಟ ಸುಖಗಳ ಮರ್ಮವೇ ಅವರಿಗಿರುವದಿಲ್ಲ.

**ಗಂಧ:—** ಇದುವಾದರೂ ನಿಜಾನಂದಕ್ಕೆ ಸಂಬಂಧವಿಲ್ಲದುದೇ. ನಿಜಾನಂದವೇ ಪರಮಾತ್ಮ ಸ್ವರೂಪ.

ಇಂಥ ಕ್ಷಣಿಕ ಸುಖದುಃಖಗಳನ್ನು ಮನ್ನಿಸದೆ ತಮ್ಮ ಕರ್ತವ್ಯನಿಷ್ಠೆಯನ್ನು ಪರಿಪಾಲಿಸುವ ಅರ್ಚನೆಗಿಂತಲೂ ಮಿಗಿಲಾದ ಅರ್ಚನೆ ಬೇರೊಂದಿಲ್ಲ.

ಏಕನಿಷ್ಠೆಯಿಂದ ಬಕನಿಗೆ ಆಹಾರ, ಏಕನಿಷ್ಠೆಯಿಂದ ವಿಜ್ಞಾನಿಗಳಿಗೆ ಜಯ, ಏಕನಿಷ್ಠೆಯಿಂದ ಏಕಲವ್ಯನಿಗೆ ಜಯವಾದುದನ್ನು ನಾವು ಅರಿತಲ್ಲಿ ಏಕನಿಷ್ಠೆಗಿಂತ ಮಿಗಿಲಾದ ಅರ್ಚನೆ ಬೇರೊಂದಿಲ್ಲವೆಂಬುದನ್ನು ನಿಸ್ಸಂದೇಹವಾಗಿ ಅರಿಯಬಹುದು.

ಇಂಥ ದಿವ್ಯ ಏಕನಿಷ್ಠೆಯನ್ನು ದುರುಪಯೋಗದಲ್ಲಿ ಬಳಿಕೆಮಾಡಿಕೊಂಡು ತಯಾರಾದ ವಸ್ತುವೇ ಅಣುಬಾಂಬು ಮುಂತಾದ ಅಶ್ತ್ರಗಳು. ಏಕನಿಷ್ಠೆಯ ಸದುಪಯೋಗ ದುರುಪಯೋಗಗಳೆರಡೂ ಮಾನವನನ್ನೇ ಕೂಡಿದೆ. ಮಾನವನು ಮನಸ್ಸುಮಾಡಿದರೆ ಭೂಲೋಕವೇ ಸ್ವರ್ಗಲೋಕ ಹಾಗೂ ನರಕಲೋಕಗಳಾಗುವದರಲ್ಲಿ ಸಂದೇಹವೇನಿಲ್ಲ.

———

# ಆತ್ಮನ ಅನುಸಂಧಾನ.

(ಲೇಖಕರುಃ— ಸದಾಶಿವ ಎಮ್. ತೆನಿಹಳ್ಳಿ, ವಿಜಾಪೂರ.)

**ಲೇಖಾಂಕ ೧.**

(ಈ ಲೇಖನವನ್ನು, ಶ್ರೀಮಲ್ಲಿಕಾರ್ಜುನ ಮಹಾಸ್ವಾಮಿಗಳವರ ಪ್ರವಚನದಿಂದ ಸಂಗ್ರಹಿಸಲಾಗಿರುವದು.)



ನಿತ್ಯ ಜೀವನದಲ್ಲಿ ಆತ್ಮನ ಅನುಸಂಧಾನವನ್ನು ಯಾವರೀತಿ ಮಾಡಬೇಕೆಂಬುದೇ ಇಂದಿನ ವಿಷಯವಾಗಿರುವದು, ನೋಡುವವನು ತಾನೇ. ಏನನ್ನು ನೋಡುವನು? ತನ್ನನ್ನೇ ನೋಡುವನು, ಎಲ್ಲಿ ನೋಡುವದು? ತನ್ನಲ್ಲಿಯೇ ನೋಡುವದು, ಧರ್ಪಣದಲ್ಲಿ ತನ್ನ ಮುಖವನ್ನು ತಾನೇ ನೋಡಿಕೊಳ್ಳುವಂತೆ ಸೂರ್ಯನ ಬೆಳಕಿನಿಂದಲೇ ಸೂರ್ಯನನ್ನು ಕಾಣುವಂತೆ ಶುದ್ಧ ಬುದ್ಧಿಯ ಬೆಳಕಿನಿಂದಲೇ ಸ್ವರೂಪವನ್ನು ನೋಡಬೇಕು. ಈ ಅನುಸಂಧಾನಕ್ಕೆ ಮೊದಲು ಧ್ಯಾನದಿಂದ ಸ್ವರೂಪದತ್ತ ಸಾಗಬೇಕಾಗುವದು ಇದು ಬಲುಕಷ್ಟದ ಕೆಲಸವಿರುವದು ಯಾಕಂದರೆ ಎಲ್ಲ ಇಂದ್ರಿಯಗಳ ವಿಕಾರಗಳನ್ನು ಧಿಕ್ಕರಿಸಿ ಮನಸ್ಸಿನ ಏಕಾಗ್ರತೆಯನ್ನು ಆತ್ಮನ ಕಡೆಗೆ ಹೊರಳಿಸಿದಾಗ ಬುದ್ಧಿಶಕ್ತಿಯಲ್ಲಿ ಆತ್ಮನ ಪ್ರಕಾಶವು ಮೂಡುವದು. ಆ ಪ್ರಕಾಶದಿಂದಲೇ ತೇಜೋಮಯ ಸ್ವರೂಪವು ಕಾಣುವದು. ಇದು ಧ್ಯಾನಸ್ಥ ಸ್ಥಿತಿಯು. ಇದಾದನಂತರ ಸಮಾಧಿಯು ಸಮಾಧಿಯಲ್ಲಿ ಸ್ವರೂಪವೇ ತಾನಾಗಿರುವದರಿಂದ ಅನ್ಯವಸ್ತುಗಳಿಗೆ ಸ್ಥಾನವೇ ಇರುವದಿಲ್ಲ. ಸಮಾಧಿಯಿಂದ ಉತ್ಥಾನವಾದನಂತರ ಸಮಾಧಿಯಲ್ಲಿ ಕಂಡ ಅನುಭವವನ್ನು ಹೇಳಬೇಕಾಯಿತು. ಈ ರೀತಿ ಗುರುಗಳು ಆತ್ಮಾನುಭವವನ್ನು ಸ್ಮರಿಸಿ ಹೇಳಿದ್ದೇ ಸ್ಮೃತಿಗಳಾದವು. ಸ್ಮೃತಿಗಳು ಗುರುಮುಖದಿಂದ ಬಂದುದೇ ರುಚಿಕರವೆನಿಸುವವು. ಯಾಕಂದರೆ ಆತ್ಮನ ಅನುಭವನನ್ನು ಕಂಡುಂಡವನು ಗುರುವು. ಆದರೆ ಗ್ರಂಥದಿಂದಾಗಲಿ ಅಥವಾ ಇನ್ನಿತರ ಸಾಧನೆಗಳಿಂದಾಗಲಿ ಅದು ರುಚಿಕರವೆನಿಸಲಾರದು. ತನ್ನ ಹೃದಯದಲ್ಲಿ ಆತ್ಮಾನಂದದ ರಸವನ್ನು ತುಂಬಿಕೊಂಡಿರುವವನೇ ಅನ್ಯರಿಗೆ ಆದರ ರಸವನ್ನು ಕೊಡಬಲ್ಲನು.

ಅಂತರ್ಯಾಮಿಯಾದ ಆತ್ಮನನ್ನು ತನ್ನಲ್ಲಿಯೇ ಕಾಣುವದನ್ನು ಬಿಟ್ಟು ಅನ್ಯದರಲ್ಲಿ ಹುಡುಕುತ್ತ ಹೋಗುವದು ಕರ್ಮಯಜ್ಞವೆನಿಸುವದು ಇಂಥ ಕರ್ಮಮಾರ್ಗಿಗಳಿಗೆ ಸ್ವರ್ಗಾದಿಭೋಗಗಳು ದೊರೆತರೂ ಪುಣ್ಯತೀರಿದನಂತರ ಪುನಹ ಮೊದಲಿನ ಸ್ಥಿತಿಗೆ ಬರಬೇಕಾಗುವದು, ಕಣ್ಣುಕಟ್ಟಿದ ಗಾಣದ ಎತ್ತು ಬಹು ದೂರ ಹೋಗಿರುವೆನೆಂಬ ತಿಳುವಳಿಕೆಯುಂದಿದ್ದರೂ ಅದು ಇದ್ದಲ್ಲಿಯೇ ಇರುವದು. ಅದರಂತೆ ಕಸ್ತೂರಿಯ ಮೃಗವು ತನ್ನ ಹೊಕ್ಕಳ ದಲ್ಲಿಯ ಕಸ್ತೂರಿಯ ಗಂಧವನ್ನು ಕಾಣದೇ ಅನ್ಯಸ್ಥಾನದಲ್ಲಿ ಹುಡುಕುತ್ತ ಹೋದಂತೆ ಸಾಧಕನ ಸ್ಥಿತಿಯಾಗುವದು. ಆದರೆ ಜ್ಞಾನಯಜ್ಞವು ತನ್ನ ಸ್ವರೂಪವನ್ನು ತನ್ನಲ್ಲಿಯೇ ಕಾಣುವದು. ಅದು ಅನ್ಯದರಲ್ಲಿ ಹುಡುಕುವ ದಿಲ್ಲ. ಆತ್ಮವಸ್ತುವು ಅನ್ಯದರಲ್ಲಿ ಕಾಣುವದೂ ಇಲ್ಲ. ನಮ್ಮ ಶರೀರನೆಂಬ ಮಂದಿರದಲ್ಲಿ ಹೃದಯಕಮಲದಿಂದಲೇ ಅದು ಸ್ಫುರಣವಾಗಿ ಪ್ರಕಟವಾಗುವದು.

ಶರೀರವು ಶರೀರಕ್ಕೆ ಕಾಣುವದಿಲ್ಲ. ಅದು ಜ್ಞಾನೇಂದ್ರಿಯಗಳ ದ್ವಾರಾ ಅರುವಿಗೆ ಕಾಣುವದು, ಅದರಂತೆ ಪ್ರಪಂಚದಲ್ಲಿಯ ಎಲ್ಲ ವಸ್ತುಗಳು ಕೂಡ ಅರುವಿಗೇ ಕಾಣುವವು. ಆದ್ದರಿಂದ ದೇಹವೇ ತಾನಲ್ಲ, ಈ ದೇಹವನ್ನು ಕಾಣುವ ಅರಿವು ತಾನಾಗಿರುವನು. ಇಂದ್ರಿಯ ಮನಸ್ಸು ಮೊದಲಾದ ಸೂಕ್ಷ್ಮ ವಸ್ತುಗಳೂ ಆತ್ಮವೆನಿಸಲಾರವು. ಯಾಕಂದರೆ ಸುಪ್ತಾವಸ್ಥೆಯಲ್ಲಿ ಮನಸ್ಸು ಅಡಗುವದು, ಮನಹ ಹೊರಬೀಳುವದು, ಮನಸ್ಸು ವಿಶ್ರಾಂತಿಗಾಗಿ ನಿದ್ರೆ ಯನ್ನು ಮಾಡುವದೇ ಹೊರ್ತು ಆತ್ಮನಲ್ಲಿ, ಆತನಿಗೆ ದಣಿವೂ ಇರುವದಿಲ್ಲ ವಿಶ್ರಾಂತಿಯೂ ಇಲ್ಲ ಕಾರಣ ಆತ್ಮನು ಎಲ್ಲ ಅವಸ್ಥೆಗಳಲ್ಲಿ ಅವಿರಳವಾಗಿ ರುವನು.

ಶುದ್ಧಬುದ್ಧಿಯಲ್ಲಿ, ತನ್ನ ಸ್ವರೂಪದ ನಿರ್ಣಯವಾಗುವದರಿಂದ ಆತ್ಮನ ಅನುಸಂಧಾನಕ್ಕೆ ನಿರ್ಮಲಬುದ್ಧಿಯು ಮುಖ್ಯಸಾಧನವಾಗಿರುವದು. ಅವಿದ್ಯೆ ಯನ್ನು ದಹನಮಾಡುವ ಶಕ್ತಿಯು ವಿದ್ಯೆಯಲ್ಲಿರುವದರಿಂದ ಈ ಜ್ಞಾನವಿದ್ಯೆಗೆ ಉಪನಿಷತ್ತು ಎಂದು ಹೆಸರು ಬಂದಿರುವದು ಅದು ಪರಿಚ್ಛಿನ್ನಭಾವವನ್ನು ನಷ್ಟ ಮಾಡಿ ವ್ಯಾಪಕಸ್ವರೂಪವನ್ನು ತಂದುಕೊಡುವದು.

ಆತ್ಮನು ಶರೀರ ದೃಷ್ಟಿಯಿಂದ ಸ್ವಲ್ಪ ಕಂಡರೂ ಅದು ಮಹಾವ್ಯಾಪಕ ವಾದ ಅವಿರಳವಿರುವದು. ಘಟಕ್ಕೆ ಪರಿಮಿತಿಯುಂಟು ಘಟಾಕಾಶಕ್ಕೆ ಪರಿಮಿತಿ ಯುಂಟೇ? ಅದರಂತೆ ಶರೀರಕ್ಕೆ ಪರಿಮಿತಿಯುಂಟು. ಆದರೆ ಅಂತರಾತ್ಮನಿಗೆ

ಪರಿಮಿತಿಯುಂಟೇ? ಎಂದೂ ಇಲ್ಲ. ಘಟವು ನಾಶವಾದನಂತರ ಘಟಾಕಾಶವು ಆಕಾಶದಲ್ಲಿ ಲಯವಾಗುವಂತೆ ಶರೀರ ಬಿದ್ದು ಹೋದನಂತರ ಅಂತರಾತ್ಮನೂ ಕೂಡ ವಿಶ್ವಾತ್ಮನಲ್ಲಿ ಒಂದಾಗಿ ಹೋಗುವನು. ಆತ್ಮನು ಏಕಮೇವಾದ್ವಿತೀಯ ನಿರುವದರಿಂದ ಉಪಮೇಹೆಗಳಿಂದ ಸಿದ್ಧಪಡಿಸಲಿಕ್ಕೆ ಬರಲಾರದು.

ಆತ್ಮನು ಅಣುಪ್ರಮಾಣವೆಂದು ಕೆಲವರು ವಾದಿಸುವರು ಸತ್ಯವಾನನ ಆತ್ಮವನ್ನು ಯಮನು ಬಲಾತ್ಕಾರದಿಂದ ಸೆಳೆದನು. ಕಾರಣ ಶರೀರದಲ್ಲಿ ಆತ್ಮನು ಅಂಗುಷ್ಟ ಪ್ರಮಾಣನು ಅಂತಾ ಮತ್ತೆ ಕೆಲವರು ಹೇಳುವರು ಶರೀರದ ಆಕಾರದಷ್ಟೇ ಶರೀರದಲ್ಲಿ ಆತ್ಮಸಿರುವನೆಂದು ಮುಗುದೊಬ್ಬರು ಹೇಳುವರು. ಈ ರೀತಿಯಲ್ಲಿ ಕೆಲಕೆಲವರು ತಮ್ಮ ತಮ್ಮ ವಾದಗಳನ್ನು ಸಮರ್ಥಿಸಿಕೊಳ್ಳುವರು ಇದು ತಪ್ಪು. ಯಾಕಂದರೆ ಇವರೆಲ್ಲರ ವಾದಗಳೂ ಮನಸ್ಸಿನ ಸಂಕೋಚಗಳು ಇವರ ವಾದಸರಣಿಯಂತೆ ಆತ್ಮನಿಗೆ ಸಂಕೋಚವಿಕಾಸಗಳು ಇದ್ದಂತಾಯಿತು. ಒಂದು ವೇಳೆ ಹೀಗೆ ಇದ್ದದ್ದು ನಿಜವಾದರೆ ನಿರ್ವಿಕಲ್ಪ ಸಮಾಧಿಯಿಂದ ಹೊರ ಬಿದ್ದ ಬಳಿಕ ಆತ್ಮನು ಅಣುಪ್ರಮಾಣ ಮಧ್ಯಮಪ್ರಮಾಣನು ಅಂತಾ ಹೇಳಬಹುದಾಗಿತ್ತು. ಇದಕ್ಕೆ ವ್ಯತಿರಿಕ್ತವಾಗಿ ಆತ್ಮನು ಅಪ್ರಮೇಯನು ಅವಿರಳನು ಅಧ್ವಯನು ಅಂತಾ ಯೋಗಿಗಳು ಅನುಭವದಿಂದ ಹೇಳಿರುವರು. ಇಲೆಕ್ಟ್ರಿಕ್ ಬೆಳಕು ಬಲ್ಬಿನಲ್ಲಿ ಮರ್ಯಾದಿತವಾಗಿ ಕಂಡರೂ ಅದರ ಮೂಲ ಶಕ್ತಿಯು ಅಪರಿಮಿತಿಯುಳ್ಳದ್ದಿರುತ್ತದೆ. ಆದ್ದರಿಂದ ವ್ಯಷ್ಟಿಗತ ಆತ್ಮನೂ ಕೂಡ ಪರಿಪೂರ್ಣನು ಅಧ್ವಯನು ಅವಿರಳನು. ಗುಣ ಕರ್ಮ ಜಾತಿಗಳೂ ಆತ್ಮನಲ್ಲಿರುವದಿಲ್ಲ. ಮನಸ್ಸನ್ನಾಶ್ರಯಿಸಿ ಗುಣಗಳಿರುವವು. ಹಸ್ತಪಾದಾದಿಗಳಲ್ಲಿ ಕ್ರೀಯಯಿರುವದು. ಮನುಷ್ಯನಲ್ಲಿ ಅನುಗತವಾಗಿ ಜಾತಿ ಇರುವದು. ಇವೆಲ್ಲವುಗಳು ಜೀವಭಾವದಲ್ಲಿ ತೋರಿಬರುವ ಸಂಕೋಚವೃತ್ತಿಗಳು ಆದರೆ ಆತ್ಮನು ಅಪರಿಚ್ಛಿನ್ನ ಅಧ್ವಯನಿರುವದರಿಂದ ಗುಣ-ಕರ್ಮ-ಜಾತಿಗಳು ಆತ್ಮನಿಗಿರುವದಿಲ್ಲ.

(ಮುಂದುವರಿಯುವದು.)

# ನೀರು ತರುವ ನೀರೆ.



ಕೊಡ ಹೊತ್ತು ಬರತಾಳೆ
ಕೊರಳು ಕೊಂಕಿಸಿಕೊಂಡು ||ಪಲ್ಲ||
ಸೆರಗ ಸಿಂಬಿಯ ಮೇಲೆ ಮಿರುಗುವ ಕೊಡವು ||ಅ. ಪ.||

ನವರೂಪದ ಹೆಂಣ
ನವನೀತದ ಬಂಣ
ನವಿಲ ನಡುಗೆಯಲಿ ನಲಿ ನಲಿಯುತ ||೧||

ಸಿಂಗಾರ ವನದಲಿ
ಸುಮನ ವಿಹಾರಿಯಂತೆ
ಸುರಸ ಝಂಕಾರದಿ ಹೆಜ್ಜೆಯಿಕ್ಕುತ ||೨||

ಯಾರು ಅರಿಯದ ದಾರಿಯಲಿ
ಅರಿ ಷಡ್ವರ್ಗಗಳನು ತುಳಿದು
ನಾರಿ ಶಿರೋಮಣಿ ನೃತ್ಯವಾಡುತ ||೩||

ಕರದೊಳು ತಂಬಿಗೆ
ಕರೆಯುವಳು ಕೈಮಾಡಿ
ಕರೆಯುತ ಶಿವನಾಮಾಮೃತವ ||೪||

ಬೇಡಿ ಬೇಡಿದವರಿಗೆಲ್ಲ
ನೀರು ನೀಡುವವಳಲ್ಲಿ
ಸಾರ ಸದ್ಗುರು ಭೋದ ಪರಮಾಮೃತವೆಂದು ||೫||

ವಿಶ್ವಚೈತನ್ಯದ ಹೆಣ್ಣು
ವಿಶಾಲ ದೃಷ್ಟಿಯ ಕಣ್ಣು
ಹೊತ್ತು ಸಮಷ್ಟಿಯ ಪಾಶದ ಕೊಡವನು ||೬||

ರೋಮ ರೋಮಗಳಲಿ
ಕೋಟಿ ಸೂರ್ಯರ ತೇಜ
ತುಂಬಿ ಮಾಟ ಮಾಡುತ ಶಿವಧ್ಯಾನಕೂಟದ ||೭||

ಪರನಾರಿವಳಲ್ಲ
ಪಾರ್ವತಿ ದೇವಿಯು
ಪರಶಿವನ ಮಡದಿ ಪಾರುಮಾಡುತ ಭವದಿ ||೮||

ನೀರು ತರುವ ನೀರೆ
ನಿರ್ಗುಣನ ಭಾರ್ಯೆ
ನಿರಂಜನನ ಸತಿ ನಿರ್ಮಲಮತಿ ||೯||

ಶೂನ್ಯ ಸಿಂಹಾಸನದ ಮೇಲೆ
ಶಿವಪೂಜೆ ಗೈಯುವ
ಶಿವ ಶರಣರ ಲಿಂಗ ಪೂಜೆಗೆಂದು ||೧೦||

—ಶಿವಕುಮಾರ ತುಂಗಳ.

# ೧. ಬಸವನ ಅವತಾರದ ಐತಿಹ್ಯ.

(ಹಿಂದಿನ ಸಂಚಿಕೆಯಿಂದ ಮುಂದುವರಿದುದು.)

(ಬರೆದವರು:— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)

ನಾರಾಯಣ ವೃದ್ಧಬ್ರಾಹ್ಮಣನಾಗಿ ಬಲಿಯ ಭೂಮಿಯ ದಾನವ ಬೇಡಿದ ॥
ಕೊಟ್ಟ ಬಲಿ ಬಂದನಕ್ಕೆ ಸಿಕ್ಕಿದ ॥
ಈಶ ಜಂಗಮನಾಗಿ ಬಂದು ದಾಸನ ವಸ್ತ್ರವ ಬೇಡಿದ ।
ಕೊಟ್ಟ ದಾಸ ಶವನಿಧಿಯ ಪಡೆದ ॥
ಕಪಟದಿಂದ ನಾರಾಯಣ ಹಾರುವನಾಗಿ ಬಂದು ಕರ್ಣನ ಕವಚ ಬೇಡಿದ ।
ಕೊಟ್ಟ ಕರ್ಣ ಕಳದಲ್ಲಿ ಮಡಿದ ॥
ಕಾಮಾರಿ ಜಂಗಮನಾಗಿ ಬಂದು ಸಿರಿಯಾಳನ ಮಗನ ಬೇಡಿದ ॥
ಕೊಟ್ಟ ಶಿರಿಯಾಳ ಕಾಂಚಿಯ ಪುರವ ಕೈಲಾಸಕೊಯ್ದ ॥
ನಾರಾಯಣ ಹಾರುವನಾಗಿ ಬಂದು, ನಾಗಾರ್ಜುನನ ಸಿರವ ಬೇಡಿದ ॥
ಕೊಟ್ಟ ನಾಗಾರ್ಜುನನ ಸಿರ ಹೋಯಿತ್ತು ॥
ಶಿವನು ಜಂಗಮನಾಗಿ ಬಂದು ಸಿಂಧುಬಲ್ಲಾಳನ ವಧುವ ಬೇಡಿದ ।
ಕೊಟ್ಟ ಸಿಂಧುಬಲ್ಲಾಳ ಸ್ವಯಲಿಂಗವಾದ
ನಾರಾಯಣ ಬೇಡನಾಗಿ ಬಂದು ಶಿಬಿಯ ಮಾಂಸ ಬೇಡಿದ
ಕೊಟ್ಟ ಶಿಬಿ ಪ್ರಾಣ ಕಳಕೊಂಡ ॥
ಶಿವನು ಬೇಡನಾಗಿಬಂದು ಅರ್ಜುನನ್ನು ಹೊಡೆದ ।
ಹೊಡಿಸಿಕೊಂಡ ಅರ್ಜುನ ಪಾಶುಪತಾಸ್ತ್ರ ಪಡೆದ ॥
ಇದುಕಾರಣ ಇಲ್ಲಿಯೂ ಲೇಸು ಅಲ್ಲಿಯೂ ಲೇಸು ಕೂಡಿರೆ ನಮ್ಮ
ಕೂಡಲ ಸಂಗಮದೇವರ ಶರಣರಿಗೆ.

ಈ ಪ್ರಕಾರ ನಾರಾಯಣನನ್ನು ನಂಬಿದನರ ಗತಿಯನ್ನು ಹೇಳಿದ್ದಲ್ಲದೆ ಬ್ರಾಹ್ಮಣರಿಗೆ ವಿಷ್ಣುವಿನ ಪೂಜೆಯಿಂದ ಫಲವಿಲ್ಲ ಶಿವನ ಹೊರತು ಬೇರೆ ಯಾವ ದೇವರ ಪೂಜೆಯು ಒಳ್ಳೇದಲ್ಲೆಂದು ಹೇಳುತ್ತ ಕೆಳಗಿನ ವಚನ ವನ್ನು ಹೇಳುವನು.

ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ ।
ಜಿನ್ನನ ಪೂಜಿಸಿ ಬತ್ತಲೆ ಇಪ್ಪುದ ಕಂಡೆ ।
ಮೈಲಾರನ ಪೂಜಿಸಿ ನಾಯಾಗಿ ಬಗಳುದ ಕಂಡೆ ।
ನಮ್ಮ ಕೂಡಲಸಂಗನ ಶರಣರ ಪೂಜಿಸಿ ದೇವಭಕ್ತನೆನಿಸಿ
ಕೊಂಬುದ ಕಂಡೆ.

ಇದಕ್ಕೆ ಕೆಲವರು ಹರಿಹರನು ಒಂದೆ ಅವರಲ್ಲಿ ಭೇದವಿಲ್ಲ ನೀವು ಅನ್ಯದೈವಗಳನ್ನು ಹೀಯಾಳಿಸುವದು ಒಳಿತಲ್ಲೆಂದು ವಿಪ್ರರು ಬಸವನ ಕೂಡ ವಾದಿಸಲು—

ಹರಿಹರನೊಂದೇ ಎಂದರೆ ಸುರಿಯವೇ ಬಾಯಲ್ಲಿ ಬಾಲಹುಳಗಳು ?
ಹರಿಗೆ ಹತ್ತುಪ್ರಳಯ ಬ್ರಹ್ಮಂಗನಂತ ಪ್ರಳಯ.
ಹರನಿಗೆ ಪ್ರಳಯ ವುಂಟೆಂಬುದ ಬಲ್ಲಿರೆ ನೀವು ಹೇಳಿರೋ?
ಪ್ರಳಯ ಪ್ರಳಯ ಅದಂದಿಂಗೆ ಹಳೆಯ ನಮ್ಮ ಕೂಡಲಸಂಗಮದೇವ.

ಹರನೊಬ್ಬನೇ ದೇವರು ಉಳಿದ ಬೇರೆ ದೇವರೇ ಇಲ್ಲ. ಅದು ಶುದ್ಧ ತಪ್ಪು ಜಗಕೆ ಒಬ್ಬನೇ ದೇವರು ಹರನ ಹೊರತು ಬೇರೆ ದೇವರುಂಟೆಂದು ಯಾರಾದರೂ ಹೇಳಿದರೆ ಬಸವನ ಮುನಿಸು ಎಷ್ಟೆಂಬುದನ್ನು ಹೇಳಿಕೊಳ್ಳುವನು.

ಹರನಲ್ಲದನ್ಯದೈವ ಉಂಟೆಂಬವನ ಬಾಯ ಕೆನ್ನೆವಾರೆ
ಸೀಳಿದೆನಲ್ಲದೆ ಎನ್ನ ಮುನಿಸು ಹೋಗದಯ್ಯ!
ಎನ್ನ ಕೋಪವಡಗದಯ್ಯ! ಎನ್ನ ಬಿನ್ನಪವನವಧರಿಸು
ಕೂಡಲಸಂಗಮದೇವಾ.

ಇದನ್ನು ಕೇಳಿ, ನೆರೆದವರಿಗೆ ಆಚ್ಚರಿಯಾಯಿತು. ಆಗ ಅವರು ಬಸವಾ ನೀನು ಬಲು ಡಾಂಭಿಕ ನಿಷ್ಠಾವಂತ ಇಲ್ಲದ ಬಡಿವಾರ ಕೊಚ್ಚಬೇಡ ನೀನೂ ಬೇರೊಂದು ಹಂಗಿನವನೇ ಇರುವಿ ಸಾಕು ಮಾಡು ನಿನ್ನ ಪರೋಪದೇಶ. ಇದನ್ನು ಕೇಳಿ ಬಸವನು ಪುನಃ—

ಬಡಹಾರುವನೇಸು ಭಕ್ತನಾದರೆಯೂ ನೇಣಿನಹಂಗ ಬಿಡ ।
ಮಾಲೆಗಾರನೇಸು ಭಕ್ತನಾದರೆಯೂ ಬಾವಿಯಬೊಮ್ಮನಹಂಗ ಬಿಡ ।
ಬಣಜಿಗನೇಸು ಭಕ್ತನಾದರೆಯೂ ಒಟ್ಟೆಲಬೆನಕನಹಂಗ ಬಿಡ ।
ನಾನಾರಹಂಗಿನವನಲ್ಲ ಶರಣರಹಂಗನವನಯ್ಯ ಕೂಡಲಂಗದುದೇವ. ॥

ಈ ಪ್ರಕಾರ ಇಂಥಿಂಥವರು ಇಂಥಿಂಥದರ ಹಂಗಿನವರಿರುವರು ಆದರೆ ಬಸವನು ತಾನು ಯಾರ ಹಂಗಿನವನಲ್ಲ ದೇವರ ಹಾಗೂ ಶರಣರ ಹಂಗಿನವ

ನೆಂದು ಸ್ಪಷ್ಟ ಹೇಳಿದ್ದಾನೆ. ಇದು ಬಸವನ ಸಂಪೂರ್ಣತ್ಯಾಗ ನಿರಾಶೆ ನಿರ್ಮೋಹಗಳನ್ನು ಸೂಚಿಸುವದು ಈ ತರದ ಬಸವನ ಆಚಾರ, ವಿಚಾರ, ವಚನ, ಹೇಳಿಕೆಗಳನ್ನು ಕೇಳಿಕೆಗಳನ್ನು ಕೇಳಿ ಬ್ರಾಹ್ಮಣರು ಬಹುವಾಗಿ ಕೋಪಿಸಿದರು ಆಗನಿಗೆ ಏನಾದರೂ ಮಾಡಬೇಕೆಂದು ಹಂಚಿಕೆ ಹಾಕಹತ್ತಿದರು. ಬಡವನಿಗೆ ಅವನ ಗೆಳೆಯರು ಬಂದು ಸಮಾಜದವರು ಕೋಪಗೊಂಡದ್ದನ್ನು ಅವನ ಮುಂದೆ ಹೇಳಿದರು. ಆಗ ಬಸವನು ಕೆಳಗಿನ ವಚನವನ್ನು ಗೆಳೆಯರಿಗೆ ಪೇಳುವನು.

ಆರು ಮುನಿದು ಎಮ್ಮನೇನ ಮಾಡುವರು?
ಊರು ಮುನಿದು ಎಮ್ಮನೆಂತು ಮಾಡುವದು?
ನಮ್ಮ ಕುನ್ನಿಗೆ ಕೂಸ ಕೊಡಬೇಡ!
ನಮ್ಮ ಸೊಣಗಂಗೆ ತಳಿಗೆಯಲಿಕ್ಕೆ ಬೇಡ!
ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೇ?
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕರ.

ಈ ಪ್ರಕಾರ ಊರು ಮುನಿಯಲಿ ಯಾರು ಬೇಕಾದವರು ಮುನಿದರೂ ತನ್ನ ನಿಷ್ಠೆ ಮತ್ತು ಕಾರ್ಯಗಳನ್ನು ಎಂದೂ ಬಿಡುವದಿಲ್ಲ. ಆನೆಯ ಮೇಲೆ ಕೂತು ಹೋಗುವವನಿಗೆ ನಾಯಿಯ ಅಂಜಿಕೆ ಹೇಗೆ ಇರುವದಿಲ್ಲವೋ ಅದರಂತೆ ಒಳ್ಳೇ ಕೆಲಸ ಮಾಡುವವನಿಗೆ ಯಾರದೂ ಅಂಜಿಕೆ ಇಲ್ಲ. ದೇವರದೂ ಕೂಡ ಅಂಜಿಕೆ ಇಲ್ಲ. ಅದಕ್ಕೆ ನಾವು ಯಾರಿಗೂ ಅಂಜಬೇಕಾಗಿಲ್ಲ. ಎಂದು ಗೆಳೆಯರಿಗೆ ಧೈರ್ಯ ಹೇಳುವನು.

ನಾಳೆ ಬಪ್ಪುದು ನಮಗಿಂದೇ ಬರಲಿ ಇಂದು ಬಪ್ಪುದು ನಮಗೀಗಲೇ ಬರಲಿ
ಇದಕಾರಂಜುವರು? ಇದಕಾರಳುಕುವರು? ಜಾತಸ್ಯಮರಣಂ ಧ್ರುವಂ
ಎಂದುದಾಗಿ ನಮ್ಮ ಕೂಡಲ ಸಂಗಮದೇವರು ಬರೆದ ಬರಹವ
ತಪ್ಪಿಸುವರೆ ಹರಿ ಬ್ರಹ್ಮಾದಿಗಳವಲ್ಲ.

ತಾಯಿ ತಂದೆಗಳು ಬಸವನಿಗೂ ಅವನ ಗೆಳೆಯರಿಗೂ ಸಮಾಜದವರು ನಿಮಗೆ ಹಾಗೆ ಹೀಗೆ ಮಾಡುವರು ನಿಮಗೆ ಕಾಡುವರು ಅನೇಕ ಬಗೆಯಿಂದ ನಿಮ್ಮನ್ನು ಪೀಡಿಸುವರು ಅದಕ್ಕೆ ನೀವು ಸಮಾಜದ ರೂಢಿಗಳ ನಿಂದೆ ಟೀಕೆ ಮಾಡಿ ಅವರನ್ನು ಹೀಯಾಳಿಸಿ ಅವರು ಮಾಡುವ ಹೋಮಹವನ ದೇವರ ಟೀಕೆ

ಮಾಡಬೇಡಿರಿ. ನಿಮಗೆ ಅವುಗಳನ್ನು ತಕ್ಕೊಂಡು ಮಾಡುವದೇನು ? ಹಾಗೆ ಹೀಗೆ ಅವರನ್ನು ರಮಿಸಹತ್ತುವರು ಆಗ ಬಸವನು ಮೇಲಿನ ವಚನವನ್ನು ಹಾಡಿದನು.

## ಪಾಠ.

ಇನ್ನೂ "ನೀವು ಸಣ್ಣವರು ಶಾಲೆಗೆ ನಿತ್ಯ ಹೋಗಿ ವಿದ್ಯಾಭ್ಯಾಸ ಸರಿಯಾಗಿ ಮಾಡಿ ಸರಿಯಾದ ಪಾಠಗಳನ್ನು ಗುರುಗಳಿಂದ ಕಲಿತುಕೊಳ್ಳಿರಿ ಈ ತರದ ನಿಮ್ಮ ನಡತೆ ಒಳಿತಲ್ಲ. ಹೀಗೆ ನೀವು ತಿರುಗಿ ವ್ಯರ್ಥಕಾಲಕಳೆಯಬೇಡಿರಿ ಶಾಲೆಗೆ ಹೋಗುತ್ತಿರಬೇಕೆಂದು" ತಂದೆ ಹೇಳುವನು ಅದಕ್ಕೆ ಬಸವನು. "ಇಂಥ ವಿದ್ಯ ಇಂಥ ಪಾಠದಿಂದ ಏನೂ ಪ್ರಯೋಜನವಿಲ್ಲೆಂದು ಹೇಳುವನು. ಅವನು ಜಾಣನೆಂದೂ ಆಗಲಾರನು ಇಂಥ ವಿದ್ಯಗಳ ಜೊತೆಗೆ ಭಕ್ತಿಜ್ಞಾನ ಕರ್ಮಗಳು ಬೇಕು. ಶಾಲೆಯಲ್ಲಿ ಬರೇ ಓದು ಬರಹ ಕಲಿಸಿ ಗೀತೆ ವೇದ ಕಾವ್ಯಗಳನ್ನು ಪಾಠ ಮಾಡಿಸುವರು ಇದರಿಂದ ಏನೂ ಉಪಯೋಗವಿಲ್ಲೆಂದು" ಹೇಳುವನು.

ಗೀತೆವ ಬಲ್ಲಾತ ಜಾಣನಲ್ಲ । ಮಾತ ಬಲ್ಲಾತ ಜಾಣನಲ್ಲ ।
ಜಾಣನು ಜಾಣ ಆತ ಜಾಣನು । ಲಿಂಗವ ನೆರೆನಂಬಿದಾತ ಜಾಣನು ।
ಜಂಗಮಕ್ಕೆ ಸವಿಸುವಾತ ಜಾಣನು । ಜವನ ಬಾಯಲು ಬಾಲವಕೊಯ್ದು ।
ಹೋದಾತ ಜಾಣನು । ನಮ್ಮ ಕೂಡಲ ಸಂಗನ ಶರಣನು ॥

ಎಂದು ತಂದೆಗೆ ವಾದಿಸುವನು ಆದರೂ ಪ್ರೇಮದ ಮೂಲಕ ಬ್ರಾಹ್ಮಣನ ಮಗನು ಓದುಬರಹ ಅವಶ್ಯಬೇಕು. ಹುಂಬ ಒಕ್ಕಲಿಗರಂತೆ ಮಾಡಬಾರದು ಓದುಬರಹ ಅವಶ್ಯಕಲಿಯಬೇಕು. ವೇದ ಬರಬೇಕು ಶಾಸ್ತ್ರ ಬರಬೇಕು. ಗೀತೆ ತಿಳಿದಿರಬೇಕು. ಎಂದು ಅವರು ಹೇಳುವರು ಆಗ ಬಸವನು.

ಗೀತ ಹಾಡಿದರೇನು ? ಶಾಸ್ತ್ರ ಪುರಾಣಗಳ ಕೇಳಿದರೇನು ?
ವೇದ ವೇದಾಂತದ ನೋಡಿದರೇನು ? ಮನ ವಲಿದು ಲಿಂಗ ಜಂಗಮವ
ಪೂಜಿಸಲರಿಯದವರು ? ಎಲ್ಲರಲ್ಲಿಯೂ ಅನುಭಾವಿಯಾದರೇನು ?
ಭಕ್ತಿ ಇಲ್ಲದವರನೊಲ್ಲ ಕೂಡಲ ಸಂಗಮದೇವ.

ಎಂದು ಮಾರುತ್ತರವನ್ನು ಅವರಿಗೆ ಹೇಳುವನು. ಆಗ ತಂದೆ ಶಾಲೆಯಲ್ಲಿ ಸಹ ಭಕ್ತಿ ಜ್ಞಾನ ಕರ್ಮಗಳನ್ನು ಪಾಠಗಳೊಂದಿಗೆ ಕಲಿಸುವರು ಅದಕ್ಕೆ ಶಾಲೆಗೆ ಹೋಗು ಒಲ್ಲೆನ್ನಬೇಡ ನಿನ್ನ ಗೆಳೆಯರನ್ನೂ ಕರೆದುಕೊಂಡು ಶಾಲೆಗೆ

ಹೋಗು ಬುದ್ಧಿ ಕಲಿತುಕೊ ವಿದ್ಯ ಎಲ್ಲರಿಗೂ ಬೇಕು. ಇದಕ್ಕೆ ಬಸವನು ಒಪ್ಪಿ ಶಾಲೆಗೆ ಹೋಗಹತ್ತಿದನು ಅಲ್ಲಿ ಏನು ಪಾಠ ನಡೆದಿದೆ ಎಂದು ವಿಚಾರಿಸಹತ್ತಿದನು. ಎಲ್ಲ ಹುಡುಗರಿಗಿಂತ ತೀವ್ರ ಓದು ಬರಹ ಕಲಿತನು. ಮನೆಯಲ್ಲಿ ಅವರ ತಂದೆಯೂ ನಿತ್ಯ ಕೆಲವು ವೇಳೆ ಓದು ಬರಹ ಕಲಿಸುತ್ತಿದ್ದನು. ಹೀಗಾಗಿ ಓದು ಬರಹದಲ್ಲಿ ಒಳ್ಳೇ ತೀವ್ರ ಪ್ರಗತಿಸಾಧಿಸಿದನು. ಆದರೆ ಶಾಲೆಯಲ್ಲಿ ಹೆಚ್ಚಿನದೇನೂ ಕಲಿಸಲಿಲ್ಲ. ಶಾಲೆಯ ಅಭ್ಯಾಸ ಬೇಸರವಾಯಿತು. ಆಗ—

ಅಭ್ಯಾಸವೆನ್ನ ವರ್ತಿಸಿತ್ತಯ್ಯ । ಭಕ್ತಿ ಸಾಧ್ಯವಾಗದು ।
ನಾನೇನೇವೆನಯ್ಯ ಕೂಡಲ ಸಂಗಮದೇವ ॥

ಎಂದು ಬಸವನು ಹೇಳುವನು. ಪಾಠ ಶಾಲೆಯ ಶಿಕ್ಷಣವು ಅವನ ಮನಸ್ಸಿಗೆ ಬರಲಿಲ್ಲ. ಆಗ—

ಏನನೋದಿ ಏನಕೇಳಿ ಏನಮಾಡಿಯೂ ಫಲವೇನು ನಿನ್ನವರೊಲಿಯದನ್ನಕ್ಕರ ?
ಶಿವಶಿವ ಮಹಾದೇವ ಬಾಳಿಲ್ಲದನಳ ಒಲೆಯುಂತಾಯಿತ್ತೆನಗೆ ಕೂ. ಸಂ. ದೇವ.

ಪಾಠ ಶಾಲೆಯ ಶಿಕ್ಷಣವು ಮಾತ್ರ ಗಿಳಿಯ ಪಾಠವೆಂದು ಅವನು ಜಿಪ್ಪೆಗೊಂಡನು ನಿಜವಾದ ಜ್ಞಾನದಲ್ಲಿ ಭಕ್ತಿಯುಂತೂ ಇಲ್ಲವೇ ಇಲ್ಲ ಎಂದು ಅನಿಸಿ ಆಗ—

ಗಿಳಿಯೋದಿ ಫಲವೇನು? ಬೆಕ್ಕು ಬಾಹುದಹೇಳಲರಿಯದು.
ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆಯ ಕಾಣಲರಿಯವು.
ಇದಿರಗುಣವ ಬಲ್ಲೆವೆಂಬರು ತಮ್ಮ ಗುಣವತಾವರಿಯರು ಕೂ. ಸಂ. ದೇ.

ಈ ಪ್ರಕಾರ ಶಾಲೆಯಲ್ಲಿ ಗಿಳಿಯಂತೆ ಪಾಠ ಮಾಡುವ ಅನುಭವವಿಲ್ಲದ ವಿದ್ಯೆಯನ್ನು ಹೀಯಾಳಿಸುವನು. ಅನೇಕ ಕಾವ್ಯ ಪದ ಪದ್ಯ ಗೀತೆಗಳನ್ನು ಪಾಠಶಾಲೆಯಲ್ಲಿ ಪಾಠ ಮಾಡಿಸುವದನ್ನು ತಿಳಿದು ಬಸವನು ಬೇಸರಗೊಂಡು—

ಹತ್ತುಸಾವಿರ ಗೀತವ ಹಾಡಿ । ಅರ್ಥವಿಟ್ಟಲ್ಲಿ ಫಲವೇನು ?
ಮುಟ್ಟುವ ತೆರನರಿಯದನ್ನಕ್ಕ ? ಕೂಡಲ ಸಂಗಮದೇವ.

ಗುರುಗಳಿಗೆ ಹೀಗೆ ಕೇಳುತ್ತ ನಡೆದನು ಮುಂದೆ ಗುರುಗಳು ವೇದಶಾಸ್ತ್ರ ಮೊದಲಾದವುಗಳನ್ನು ಪ್ರಾರಂಭಿಸಿದರು. ಆಗ ಅದಕ್ಕೂ ಅವನ ಮನಸ್ಸು ಒಪ್ಪಲಿಲ್ಲ.—

ವೇದವನೋದಿದರೇನು ? ಶಾಸ್ತ್ರವ ಕೇಳಿದರೇನು ?
ಜಪವ ಮಾಡಿದರೇನು ? ತಪವ ಮಾಡಿದರೇನು ?
ಏನ ಮಾಡಿದರೇನು ನಮ್ಮ ಕೂಡಲ ಸಂಗಯ್ಯನ ಮನ ಮುಟ್ಟದನ್ನಕ್ಕ ?

ಇಂಥ ಅಭ್ಯಾಸದಿಂದಲೂ ನಿಜವಾದ ಕಲ್ಯಾಣವಾಗುವದಿಲ್ಲೆಂದು ಮನಗಂಡನು. ಇವೆಲ್ಲ ಬರೀ ಗಿಳಿಯೋದು ಗಿಳಿಪಾಠವಾದವು ಆದರೆ ಇವುಗಳ ಜೊತೆಗೆ ಅವನಿಗೆ ದಿವ್ಯಪರ ಭಕ್ತಿಯು ಸವಿರಸಬೇಕಾಗಿತ್ತು ಅದನ್ನು ಅರಸುತ್ತಿದ್ದನು. ಅಂಥ ಗುರುಗಳಸಹ ಅರಸುತ್ತಿರುವನು. ಏಕಾಂತದಲ್ಲಿ ವನದಲ್ಲಿ ಹೋಗಿ ಭಕ್ತಿಯನ್ನು ಸಾಧಿಸಲು ಸಾಧನಮಾಡುವನು. ಪರಮಾತ್ಮನ ಬಗೆಗೆ ಪ್ರಶಾಂತ ಚಿತ್ತದಿಂದ ವಿಚಾರಿಸುವನು. ಸಮಾಜದಲ್ಲಿಯ ಧಾರ್ಮಿಕ ಮೂಢ ನಂಬಿಗೆಗಳು ಹೇಗೆ ಹೋಗುವವೆಂದು ವಿಚಾರಿಸುವನು. ಕ್ರಾಂತಿಯು ಕೆಂದೂಳಿಯನ್ನು ಎಬ್ಬಿಸಬೇಕಾದರೆ ನಿಜವಾದ ಲಿಂಗಾಂಗ ಸಮರಸವು ಅವಶ್ಯ ಬೇಕೇ ಬೇಕೆಂದು ನಿರ್ಧಾರಕ್ಕೆ ಬರುವನು. ಬರೀ ಒಣ ವಿದ್ಯ ಅಭ್ಯಾಸ ಪಾಠಗಳಿಂದ ಏನೂ ಸಾಧಿಸದೆಂದು ಮನಗಂಡನು ಇಂಥ ವಿದ್ಯವು ಮಾನವನ ಹೃದಯಕ್ಕೆ ಕಾಂತಿಯನ್ನೂ ಬಗೆಗೆ ಶಾಂತಿಯನ್ನೂ ಎಂದೂ ಕೊಡಲಾರದು. ಆದರೆ ಇವುಗಳ ಜೊತೆಗೆ ಶಿವಭಕ್ತಿ, ಶಿವಜ್ಞಾನ, ಶಿವಯೋಗಗಳಿದ್ದರೆ ಮಾತ್ರ ಕಾಂತಿ ಶಾಂತಿಗಳು ಲಭಿಸಿ ಲೋಕಕಲ್ಯಾಣ ಮಾಡುವ ಕ್ರಾಂತಿಕಾರ್ಯಗಳನ್ನು ಮಾಡಲಿಕ್ಕೂ ಸಹ ಶಕ್ತಿ ಬಲಗಳು ಬರುವವೆಂದು ಚನ್ನಾಗಿ ತಿಳಿದುಕೊಂಡನು ಇವೆಲ್ಲ ನಿಜವಾದ ವಿದ್ಯಗಳಲ್ಲ ಮೂರು ಕಾಸಿಗೆ ಸಿಗುವ ವಿದ್ಯವಿದು. ಹೊಟ್ಟೆ ಹೊರಕೊಳ್ಳುವ ವಿದ್ಯವಿದು. ಪಾರತಂತ್ರದಲ್ಲಿ, ದೂಡುವ ವಿದ್ಯವಿದು. ಆದರೆ ನಿಜವಾದ ವಿದ್ಯವು ಬ್ರಹ್ಮವಿದ್ಯವಾಗಿರುವದು ಇದರಿಂದ ಎಲ್ಲ ಅಲೌಕಿಕ ಸಾಮರ್ಥ್ಯಗಳು ಬರುವವು. ಅದಕ್ಕೆ ತನಗೇ ಬ್ರಹ್ಮವಿದ್ಯ ಬೇಕೆಂದು ಬಗೆಮ ಯೋಗ್ಯ ಗುರುಗಳನ್ನು ಹುಡುಕಹತ್ತಿದನು. ಬಾಲನಿದ್ದಾಗ ತನಗೆ ಲಿಂಗಧಾರಣ ಮಾಡಿ ಹೋದ ಸಂಗತಿಯನ್ನು ತಂದೆಗಳಿಂದ ಅರಿತು ಅವರ ಹೆಸರು ಆಶ್ರಮ ಮೊದಲಾದವುಗಳ ಬಗ್ಗೆ ಚನ್ನಾಗಿ ಅರಿತುಕೊಂಡನು. ನಿತ್ಯ ಅವರನ್ನೇ ಸ್ಮರಿಸ ಹತ್ತಿದನು.

ಇಂಥ ವಿದ್ಯ ಇಂಥ ಶಾಲೆ ಇಂಥ ಗುರು ಇವಡುಗಳಿಗೆ ಬಸವನು ಬೇಸತ್ತನು. ಬಸವನಿಗೆ ಜನರ ಯಾವ ಆಚಾರ ವಿಚಾರ ನಡೆ ನುಡಿಗಳು ಮನಸ್ಸಿಗೆ ಬರಲಿಲ್ಲ. ಬ್ರಾಹ್ಮಣರು ಜೋತಿಷ ಶಕುನ ಹೊತ್ತಿಗೆಗಳನ್ನು. ಜನ್ಮರಿಗೆ ಹೇಳುತ್ತಿದ್ದರು. ಇದನ್ನು ಕೂಡ ಬಸವನು ಖಂಡಿಸುತ್ತಿದ್ದನು. ಬ್ರಾಹಣರಿಗೆ ಇದರ ಬಗ್ಗೆ ತಿಳಿಸಿಹೇಳಿದನು. ಅದಕ್ಕೆ ಅವರು ಪರಿಹಾಸ್ಯಮಾಡಿ ನಕ್ಕು ಬಂದ ಜನರಿಗೆ ಹೊತ್ತಿಗೆ ಜೋತಿಷ್ಯ ಶಕುನವನ್ನು ಹೇಳುತ್ತಲೇ

ಇದ್ದರು. ಒಂದುದಿನ ಊರ ಪ್ರಮುಖರನ್ನು ಕೂಡ್ರಿಸಿಕೊಂಡಿ ಇವುಗಳನು ಹೇಳುತ್ತಿರುವಾಗ ಬಸವನು ಕೆಳಗಿನ ವಚನವನ್ನು ಹಾಡಿದನು.

ಲಗ್ನವೆಲ್ಲಿಯದೊ, ವಿಘ್ನವೆಲ್ಲಿಯದೊ ಸಂಗಯ್ಯ? ದೋಷವೆಲ್ಲಿಯದೊ ದುರಿತವೆಲ್ಲಿಯದೋ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗೆ ಭವ ಕರ್ಮವೆಲ್ಲಿಯದೋ । ಕೂಡಲಸಂಗಮದೇವ.

ಎಂದು ಬಂದ ಜನರಿಗೆ ಬೋಧಿಸಿದನು ಅಲ್ಲದೆ ತಮ್ಮ ಬ್ರಾಹ್ಮಣರಿಗೆ ಕೇಳಲಿಕ್ಕೆ ಬಂದ ಶಿವಭಕ್ತಂಗೆ ಕೆಳಗಿನಂತೆ" ಜೋತಿಷ್ಯ ಹೇಳಬೇಕೆಂದು ತಿಳಿಸಿದನು.

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ ।
ರಾಶಿಕೂಟ ಋಣಸಂಬಂಧ ಉಂಟೆಂದು ಹೇಳಿರಯ್ಯ ।
ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ ।
ನಾಳಿನ ದಿನಕಿಂತ ಇಂದಿನ ದಿನ ಲೇಸೆಂದು ಹೇಳಿರಯ್ಯ ।
ಕೂಡಲಸಂಗನ ಪೂಜಿಸಿದ ಫಲ ನಿಮ್ಮದಯ್ಯ ।

ಈ ಪ್ರಕಾರ ತಮ್ಮ ಬ್ರಾಹ್ಮಣರಿಗೆ ಹೇಳಿದ್ದಲ್ಲದೆ ಜೋತಿಷ್ಯ ಹೇಳುವ ಎಲ್ಲರಿಗೂ ಬೋಧಿಸಿದ್ದಾನೆ. ಹೀಗೆ ಪ್ರತಿಯೊಂದು ಆಗಿನ ಕಾಲದ ಆಚಾರ ವಿಚಾರ ಮೂಡನಂಬಿಗೆಗಳಿಗೆ ಬೇಸತ್ತು ಅವುಗಳನ್ನು ಚನ್ನಾಗಿ ಖಂಡಿಸುತ್ತಿದ್ದನು.

ಕೆಲವು ಮೂಢನಂಬಿಗೆಯ ಬ್ರಾಹ್ಮಣರು ಸದಾ ನೀರಕಂಡಲ್ಲಿ ಸ್ನಾನ ಮಾಡಿ ಮರಕಂಡಲ್ಲಿ ಪೂಜಿಸುತ್ತಿರುವದನ್ನು ಕಂಡು ಕೆಳಗಿನಂತೆ ಹೇಳುವನು.

ನೀರ ಕಂಡಲ್ಲಿ ಮುಳುಗುವರಯ್ಯ
ಮರನ ಕಂಡಲ್ಲಿ ಸುತ್ತುವರಯ್ಯ ।
ಬತ್ತುವ ಜಲವ ಒಣಗುದ ಮರನ ಮಚ್ಚಿದವರು ।
ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ ।

ಹೊಳೆಹಳ್ಳಗಳ ದಂಡೆಯಲ್ಲಿ ಕುಳಿತು ಜಪಮಾಡುವ ಜನರನ್ನು ನೋಡಿ ಕೆಳಗಿನಂತೆ ವಚನದಿಂದ ಉಪದೇಶಿಸಿದನು.

ಮೀಂಬುಲಿಗನ ಹಕ್ಕಿಯಂತೆ ನೀರತಡೆಯಲಿದ್ದು
ಮೂಗ ಹಿಡಿದು ಧ್ಯಾನನ ಮಾಡುವರಯ್ಯ ।

ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತ ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯ
ನಿಮ್ಮ ಕೈಯ್ಯಲ್ಲಿ ಕಟ್ಟಿದ ದರ್ಭೆಯ ಹುಲ್ಲು ಕೂಡಲಸಂಗನರಿಯದೆ
ಮೊರೆ ಇಡುವಂತೆ.
ನಿಮ್ಮ ನರಿಯದ ಕಾರಣ ಕಯ್ಯಲ್ಲಿ ಹುಲ್ಲು
ನಿಮಗೆರಗಿದ ಕಾರಣ ಕೊರಳಲ್ಲಿ ನೇಣು ಕೂಡಲಸಂಗಮದೇವಾ.
ತೊರೆಯ ಮೀವ ಅಣ್ಣಗಳಿರಾ ಸ್ವಾಮಿಗಳಿರಾ
ತೊರೆಯಿರಿ ಪರನಾರಿಯರ ಸಂಗವ ತೊರೆಯಿರಿ ಪರಧನದಾಶೆಯ
ಇವ ತೊರೆದೆಹೋಗಿ ತೊರೆಯ ಮಿಂದರೆ ಬರುದೊರೆ
ಹೋಹುದು ಕೂಡಲಸಂಗಮದೇವ.

ಈಪ್ರಕಾರ ನೀರ ತಡಿಯಲ್ಲಿ ಕುಳಿತು ಬಕಧ್ಯಾನ ಜಪಮಾಡುವವರನ್ನು ಖಂಡಿಸಿದ್ದಾರೆ. ಈ ಸಮಾಜದಲ್ಲಿ ಪುರಾಣ ಹೇಳುವ ಕೇಳುವ ಪರಿಪಾಠ ಬಹಳ ಇದನ್ನು ತಿಳಿದು ಬಸವನು ಬೇಸತ್ತು ಪುರಾಣಗಳನ್ನೇ ಖಂಡಿಸುವ ವಚನ ಹೇಳಿದ್ದಾನೆ.

ಆದಿಪುರಾಣ ಅಸುರರಿಗೆ ಮಾರಿ
ವೇದ ಪುರಾಣ ಹೋತಿಂಗೆ ಮಾರಿ
ರಾಮ ಪುರಾಣ ರಕ್ಕಸರಿಗೆ ಮಾರಿ
ಭಾರತ ಪುರಾಣ ಗೋತ್ರಕ್ಕೆ ಮಾರಿ
ಇವೆಲ್ಲ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಸರಿ ಇಲ್ಲ ಕೂ. ಸಂ. ದೇ.

ಈಪ್ರಕಾರ ಭಾಗವತ ರಾಮಾಯಣ ಭಾರತ ವೇದ ಮೊದಲಾದ ಪುರಾಣಗಳೆಲ್ಲ ಕಟ್ಟುಕಥೆಗಳು ಇವುಗಳಿಂದ ಭಕ್ತಿ ಜ್ಞಾನ ಮುಕ್ತಿಗಳು ಲಭಿಸುವದಿಲ್ಲ ಇವುಗಳಿಂದ ಮಾನವರು ಕರ್ಮಠರಾಗುವರು ಬ್ರಾಹ್ಮಣರೇ ನೀವು ಇವುಗಳಿಂದ ಕರ್ಮಠರಾಗಿ ಹೀನಕೆಲಸಗಳನ್ನು ಮಾಡುತ್ತಿರುವಿರಿ. ಅದಕ್ಕೆ ಇಂಥ ಪುರಾಣಗಳನ್ನು ಓದಬೇಡಿರಿ ಎಂದು ಬೋಧಿಸಿದ್ದಾನೆ.

ವೇದವ ನೋದಿದ ವಿಪ್ರರು ಹೊನಲಲ್ಲಿ
ಹೋದ ಕೇಡ ನೋಡಿರೊ "ಭರ್ಗೋದೇವಸ್ಯಧೀಮಹಿ"
ಎಂಬರು ಒಬ್ಬರಿಗೂ ವಿಚಾರವಿಲ್ಲ ನೋಡಿರೊ ಕೂ. ಸಂ. ದೇ.

ನುಡಿಯಂತೆ ನಡೆಇಲ್ಲದ ವಿಪ್ರರನ್ನು ಖಂಡಿಸಿದ್ದಾನೆ. ಈಪ್ರಕಾರ ಆಗ ವಿಪ್ರರು ಮಾಡುವ ಪ್ರತಿಯೊಂದು ಕರ್ಮಗಳನ್ನು ಚನ್ನಾಗಿ ಖಂಡಿಸಿ ವಚನಗಳಿಂದಲೇ ಅವರಿಗೆ ಬೋಧಿಸಿದ್ದಾನೆ. ಏಳು ವರ್ಷಗಳ ಬಾಲ್ಯದಲ್ಲಿ ಬಸವನು ಬಹುವಾಗಿ ಸಮಾಜದಲ್ಲಿ ಕ್ರಾಂತಿಯನ್ನು ಎಬ್ಬಿಸುವ ರೀತಿಯಲ್ಲಿ ನಡೆದು ಸಮಾಜಕ್ಕೆ ಬಂಧುಬಳಗಕ್ಕೆ ಬಹಳೇ ವಿರೋಧಿಯಾದನು.

ವಿಪ್ರರಲ್ಲಿ ಅನ್ಯ ಪಾಪಿಗಳನ್ನು ಪ್ರಾಯಶ್ಚಿತ್ತ ಮಾಡಿ ಉದ್ಧರಿಸುವೆವೆಂದು ಹೇಳಿ ಅನೇಕರಿಗೆ ಅನೇಕ ಪ್ರಾಯಶ್ಚಿತ್ತಗಳನ್ನು ಹೇಳುವರು. ಬಂಗಾರದ ಆಕಳು, ಗೋದಿ ಹೊಲ ಆಕಳು ಮೊದಲಾದವುಗಳನ್ನು ಬ್ರಾಹ್ಮಣರಿಗೆ ದಾನ ಕೊಡು ಎಂದು ಹೇಳಿ ಅವುಗಳನ್ನು ತಾವೇ ತಕ್ಕೊಂಡುಬಿಡುವರು. ಇಂಥ ವರನ್ನು ಚನ್ನಾಗಿ ಖಂಡಿಸಿದ್ದಾನೆ.

ಕುಲದಲ್ಲಿ ಹಾರುವರು ಬ್ರಹ್ಮೇತಿ ಸಾರುವರು ।
ಆರೋ ಮಾಡಿದ ಪಾಪಕ್ಕೆ ತಾನೆಕೆಯ್ಯಾನುವರು ।
ಸರಿಯೇ ದೇವಭಕ್ತಂಗಿವನು ? ಸರಿಯೇ ಲಿಂಗಭಕ್ತಂಗಿವನು ।
ಬಡಗಿ ಮಾಚಲದೇವಿಯ ಕುಲಜಯ ಮಾಡಿಹೆವೆಂದು ।
ಹೊನ್ನ ಕಪಿಲೆಯ ರಾವಣದ ಶಾಖದ ಉಚ್ಛಿಷ್ಟದ ಹಾಲಿನಿಂದ
ಕೊಳನಟ್ಟುಂಬವರ ನೇನೆಂಬೆನಯ್ಯ ಕೂಡಲಸಂಗಮದೇವ.

ಈ ಪ್ರಕಾರ ಅನ್ಯರ ಪಾಪಗಳನ್ನು ಕ್ಷಾಲನ ಮಾಡಿ ಪುನೀತರನ್ನಾಗಿ ಮಾಡುವೆವೆಂದು ಹೇಳಿ ಪ್ರಾಯಶ್ಚಿತ್ತಗಳನ್ನು ಮಾಡಿಸುವ ಮಾಡುವ ವಿಪ್ರರಿಗೆ ಒಳಿತಾಗಿ ಬುದ್ಧಿ ಹೇಳಿದ್ದಾನೆ.

ವಿಪ್ರರಲ್ಲಿ ಜಾತಿಭೇದ ಮಾಡುವದನ್ನೂ ತಾವೇ ಶ್ರೇಷ್ಠ ಜಾತಿಯವರೆಂದು ಹೇಳಿಕೊಳ್ಳುವದನ್ನು ಬಾಲಕ ಬಸವನು ನೋಡಿ ಕೇಳಿ ಜಿಗುಪ್ಸೆಗೊಂಡು ನಿಜವಾದ ಬ್ರಾಹ್ಮಣರ ಮೂಲ ವಂಶಗಳನ್ನೇ ತಿಳಿಸಿ ಹೇಳಿ ಶ್ರೇಷ್ಠ ಜಾತಿಯಲ್ಲಿ ಎಂದು ಹೇಳಿದ್ದಾನೆ.

ನೀವು ಹಿರಿಯರೆಂಬಿರಿ ಕರ್ಮಿಗಳು ನೀವು ಕೇಳಿರಿ ನಿಮ್ಮ ವೇದಶಾಸ್ತ್ರ
ಗಳು ಆರಹೊಗಳುವವು? ಓಂ ದ್ಯಾವಾ ಭೂಮಿಜನಯನ್ ದೇವ
ಏಕ ಏವ ರುದ್ರೋನ ದ್ವಿತೀಯನೆಂದು ಸ್ಮೃತಿಶ್ರುತಿಗಳು ಸಾರುತ್ತಿವೆ.
'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂದುದು ಹುಸಿ ।
ವರ್ಣಾನಾಂ ಗುರು ನಮ್ಮ ಕೂಡಲಸಂಗನ ಶರಣರು ॥

ಗುಣಗಳಿಂದ ಶ್ರೇಷ್ಠತ್ವ ಅಥವಾ ಗುರುತ್ವಗಳು ಬರುವವೇ ಹೊರತು ಜಾತಿಯಿಂದ ಗುರುತ್ವ ಬ್ರಾಹ್ಮಣತ್ವ ಬರುವದಿಲ್ಲ ಶ್ರೇಷ್ಠ ಜಾತಿಯುವರೆಂದು ಹೇಳಿಕೊಳ್ಳುತ್ತಿರುವಿರಿ ಆದರೆ ನಿಮ್ಮ ಪೂರ್ವ ವಂಶಾವಳಿಯನ್ನು ನೋಡಿರಿ.

ವ್ಯಾಷ ಬೋಯಿತಿಯ ಮಗ । ಮಾರ್ಕಂಡೇಯು ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು । ಕುಲವನರಸದಿರಿಂಭೊ
ಕುಲದಿಂದ ಮುನ್ನೇನಾದಿರಿಂಭೊ ? ಸಾಕ್ಷಾತ್ ಅಗಸ್ತ್ಯ ಕಬ್ಬಿಲ
ದೂರ್ವಾಸ ಮುಚ್ಚಿಗ ಕಶ್ಯಪ ಕಮ್ಮಾರ ಕೌಂಡಿಲ್ಯನೆಂಬ ಋಷಿ
ಮೂರು ಲೋಕವರಿಯೆ ನಾಯಿದ ಕಾಣಿರೋ ।
ನಮ್ಮ ಕೂಡಲಸಂಗನ ವಚನ ಎಂತೆಂದುದು ಶ್ವಪಚೋಹಿಂದಾದರೇನು
ಶಿವಭಕ್ತನೇ ಕುಲಜನೆಂಬೋ ॥

ಈ ಪ್ರಕಾರ ಕೀಳ ಜಾತಿಯಲ್ಲಿ ಜನಿಸಿದ ಇವರ ಗೋತ್ರದವರೆಂದು ವಿಪ್ರರು ಹೇಳಿಕೊಳ್ಳುವರು ಅಂದರೆ ವಿಪ್ರರು ಇವರಂತೆ ಕೀಳರಲ್ಲವೇನು? ಇವರು ತಮ್ಮ ಕೀಳತನವನ್ನು ಜ್ಞಾನ ನೀತಿ ಭಕ್ತಿಯಿಂದ ಕಳಕೊಂಡು ಬ್ರಾಹ್ಮಣರಾದರು. ಆದರೆ ಯಾವ ನೀತಿ ಜ್ಞಾನ ಭಕ್ತಿ ವೈರಾಗ್ಯ ತ್ಯಾಗ ಏನೂ ಇರದೆ ನೀವೆಂತು ಬ್ರಾಹ್ಮಣರಾಗುವಿರೆಂದು ಬಸವನು ಅವರನ್ನು ಹೀಯಾಳಿಸುವನು. ಹೀಗೆ ವಿಪ್ರರಲ್ಲಿಯ ಎಲ್ಲ ಬಗೆಯ ತಪ್ಪುಗಳನ್ನು ಎತ್ತಿ ಜಗಕೆ ತೋರಿಸಹತ್ತಿದನು. ಅಂಜದೆ ಅಳಕದೆ ಅವರ ಟೀಕೆಯನ್ನು ಮಾಡಹತ್ತಿದನು. ಅವರು ಇವನ ಚಳವಳಿಯನ್ನು ಕೇಳಿನೋಡಿ ಬೇಸತ್ತರು. ಬಸವನ ವಿರುದ್ಧ ಎಲ್ಲತರದ ಅಸ್ತ್ರಗಳನ್ನು ಎತ್ತಿ ಉಪಯೋಗಿಸಿದರು. ಇವನು ತಮ್ಮ ಸಮಾಜದ ಕಡುವೈರಿ ಎಂದು ಪೂರ್ಣ ನಂಬಿದರು. ಅದರಂತೆ ನಿತ್ಯ ಇವನ ಪೀಡೆ ಹೆಚ್ಚಾಗುತ್ತಲೇ ನಡೆದಿತ್ತು. ಚಿಕ್ಕವನಾದರೂ ಚಳುವಳಿಯ ನಾಯಕನಾದನು. ಇವನ ಪಕ್ಷವನ್ನು ಅಕ್ಕ ನಾಗಮ್ಮನು ಸದಾವಹಿಸುವಳು ಅಲ್ಲದೆ ಇವಳ ಗಂಡನಾದ ಶಿವಸ್ವಾಮಿಯೂ ಕೂಡ ಅವನಂತೆ ಹೇಳುವನು. ಈ ಮೂವರು ಬ್ರಾಹ್ಮಣ ಸಮಾಜಕ್ಕೆ ಸದಾ ವಿರೋಧ ಮಾಡುವ ತ್ರಿಮೂರ್ತಿಗಳಾದರು. ಇವರಲ್ಲಿ ಒಳ್ಳೇ ಗಾಢವಾದ ಪ್ರೇಮ ಭಕ್ತಿಗಳನ್ನು ಬಾಲಕ ಬಸವನಲ್ಲಿ ಇರಿಸಿದ್ದರು. ಇವನನ್ನು ಪ್ರತಿಯೊಂದರಲ್ಲಿ ಹಿಂಬಾಲಿಸುತ್ತಿದ್ದರು. ಸದಾ ಇವರು ಇವನ ಪಕ್ಷಪಾತಿಗಳಾಗಿದ್ದರು. ಹೀಗಾದುದರಿಂದ ಇವರನ್ನು ಕೂಡ ಸಮಾಜವು ತಿರಸ್ಕರಿಸಹತ್ತಿತು. ಬಸವನ ಬಳಗದಲ್ಲಿ ಇವರನ್ನು ಸೇರಿಸಿದರು.

## ಉಪನಯನ ತಿರಸ್ಕರಿಸಿದ್ದು.

ಬಸವನು ವಿಪ್ರರ ಪ್ರತಿಯೊಂದು ಆಚಾರ ವಿಚಾರಗಳನ್ನು ಖಂಡಿಸುತ್ತಿದ್ದನು. ಅವರ ಹೋಮ, ಹವನ, ದೇವರು, ಜ್ಯೋತಿಷ್ಯ, ತೀರ್ಥಯಾತ್ರೆ, ಪೂಜೆ ಪಾಪ ಪ್ರಾಯಶ್ಚಿತ್ತ, ಜಾತಿಯ ಶ್ರೇಷ್ಠತೆ ಜಾತಿಯ ಮೂಲಗೋತ್ರದವರು ಪುರಾಣ ವೇದ ಶಾಲೆಯಲ್ಲಿಯ ಪಾಠ ಮೊದಲಾದವುಗಳನ್ನು ಚನ್ನಾಗಿ ಖಂಡಿಸಿ ಅವರ ತಪ್ಪುಗಳ್ನು ವಚನಗಳಿಂದಲೇ ಹೇಳುತ್ತಿದ್ದನು. ಹೀಗಾಗಿ ಜನರು ಇವನ ಚಳವಳಿಗಾಗಿ ಬೇಸತ್ತಿದ್ದರು. ಬಸವನ ಗುಂಪು ದಿನ ದಿನ ಬೆಳೆಯುಹತ್ತಿತ್ತು. ಬಸವನ ಅಕ್ಕ ನಾಗಮ್ಮ ಮಾವ ಶಿವಸ್ವಾಮಿ ಇಬ್ಬರು ಬಸವನ ತತ್ವಗಳನ್ನೇ ಅನುಮೋದಿಸುತ್ತ ಅವನಂತೆ ಮಾತಾಡುತ್ತ ಅವನಿಗೆ ಬಹಳೇ ನೆರವಾಗಿದ್ದರು. ಆದರೆ ಸಮಾಜದ ಕಿರಿಕಿರಿ ಬಹಳೇ ಆದ್ದರಿಂದ ತಂದೆಗೆ ಮಾತ್ರ ಬಹಳೇ ಚಿಂತೆಯಾಗಿತ್ತು. ಮಗನೆಂಬ ಮೋಹಕ್ಕಾಗಿ ಮಗನಿಗೆ ಮನೆಯಲ್ಲಿ ಬಗೆಬಗೆಯಿಂದ ಬುದ್ಧಿಯನ್ನು ಹೇಳುತ್ತಿದ್ದರು. ಆದರೂ ಅವನ ಮಾತನ್ನು ಕೇಳುತ್ತಿರಲಿಲ್ಲ. ಈ ಸಮಯದಲ್ಲಿ ಬಸವನಿಗೆ ೮ ವರ್ಷ ತುಂಬಿ ೯ ವರ್ಷ ನಡೆದವು ಈ ಸಮಯದಲ್ಲಿ ತಮ್ಮ ಧರ್ಮದ ಪ್ರಕಾರ ಬಸವನಿಗೆ ಮುಂಜಿವೆಯನ್ನು ಮಾಡಬೇಕಾಗಿತ್ತು ಜನರು ಅದರಂತೆ ಮಾದರಸನಿಗೆ ತಿಳಿಸಿದರು ಮುಂಜಿವೆಯಾದನಂತರವಾದರೂ ಬಸವನು ತಮ್ಮ ದಾರಿಗೆ ಬರಬಹುದೆಂದು ಬಗೆದು ಅದನ್ನು ಮಾಡುವ ಸಲುವಾಗಿ ಸಿದ್ಧತೆಗಳು ನಡೆದವು— ಬಸವನ ಗೆಳೆಯರು ಅವನಿಗೆ ಅವನ ಮನೆಯವರು ಉಪನಯನ ಮಾಡುವರು. ಅದಕ್ಕೆ ಏನು ಮಾಡುವನೆಂದು ಪ್ರಶ್ನಿಸಹತ್ತಿದರು. ಬ್ರಾಹ್ಮಣರ ಎಲ್ಲ ಆಚಾರ ವಿಚಾರಗಳನ್ನು ಖಂಡಿಸುವ ನೀನು ಈ ಪ್ರಸಂಗದಲ್ಲಿ ಹೇಗೆ ವರ್ತಿಸುವಿ ಎಂದು ಕೇಳಹತ್ತಿದರು. ಅದಕ್ಕೆ ಬಸವನು ಮೌಂಜಿ ಬಂಧನವನ್ನು ಕೊರಳಲ್ಲಿ ಹಾಕಿಕೊಂಡು ನನ್ನ ಸಕಲ ಕಾರ್ಯಗಳ ಕೊಲೆಯನ್ನೆಂದೂ ಮಾಡುವದಿಲ್ಲ. ಇದರಿಂದ ಸ್ವಾತಂತ್ರ ವಿಚಾರಗಳನ್ನು ಕಳಕೊಳ್ಳಬೇಕಾಗುವದು. ಇದೊಂದು ಬಗೆಯ ಉರುಲು ಎಂದು ಹೇಳಬಹುದು. ಎಂದು ಅವರಿಗೆ ಹೇಳಿದನು.

ಬಂಧು ಬಾಂಧವರು ಬೇಗ ಭಾವಂದಿರು ಬಂದಿದ್ದಾರೆ. ಭಟ್ಟರು ಜೋಯಿಸರು ಬಂದಿದ್ದಾರೆ. ಗುರುಗಳು ಬಂದಿದ್ದಾರೆ ಕಲ್ಯಾಣದಿಂದ ಸೋದರ ಮಾವ ಬಲದೇವ ಮಂತ್ರಿಯೂ ಕುಟುಂಬಸಹಿತ ಬಂದಿದ್ದಾನೆ. ಇದೊಳ್ಳೆ ತುರುಸಿನ ಉಪನಯನವೆಂದು ನೋಡಲು ಅನೇಕರು ಬ್ರಾಹ್ಮಣರು ಬಂದಿದ್ದಾರೆ.

ಇವರ ಕಲಹವೆಲ್ಲಿಗೆ ಹೋಗುವದೆಂದು ನಿರೀಕ್ಷಿಸಿ ಮೋಜನಮಾಡಲು ಬೇರೆ ಜಾತಿಯ ಜನಸ್ತೋಮನಕಿಕ್ಕಿರಿದು ನೆರೆದಿದೆ. ಮನೆಯಲ್ಲಿ ಸಂಭ್ರಮ ನಡೆದಿದೆ. ಮುಂಜಾನೆ ೯ ಗಂಟೆಯ ಸಮಯ ಪ್ರತಿಷ್ಠಿತಜನರೆಲ್ಲ ಕೂಡಿ ಬಸವನನ್ನು ಕರೆದು ತಮ್ಮ ಎದುರಿನಲ್ಲಿ ಕೂಡ್ರಿಸಿ ಉಪನಯುವನ್ನು ಒಪ್ಪಿ ಕೊಂಡು ಹೊಂದಬೇಕೆಂದು ಕೇಳಹತ್ತಿಹರು. ಬಸವನು ಕರ್ಮದಬಂಧನ ಒಲ್ಲೆ ನನಗೆ ಅದರಿಂದ ಉಪಯೋಗವಿಲ್ಲ.

ಕರ್ಮಲತೆ ಜನಿವಾರವಿದು. ಹೋತಿನ ಕುತ್ತಿಗೆಯ ಬಿಗಿದಂತಿದೆ
ಈ ಜನಿವಾರವಿದು. ಕರ್ಮಕಾಂಡಿನಾನಲ್ಲ ಭಕ್ತಿಕಾಂಡಿ ತಿಳಿ
ಕೂ. ಸಂ. ದೇ.

ಈ ನೇಣನು ಒಮ್ಮೆ ಕೊರಳಲ್ಲಿ ಬಂದರೆ ಸಾಕು ಶ್ರೇಷ್ಠ ಜಾತಿಯವ ನೆಂಬ ಅಹಂಕಾರಬರುವದು. ಕರ್ಮಕ್ಕೆ ಇದರಿಂದ ಬಂದನವಾಗುವದು. ಅದಕ್ಕಾಗಿ

ಬಡ ಹಾರುವನೇನು ಭಕ್ತನಾದರೂ ನೇಣಿನ ಹಂಗುಬಿಡನು ।
ಲಿಂಗ ಭಕ್ತನಾಗದ ಕಾರಣಾ ಕೊರಳಲ್ಲಿ ನೇಣು ಕೈಯಲ್ಲಿ ಹುಲ್ಲು
ಬಂದಿತಯ್ಯಾ ಕೂ. ಸಂ. ದೇ.

ಈ ಪ್ರಕಾರ ಮಾನವನು ಒಮ್ಮೆ ಲಿಂಗ ಭಕ್ತನಾದ ಬಳಿಕ ತಿರುಗಿ ಜನಿವಾರ ಬಂಧನವೆಂದೂ ಆಗಕೂಡದು ಅದಕ್ಕಾಗಿ

ಶರಣರ ಸಂಬಂಧವನರಿತ ಬಳಿಕ ಮರಳಿ ಭವಿಯ
ಬೆರಸಲಾಗದು. ಇನ್ನೇಕಯ್ಯಾ ಈ ಜನಿವಾರದ ಹಂಗೆನಗೆ
ಭವಿಯ ಸಂಗಹೊಲ್ಲ ಭವಿಯ ಪಾಕ ಸೇವಿಸಕೂಡದು
ಭವಿಯ ಬೆರಸಕೂಡದು ಭವಿಯ ಮುಖ ನೋಡಲಾಗದು
ಭವಿಯ ಮನೆಯಲ್ಲಿ ಸಹ ಇರಕೂಡದು ಇಂತಿರ್ದ ಎನಗೆ
ಜನಿವಾರ ಧಾರಣೆಯೇ ಕೂಡಲ ಸಂಗಮ ದೇವ.

ಇಲ್ಲಿ ನೆರೆದವರು ಎಲ್ಲರೂ ಭವಿಗಳು ಇವರಲ್ಲಿ ಯಾರೂ ಗುರುಗಳಾಗ ಲಿಕ್ಕೆ ಯೋಗ್ಯರಿಲ್ಲ. ಹೊಟ್ಟೆಯ ಪಾಡಿಗಾಗಿ ಬಡಕೊಳ್ಳುವ ನೀವು ಗುರುಗಳಾ ಗಲು ಶಕ್ಯವಿಲ್ಲ. ಗುರುಗಳೆಂದರೆ ಬಹು ಹೆಚ್ಚಿನ ಸತ್ಶೀಲರು.

ಕಾಮವ ತೊರೆದಾತ ಹೇಮವ ಜರಿದಾತ ಬಾನುವಿನ
ಉದಿಯಕ್ಕೆ ಒಳಗಾಗದಾತ ಶರಣನು ಅವನೇ ಜಗದ್ಗುರು
ಅವನೇ ಜಂಗಮ ಕೂ. ಸಂ. ದೇವಾ.

## ಉಪನಯನ ತಿರಸ್ಕರಿಸಿದ್ದು.

ಬಸವನು ವಿಪ್ರರ ಪ್ರತಿಯೊಂದು ಆಚಾರ ವಿಚಾರಗಳನ್ನು ಖಂಡಿಸುತ್ತಿದ್ದನು. ಅವರ ಹೋಮ, ಹವನ, ದೇವರು, ಜ್ಯೋತಿಷ್ಯ, ತೀರ್ಥಯಾತ್ರೆ, ಪೂಜೆ ಪಾಪ ಪ್ರಾಯಶ್ಚಿತ್ತ, ಜಾತಿಯ ಶ್ರೇಷ್ಠತೆ ಜಾತಿಯ ಮೂಲಗೋತ್ರದವರು ಪುರಾಣ ವೇದ ಶಾಲೆಯಲ್ಲಿಯ ಪಾಠ ಮೊದಲಾದವುಗಳನ್ನು ಚನ್ನಾಗಿ ಖಂಡಿಸಿ ಅವರ ತಪ್ಪುಗಳ್ನು ವಚನಗಳಿಂದಲೇ ಹೇಳುತ್ತಿದ್ದನು. ಹೀಗಾಗಿ ಜನರು ಇವನ ಚಳವಳಿಗಾಗಿ ಬೇಸತ್ತಿದ್ದರು. ಬಸವನ ಗುಂಪು ದಿನ ದಿನ ಬೆಳೆಯುಹತ್ತಿತ್ತು. ಬಸವನ ಅಕ್ಕ ನಾಗಮ್ಮ ಮಾವ ಶಿವಸ್ವಾಮಿ ಇಬ್ಬರು ಬಸವನ ತತ್ವಗಳನ್ನೇ ಅನುಮೋದಿಸುತ್ತ ಅವನಂತೆ ಮಾತಾಡುತ್ತ ಅವನಿಗೆ ಬಹಳೇ ನೆರವಾಗಿದ್ದರು. ಆದರೆ ಸಮಾಜದ ಕಿರಿಕಿರಿ ಬಹಳೇ ಆದ್ದರಿಂದ ತಂದೆಗೆ ಮಾತ್ರ ಬಹಳೇ ಚಿಂತೆಯಾಗಿತ್ತು. ಮಗನೆಂಬ ಮೋಹಕ್ಕಾಗಿ ಮಗನಿಗೆ ಮನೆಯಲ್ಲಿ ಬಗೆಬಗೆಯಿಂದ ಬುದ್ಧಿಯನ್ನು ಹೇಳುತ್ತಿದ್ದರು. ಆದರೂ ಅವನ ಮಾತನ್ನು ಕೇಳುತ್ತಿರಲಿಲ್ಲ. ಈ ಸಮಯದಲ್ಲಿ ಬಸವನಿಗೆ ೮ ವರ್ಷ ತುಂಬಿ ೯ ವರ್ಷ ನಡೆದವು ಈ ಸಮಯದಲ್ಲಿ ತಮ್ಮ ಧರ್ಮದ ಪ್ರಕಾರ ಬಸವನಿಗೆ ಮುಂಜಿವೆಯನ್ನು ಮಾಡಬೇಕಾಗಿತ್ತು ಜನರು ಅದರಂತೆ ಮಾದರಸನಿಗೆ ತಿಳಿಸಿದರು ಮುಂಜಿವೆಯಾದನಂತರವಾದರೂ ಬಸವನು ತಮ್ಮ ದಾರಿಗೆ ಬರಬಹುದೆಂದು ಬಗೆದು ಅದನ್ನು ಮಾಡುವ ಸಲುವಾಗಿ ಸಿದ್ಧತೆಗಳು ನಡೆದವು— ಬಸವನ ಗೆಳೆಯರು ಅವನಿಗೆ ಅವನ ಮನೆಯವರು ಉಪನಯನ ಮಾಡುವರು. ಅದಕ್ಕೆ ಏನು ಮಾಡುವನೆಂದು ಪ್ರಶ್ನಿಸಹತ್ತಿದರು. ಬ್ರಾಹ್ಮಣರ ಎಲ್ಲ ಆಚಾರ ವಿಚಾರಗಳನ್ನು ಖಂಡಿಸುವ ನೀನು ಈ ಪ್ರಸಂಗದಲ್ಲಿ ಹೇಗೆ ವರ್ತಿಸುವಿ ಎಂದು ಕೇಳಹತ್ತಿದರು. ಅದಕ್ಕೆ ಬಸವನು ಮೌಂಜಿ ಬಂಧನವನ್ನು ಕೊರಳ್ಳಲ್ಲಿ ಹಾಕಿಕೊಂಡು ನನ್ನ ಸಕಲ ಕಾರ್ಯಗಳ ಕೊಲೆಯನ್ನೆಂದೂ ಮಾಡುವದಿಲ್ಲ. ಇದರಿಂದ ಸ್ವಾತಂತ್ರ ವಿಚಾರಗಳನ್ನು ಕಳಕೊಳ್ಳಬೇಕಾಗುವದು. ಇದೊಂದು ಬಗೆಯ ಉರುಲು ಎಂದು ಹೇಳಬಹುದು. ಎಂದು ಅವರಿಗೆ ಹೇಳಿದನು.

ಬಂದು ಬಾಂಧವರು ಬೀಗ ಭಾವಂದಿರು ಬಂದಿದ್ದಾರೆ. ಭಟ್ಟರು ಜೋಯಿಸರು ಬಂದಿದ್ದಾರೆ. ಗುರುಗಳು ಬಂದಿದ್ದಾರೆ ಕಲ್ಯಾಣದಿಂದ ಸೋದರ ಮಾವ ಬಲದೇವ ಮಂತ್ರಿಯೂ ಕುಟುಂಬಸಹಿತ ಬಂದಿದ್ದಾನೆ. ಇದೊಳ್ಳೆ ತುರುಸಿನ ಉಪನಯನವೆಂದು ನೋಡಲು ಅನೇಕರು ಬ್ರಾಹ್ಮಣರು ಬಂದಿದ್ದಾರೆ.

ಇವರ ಕಲಹವೆಲ್ಲಿಗೆ ಹೋಗುವದೆಂದು ನಿರೀಕ್ಷಿಸಿ ಮೋಜಮಾಡಲು ಬೇರೆ ಜಾತಿಯ ಜನಸ್ತೋಮನಕಿಕ್ಕಿರಿದು ನೆರೆದಿದೆ. ಮನೆಯಲ್ಲಿ ಸಂಭ್ರಮ ನಡೆದಿದೆ. ಮುಂಜಾನೆ ೯ ಗಂಟೆಯ ಸಮಯ ಪ್ರತಿಷ್ಠಿತಜನರೆಲ್ಲ ಕೂಡಿ ಬಸವನನ್ನು ಕರೆದು ತಮ್ಮ ಎದುರಿನಲ್ಲಿ ಕೂಡ್ರಿಸಿ ಉಪನಯವನ್ನು ಒಪ್ಪಿ ಕೊಂಡು ಹೊಂದಬೇಕೆಂದು ಕೇಳಹತ್ತಿಹರು. ಬಸವನು ಕರ್ಮದಬಂಧನ ಒಲ್ಲೆ ನನಗೆ ಅದರಿಂದ ಉಪಯೋಗವಿಲ್ಲ.

ಕರ್ಮಲತೆ ಜನಿವಾರವಿದು. ಹೋತಿನ ಕುತ್ತಿಗೆಯ ಬಿಗಿದಂತಿದೆ
ಈ ಜನಿವಾರವಿದು. ಕರ್ಮಕಾಂಡಿನಾನಲ್ಲ ಭಕ್ತಿಕಾಂಡಿ ತಿಳಿ
ಕೂ. ಸಂ. ದೇ.

ಈ ನೇಣನು ಒಮ್ಮೆ ಕೊರಳಲ್ಲಿ ಬಂದರೆ ಸಾಕು ಶ್ರೇಷ್ಠ ಜಾತಿಯವ ನೆಂಬ ಅಹಂಕಾರಬರುವದು. ಕರ್ಮಕ್ಕೆ ಇದರಿಂದ ಬಂದನವಾಗುವದು. ಅದಕ್ಕಾಗಿ

ಬಡ ಹಾರುವನೇನು ಭಕ್ತನಾದರೂ ನೇಣಿನ ಹಂಗುಬಿಡನು ।
ಲಿಂಗ ಭಕ್ತನಾಗದ ಕಾರಣಾ ಕೊರಳಲ್ಲಿ ನೇಣು ಕೈಯಲ್ಲಿ ಹುಲ್ಲು
ಬಂದಿತಯ್ಯಾ ಕೂ. ಸಂ. ದೇ.

ಈ ಪ್ರಕಾರ ಮಾನವನು ಒಮ್ಮೆ ಲಿಂಗ ಭಕ್ತನಾದ ಬಳಿಕ ತಿರುಗಿ ಜನಿವಾರ ಬಂಧನವೆಂದೂ ಆಗಕೂಡದು ಅದಕ್ಕಾಗಿ

ಶರಣರ ಸಂಬಂಧವನರಿತ ಬಳಿಕ ಮರಳಿ ಭವಿಯ
ಬೆರಸಲಾಗದು. ಇನ್ನೇಕಯ್ಯಾ ಈ ಜನಿವಾರದ ಹಂಗೆನಗೆ
ಭವಿಯ ಸಂಗಹೊಲ್ಲ ಭವಿಯ ಪಾಕ ಸೇವಿಸಕೂಡದು
ಭವಿಯ ಬೆರಸಕೂಡದು ಭವಿಯ ಮುಖ ನೋಡಲಾಗದು
ಭವಿಯ ಮನೆಯಲ್ಲಿ ಸಹ ಇರಕೂಡದು ಇಂತಿರ್ದ ಎನಗೆ
ಜನಿವಾರ ಧಾರಣೆಯೇ ಕೂಡಲ ಸಂಗಮ ದೇವ.

ಇಲ್ಲಿ ನೆರೆದವರು ಎಲ್ಲರೂ ಭವಿಗಳು ಇವರಲ್ಲಿ ಯಾರೂ ಗುರುಗಳಾಗ ಲಿಕ್ಕೆ ಯೋಗ್ಯರಿಲ್ಲ. ಹೊಟ್ಟೆಯ ಪಾಡಿಗಾಗಿ ಬಡಕೊಳ್ಳುವ ನೀವು ಗುರುಗಳಾ ಗಲು ಶಕ್ಯವಿಲ್ಲ. ಗುರುಗಳೆಂದರೆ ಬಹು ಹೆಚ್ಚಿನ ಸತ್ಶೀಲರು.

ಕಾಮವ ತೊರೆದಾತ ಹೇಮವ ಜರಿದಾತ ಬಾನುವಿನ
ಉದಿಯಕ್ಕೆ ಒಳಗಾಗದಾತ ಶರಣನು ಅವನೇ ಜಗದ್ಗುರು
ಅವನೇ ಜಂಗಮ ಕೂ. ಸಂ. ದೇವಾ.

ಎಂದು ಹೇಳಿ ಹೊಟ್ಟೆಗಾಗಿ ವೈದಿಕ ವಿದ್ಯ ಮಂತ್ರ ತಂತ್ರಗಳನ್ನು ಕಲಿತು ವಾದಿಕ ಕ್ರಿಯೆ ಕರ್ಮಗಳನ್ನು ನೆರವೇರಿಸುವವರೆಂದೂ ಗುರುಗಳಾಗಲಾರರು. ನನಗೆ ಇಂಥ ಗುರುಗಳಿಂದ ಏನೂ ಪ್ರಯೋಜನವಿಲ್ಲ. ಈ ಮೌಂಜಿ ಬಂಧನದ ಸಲುವಾಗಿ ಯಾರೂ ಆಗ್ರಹಪಡಬಾರದು ಎಂದು ನಿಮಗೆ ವಿನಯಪೂರ್ವಕ ಬೇಡಿಕೊಳ್ಳುವೆನು. ಎಂದ ಬಸವನು ವಚನಗಳಿಂದ ಉಪದೇಶಿಸಿ ನೆರೆದವರನ್ನು ಚಕಿತಗೊಳಿಸಿದನು. ಹೀಗಾಗಿ ಎಲ್ಲರೂ ನಿರುತ್ತರರಾದರು ಆದರೂ ಬ್ರಾಹ್ಮಣರಿಗೆ ಕೋಪ ವಿಪರೀತ ಬಂದು ಸಿಕ್ಕಂತೆ ಮಾದರಸನಿಗೆ ಗದ್ದರಿಸಹತ್ತಿದರು ಊಟ ಪರಾಳ ದಕ್ಷಿಣೆಗಳ ಆಶೆಗಾಗಿ ನೆರೆದವರಿಗೆ ಬಸವನ ಈ ಉತ್ತರದಿಂದ ಬಹಳೇ ನಿರಾಶೆಯಾಗಿ ಸಿಕ್ಕಂತೆ ಒಟಗುಟ್ಟಹತ್ತಿದರು ಈ ವಾದದಲ್ಲಿ ಎಲ್ಲರೂ ಹಸಿವೆಯಿಂದನೊಂದು ಮತ್ತಷ್ಟು ಕೋಪಗೊಂಡು ಎಲ್ಲರಮೇಲೂ ಗದ್ದರಿಸಹತ್ತಿದರು. ಅಲ್ಲಿ ಯಾರೂ ಒಬ್ಬರಿಗೊಬ್ಬರು ಸಮಾಧಾನ ಹೇಳುವವರಿಲ್ಲದಾಯಿತು. ಈ ಬಸವನು ಎಲ್ಲ ಬ್ರಾಹ್ಮಣರಿಗೆ ಕಡುವೈರಿ ಸಮಾಜದ್ರೋಹಿ ಕುಲಕ್ಕೆ ಕಂಟಕ ಸದಾ ಇವನು ಬ್ರಾಹ್ಮಣ್ಯಕ್ಕೆ ಬಲವಾದ ಅಪಮಾನಕಾರಕ ಕೊಡಲಿಯ ಪೆಟ್ಟುಗಳನ್ನು ಕೊಡುತ್ತಲೇ ಇರುವನು ಹುಡುಗನಾದರೂ ಕೂಡ ನಮ್ಮೆಲ್ಲರಿಗೆ ಬಗೆಬಗೆಯಿಂದ ಕೀಳುಗಳೆಯುತ್ತಿರುವನು. ಸದಾ ಜನರಲ್ಲಿ ಅಪಹಾಸ್ಯ ಅಪಮಾನಗೊಳಿಸುತ್ತಿರುವನು. ಇವನನ್ನು ಇವನ ತಂದೆ ಮನೆಬಿಟ್ಟು ಹೊರಗೆ ಹಾಕಬೇಕು. ಇಲ್ಲವೆ ಮಾದರಸನ ಮನೆಗೆ ಸಮಾಜದವರೆಲ್ಲರೂ ಕೂಡಿ ಭಹಿಷ್ಕಾರ ಹಾಕಬೇಕು. ನಮ್ಮ ಜಾತಿಯಿಂದ ಹೊರಗೆ ಹಾಕಬೇಕು. ಒಲ್ಲೆಂದರೆ ಬಸವನನ್ನು ಮನೆಬಿಟ್ಟು ಹೊರಗೆ ಹಾಕಬೇಕು ಎಂದು ಎಲ್ಲರೂ ಕೂಡಿ ಠರಾವು ಮಾಡಿಕೊಂಡರು. ಇದು ಬಸವನಿಗೂ ತಂದೆಗೂ ತಿಳಿಯಿತು. ಆಗ ಬಸವನಿಗೆ ಮಹದಾನಂದವಾಯಿತು. ತಂದೆ ಸಮಾಜದ ಒತ್ತಡಕ್ಕೆ ಒಪ್ಪಿ ಬಸವನನ್ನು ಮನೆಯಿಂದ ಹೊರಗೆ ಹಾಕಲು ಸಿದ್ಧನಾದನು. ಬಸವನು ಇದನ್ನು ಮೊದಲೇ ತಿಳಿದು ಹೊತ್ತ ಅರಿವೆಯ ಮೇಲೆ ಮುಂಜಿವಿಯ ಮಂಟಪದಿಂದ ಹೊರಗೇ ಹೊರಟುಬಿಟ್ಟನು ಆಗ ಇವನ ಅಕ್ಕನೂ ಅಕ್ಕನ ಗಂಡನೂ ಅಳುತ್ತ ಬಸವಾ ಬಸವಾ ಎಂದು ಕರೆಯುತ್ತ ಬೆನ್ನಹತ್ತಿದರು. ತಂದೆ ತಾಯಿಗಳು ಈ ವಿಪರೀತ ಚಿತ್ರವನ್ನು ನೋಡಿ ಹೌಹಾರಿ ದಿಕ್ಕು ತೋಚದೆ ಅಳುತ್ತ ಕುಳಿತರು. ನೆರೆದವರೆಲ್ಲ ಹೊರಟು ಹೋದರು ಬ್ರಾಹ್ಮಣರಿಗೆ ಹಿಗ್ಗು ಆಯಿತು. ಉಳಿದವರಿಗೆ ಹಳಹಳಿಚಿಂತೆಯಾಯಿತು. ತುಂಬಿದ ಮನೆಯು ಮಸಣದಂತೆ ಕಾಣಹತ್ತಿತು. ರಾಮನು ವನವಾಸಕ್ಕೆ ಸಿದ್ಧನಾಗಲು ಸೀತಾ ಲಕ್ಷ್ಮಣರು ಬೆನ್ನು ಹತ್ತಿದಂತೆ

ಬವಸನ ವನವಾಸವು ಅದಕ್ಕೂ ಹೆಚ್ಚಿನದಾಯಿತು. ಇಲ್ಲಿ ಬಸವನ ಇನ್ನೂ ೮ ನೇ ವರ್ಷದ ಚಿಕ್ಕ ಬಾಲಕನು ಅವನ ಅಕ್ಕನು ಬಹಳವಾದರೆ ೧೫—೧೬ ವರ್ಷದ ಪ್ರಾಯದವಳು ಅಲ್ಲದೆ ಶಿವಸ್ವಾಮಿಯು ೨೨—೨೩ ವರ್ಷದವನು. ರಾಮನಿಗೆ ಹೆಂಡತಿ ವನವಾಸದಲ್ಲಿ ಬೆಂಬತ್ತುವದು ಸಹಜ ಸ್ವಾಭಾವಿಕ ಪತಿವೃತೆಯ ಧರ್ಮವೆನಿಸುವದು. ಆದರೆ ಬಸವನಿಗೆ ವನವಾಸದಲ್ಲಿ ಬೆಂಬತ್ತಿದ ಅಕ್ಕ ನಾಗಮ್ಮನು ಆಕೆಯ ಪತಿಯಾದ ಶಿವಸ್ವಾಮಿಯೂ ಎಲ್ಲ ಧರ್ಮಗಳನ್ನು ಮೀರಿದವರೆಂದೇ ಹೇಳಬೇಕು. ತಂದೆ ಬೆನ್ನು ಹತ್ತಿಲ್ಲ ಅಕ್ಕನು ಬೀಗನೂ ಬೆನ್ನುಹತ್ತುವದೆಂದರೆ ಬಸವನ ಮೇಲೆ ಅವರ ಪ್ರೀತಿ ಎಷ್ಟೆಂದು ಗೊತ್ತಾಗುವದು ಈ ವನವಾಸವು ನಿಜವಾಗಿ ರಾಮ ಪಾಂಡವರ ವನವಾಸಕ್ಕಿಂತಲೂ ಹೆಚ್ಚಿನ ವನವಾಸ ಯಾಕಂದರೆ ರಾಮ ಪಾಂಡವರ ವನವಾಸ ಕವಿಯ ಕಲ್ಪನೆಯುದಾಗಿದೆ ಅಲ್ಲದೆ ಇವರು ವಯಸ್ಕರರು ಅಲ್ಲದೆ ಸತಿಪತಿ ಬಂಧುಗಳ ಸರ್ವೇತ್ ವಾಗಿದೆ ಬಸವನ ವನವಾಸ ಚಿಕ್ಕ ವಯಸ್ಸಿನದೂ ಅಲ್ಲದೆ ಅಕ್ಕನ ಹಾಗೂ ಬೀಗನ ಕೂಡ ಆಗಿದೆ ಅದಕ್ಕೆ ಇವನ ವನವಾಸ ನಿಜಕ್ಕೂ ನಿಜವಾಗಿ ಹೆಚ್ಚಿನದು ಪವಿತ್ರವಾದದು ಶುದ್ಧವಾದುದೆಂದು ಧಾರಾಳವಾಗಿ ಹೇಳಬಹುದು. ಹೀಗಾಗಿ ಬಸವನ ಪ್ರತಿಯೊಂದು ವ್ಯವಹಾರದಲ್ಲಿ ವೈಶಿಷ್ಟ್ಯವಿದೆ ಪವಿತ್ರತೆ ಇದೆ ಶುದ್ಧತೆ ಇದೆ. ಸರಳತೆ ಇದೆ ನ್ಯಾಯ ನಿಷ್ಠುರತೆ ಇದೆ. ಎಂದು ಅವನ ಚರಿತ್ರೆಯಿಂದ ಸಹಜ ಗೊತ್ತಾಗದೆ ಇರದು. ಅದಕ್ಕಂತಲೇ ಬಸವನ ಅವತಾರವು ಒಂದು ವಿಶೇಷ ಮಾದರಿಯದಾಗಿದೆ. ಅಲ್ಲದೆ ವಿಶೇಷ ಕಾರ್ಯದ್ದೂ ಆಗಿದೆ. ಯಾವ ಅವತಾರಿಗಳೂ ಇವನ ಅವತಾರಕ್ಕೆ ಸರಿಹೋಲಲಾರವೆಂದು ಸಹಜ ಈ ಚರಿತ್ರೆ ಮುಗಿದ ಬಳಿಕ ಅನಿಸುವದು.

# ಭಕ್ತಿ.

(ಲೇಖಕಃ— ವಿರುಪಾಕ್ಷಸ್ವಾಮಿ ಚಿಕ್ಕಮಠ, ಮು. ಹೆಬ್ಬಳ್ಳಿ.)

ಯಾರ ಹೃದಯದಲ್ಲಿ ದೃಢವಾದ ಭಗವದ್ಭಕ್ತಿಯುಂಟೋ ಅವರೇ ಧನ್ಯರು ಈ ಪ್ರಪಂಚದಲ್ಲಿ ಆ ಭಕ್ತಿಯೊಂದೇ ಸತ್ಯ ಉಳಿದುದೆಲ್ಲವೂ ಮಿಥ್ಯೆ ನಮ್ಮ ಬಾಳು ನಿರ್ಮಲವಾಗಿರಬೇಕು, ಪರಿಶುದ್ಧವಾಗಿರಬೇಕು, ನಾವು ಯಾವಾಗಲೂ ನಿರ್ಭಯರಾಗಿರಬೇಕು ನಮ್ಮೆದುರಿಗೆ ಸಾವಿರ ಜನ ನೆಲಕ್ಕುರಿಳಿದರೂ ಯುದೆ ಗುಂದಬಾರದು ನಿತ್ಯಃ ಸುಖಕ್ಕೆ ಪರಮಸಾಧನವೆಂದರೆ ಭಕ್ತಿ. ನೈಜಭಕ್ತಿಗೆ ಅದ್ಭುತ ಶಕ್ತಿ ಅದರ ಮಹಿಮೆಯಿಂದ ಭಕ್ತನಾದವನು ನಿರ್ಜೀವಾದ ಕಲ್ಲಿನ ಲ್ಲಿಯೂ ಕೂಡ ದೇವತೆಯನ್ನು ಅನುಸಂಧಾನ ಮಾಡಬಲ್ಲನು. ಉದಾ:— ನಾಗಲಿಂಗಸ್ವಾಮಿ ಮತ್ತು ಕಳಸದ ಗೋವಿಂದಭಟ್ಟರು ಮುಂತಾಗಿ) ನಿಜ ವಾದ ಭಕ್ತಿಗೆ ಜೀವದಾಯಕ ಶಕ್ತಿಯುಂಟು. ಅದು ಜಡಕ್ಕೂ ಚೈತನ್ಯ ದಾನಮಾಡಬಲ್ಲದು. ಉದಾ:—ಕೋಳೂರ ಕೊಡಗೂಸು- ಮೃತ ಶರೀರಕ್ಕೂ ಪ್ರಾಣದಾನ ಮಾಡಬಲ್ಲದು. ಉದಾಃ— ಚನ್ನಮ್ಮಾ ವ ಸತ್ಯಸಾವಿತ್ರಿ ಜಗದೀ ಶ್ವರನಲ್ಲಿ ಯಾರಿಗೆ ಸ್ವಾಭಾವಿಕವಾದ ಭಕ್ತಿಯಿದೆಯೋ ಅವರೇ ವಾಸ್ತವವಾ ಗಿಯೂ ಶಾಶ್ವತವಾಗಿಯೂ ಸುಖವನ್ನು ಅನುಭವಿಸತಕ್ಕವರು ರಾಮಕೃಷ್ಣ ಪರಮಹಂಸರು ಅನ್ನುವದೇನಂದರೆ, ಶ್ರದ್ಧೆಯಿಂದ ಕೂಡಿದ ದೈವಭಕ್ತಿಯ ಮಹಿಮೆಯಿಂದ ಪರಮಪದವನ್ನು ಬಹು ಸುಲಭವಾಗಿ ಸಾಧಿಸಬಹುದು. ಬರಿಯ ಬುದ್ಧಿಯಿಂದಾಗಲಿ, ಮುಕ್ತಿ ವಿಚಾರದಿಂದಾಗಲಿ ಸಾಧ್ಯವಲ್ಲ. ದೇವರ ದರ್ಶನ ನಮಗೆ ದೃಢವಾದ ಭಕ್ತಿಯಿಂದಲೇ ಸಾಧ್ಯ. ಕೇವಲ ಬುದ್ಧಿಯಿಂದಲೇ ಅವ ನನ್ನು ಸೇರಲಾಗುವದಿಲ್ಲ. ಯೋಗಾಭ್ಯಾಸದಿಂದಾಗಲಿ, ನಾನಾವಿಧ ಕ್ಲೇಶಗ ಳಿಂದಾಗಲಿ ಅದು ಸಾಧ್ಯವಾಗುವದಿಲ್ಲ. ನಿಜವಾದ ಸ್ವಾರ್ಥವಿಲ್ಲದ ಏಕಾಗ್ರ ಭಕ್ತಿಯುಳ್ಳವರಿಗೆ ಭಗವಂತನು ಲಭಿಸುವನು. ಭಗವಂತನು ನಿತ್ಯಮುಕ್ತನು ಎಲ್ಲ ವಿಧಿಶಾಸನಗಳಿಗೂ ಅತೀತನು. ದೇವರೇ ಪ್ರೇಮ, ಪ್ರೇಮವೇ ದೇವರು ಆದರೆ ಇದು ಅನುಭವಸಿದ್ಧವಾಗುವದು ಬಹಳ ಕಷ್ಟ ಇದನ್ನು ಅನುಭವ ಸಿದ್ಧ ಮಾಡಿಕೊಳ್ಳಲು ಸತ್ಯವಾದ ಪರಿಶುದ್ಧವಾದ ಅಂತಃಕರಣ ಅತ್ಯಾ ವಶ್ಯಕ. ನಮ್ಮಲ್ಲಿ ಸ್ವಾರ್ಥಲೇಶ ಮಾತ್ರವಿದ್ದಲ್ಲಿ ಆ ಅನುಭವ ದೊರೆಯಲಾ ರದು. ಪ್ರೇಮಭಾವ ಅತಿ ಪವಿತ್ರವಾದದು, ದಿವ್ಯವಾದುದು, ಈ ವಿಧ

ವಾದ ಭಕ್ತಿ ಅಂಕುರಿಸಿದ ಕೂಡಲೇ ಪ್ರಾಪಂಚಿಕ ಬಂಧನಗಳು ಕಳಚಿ ಬೀಳುವವು. ಸಾಧನೆ ಕಷ್ಟವೆಂದು ನಿರಾಶೆಯಿಂದ ಮುರುಗಬಾರದು ಆಹಿಕ ದೃಷ್ಟಿಯಲ್ಲಿ ಎಷ್ಟು ಕಷ್ಟಬಂದರೂ ಅದನ್ನು ಅನುಭವಸಿದ್ಧ ಮಾಡಿಕೊಳ್ಳಬೇಕು. ಅದಿಲ್ಲದಿರಲು ಹೃದಯಬಂಜರ ಭೂಮಿಯಂತಾಗುವದು ನಿಶ್ಚಲಭಕ್ತಿಯೇ ಪ್ರಪಂಚದಲ್ಲಿ ಶಾಶ್ವತವಾದದು ಸತ್ಯವಾದದು. ಇದೇ ನೈಸರ್ಗಿಕ ಜೀವನದ ಲಕ್ಷಣ ನಿಜವಾದ ಭಕ್ತಿಗೆ ಇದು ಕಷ್ಟವೇ ಅಲ್ಲ. ಯಾವನು ಭಗವಂತನಲ್ಲಿ ಉಜ್ವಲನಾದ ಭಕ್ತಿಯನ್ನಿಡುತ್ತಾನೋ ಆವನ ಚಿಂತನೆಗಳೆಲ್ಲವೂ ದೂರಾಗುವವು ಸಕಲಹಾನಿ ಗಳಿಂದಲೂ ಸಂರಕ್ಷಿಸುವನು. ನಿಜವಾದ ಭಕ್ತನಾಗಬೇಕಾದರೆ ಪ್ರಾಪಂಚಿಕ ಚಿಂತನೆಗಳಿಗೂ ವ್ಯವಹಾರಗಳಿಗೂ ಅತೀತನಾಗಬೇಕು. ಎಂತಹ ವಿಷಯ ಸ್ಥಿಯಲ್ಲಿಯೂ ಮನಃಸ್ವಾಂತಿಗೆ ಭಂಗಬರಲಾರದು. ನಿರ್ಮಲತ್ವ ಪಾಪರಾಹಿತ್ಯ ನಿಃಸ್ವಾರ್ಥತೆ ಈ ಗುಣಗಳನ್ನು ನಾವು ಸಂಪಾದಿಸಬೇಕು. ಸದಾ ಭಗವಚ್ಚಿಂತ ನೆಯಲ್ಲಿದ್ದು ಧರ್ಮ ಜೀವನವನ್ನು ನಡಿಸಿದವನಿಗೆ ಅಪಮೃತ್ಯವಾಗಲಿ ಅಕಾಲ ಮೃತ್ಯವಾಗಲೀ ಪ್ರಾಪ್ತವಾಗಲಾರದು. ಬಾಹ್ಯಚರಣೆ ಅಷ್ಟು ಮುಖ್ಯವಲ್ಲ. ನಾವು ಅದರ ಕಡೆಗೆ ಗಮನಕೊಡಬಾರದು. ಬರಿಮಾತುಗಳಿಂದಾಗಲಿ ಶಬ್ದರಚನೆ ಯಿಂದಾಗಲಿ ಆತ್ಮಜ್ಯೋತಿ ಬೆಳಗಲಾರದು. ಸಾತ್ವಿಕಗುಣವೇ ಜ್ಞಾನವನ್ನು ಕೊಡಬಲ್ಲದು:—

ಕೇವಲ ದೀನ ಭೃತ್ಯನೆಂದೆಣಿಸಿ ಸದಾ ಶೇವೆಗೆ ಸಿದ್ಧನಾಗು ಅಪಾಯಗ ಳನ್ನು ಲೆಕ್ಕಿಸಬೇಡ ಭಕ್ತಿಯೆಂಬ ಸಸಿಹೃದಯವೆಂಬ ಭೂಮಿಯಲ್ಲಿ ಮೌನ ವಾಗಿ ಬೆಳಯಲಿ ನಿಜವಾದ ಸತ್ಯವಾದ ಭಗವತ್ಪ್ರೇಮ ಸೂಚಕವಾದ ಕಣ್ಣೀರಿ ನಿಂದ ಆಸಸಿಯನ್ನು ಪೋಷಿಸು. ಫಲಾಪೇಕ್ಷೆಯನ್ನು ಬಿಡು. ತ್ರಿಕರ್ಣಶುದ್ಧಿ ಯಿಂದ ಅನನ್ಯವಾದ ಶೇವೆಯಲ್ಲಿ ಮಾತ್ರ ಮಗ್ನನಾಗು. ಭಕ್ತನು. ತನ್ನ ದೇಹ ವನ್ನು ತನ್ನ ಇಷ್ಟದೇವತೆಯ ಆವಾಸಸ್ಥಾನವೆಂದು ತಿಳಿದು ದೇಹಪೋಷಣೆಮಾ ಡುವನು ನಿಷಿದ್ಧಪದಾರ್ಥಗಳನ್ನು ಸೇವಿಸದೆ. ಸಾತ್ವಿಕ ಮತ್ತು ಯೋಗ್ಯವಾದ ಪದಾರ್ಥಗಳನ್ನೇ ಸೇವಿಸುವನು. (ತನ್ನ ಭಗವದರ್ಪಣಕ್ಕೆ ಯೋಗ್ಯವಾದ ಪರಿಸು ದ್ಧವಾದ ವಸ್ತುಗಳನ್ನೇ ಸ್ವೀಕರಿಸುವನು) ಇಂತಹ ನಿತ್ಯಭಕ್ತಿಯಿಂದ ಭಕ್ತನು ಪ್ರತಿಕ್ಷಣದಲ್ಲಿಯೂ ಭಗವಂತನ ಸಾನಿಧ್ಯಾನುಭವದಲ್ಲಿರುತ್ತಾನೆ. ತನ್ನ ಇಷ್ಟದೇ ವತಾ ಧ್ಯಾನದಲ್ಲಿಯೇ ತಲ್ಲೀನನಾಗುತ್ತಾನೆ. ಅಂದಿಗೆ ಸರ್ವದುಃಖಗಳೂ ದೂರಾ ಗುವವು. ದೇವರ ಸಾನಿಧ್ಯವನ್ನು ನಾವು ಅನುಭವಿಸಲು ಈ ಪ್ರೇಮವೊಂದೇ ಸರಮಸಾಧನೆ:—ಪ್ರೇಮದಿಂದ ಮಾನವನು ಭಗವಂತನಲ್ಲಿ ಲೀನವಾಗುತ್ತಾನೆ.

ಉದಾಹರಣೆಃ— ಸಂತತುಕಾರಾಮಾದಿಗಳುಃ—ಅನನ್ಯವಾದ ಏಕಾಗ್ರಭಕ್ತಿಯು ಉದಯಿಸಿದೊಡನೆ ಅದು ಪ್ರಚಂಡವಾದ ಪ್ರವಾಹದಂತೆ ಹರಿದು ಅಜ್ಞಾನ ಸಂಕುಚಿತ ಬುದ್ಧಿ ಭಯ ಸಂಶಯ ಸ್ವಾರ್ಥತೆ ಮುಂತಾದ ಸರ್ವದೋಷಗಳನ್ನೂ ನಿರ್ಮೂಲಮಾಡುತ್ತದೆ. ಆಗ ಉಳಿಯುವದೇನು. ಆದರ್ಶ ಹೃದಯದಲ್ಲಿ ಕಲ್ಯಾಣ ಗುಣ ವಿಶಿಷ್ಟನಾದ ಪರಮಾತ್ಮನೊಬ್ಬನೇ ಆಗ ಸರ್ವಸಂಗಪರಿತ್ಯಾಗವಾಗುವದು ಬಹು ಶುಲಭ. ಭಗವಂತನನ್ನುಳಿದು ಎಲ್ಲವೂ ನಿಸ್ಸಾರವಾಗಿ ತೋರುವದು. ಅವನೇ ಸತ್ಯ. ಶಾಸ್ವತ ಉಳಿದುಹೆಲ್ಲವು ಅಶಾಶ್ವತ ಅನಿತ್ಯ. ಅವನೇ ತೇಜೋಮಯನಾದ ಚೈತನ್ಯಸ್ವರೂಪ ಉಳಿದುದೆಲ್ಲವೂ ನಶ್ವರವಾದ ಅಚೇತನವಸ್ತುವೂ, ಈಶ್ವರ ಪ್ರೇಮ ಸಹಾಯದಿಂದಲೇ ಏಸುಕ್ರಿಸ್ತನು ಸಮಸ್ತ ಐಹಿಕ ಐಶ್ವರ್ಯಗಳ ಮೋಹಜಾಲದಲ್ಲಿ ಕೆಡುಹಲುಬಂದ ಪ್ರತಲೋಭನಮೂರ್ತಿ ಸೈತಾನನ್ನು ನಿಗ್ರಹಿಸಲು ಸಮರ್ಥನಾದನು. ಭಕ್ತನಲ್ಲಿ ನಿಜವಾದ ಭಕ್ತಿಯುಂಟಾದರೆ ಅವನು ಎಲ್ಲವನ್ನೂ ಪ್ರೀತಿಸುತ್ತಾ ಸಪ್ರನಾಗುತ್ತಾನೆ. ಭಗವಂತನೇ ಸರ್ವವು ಎಂಬ ಜ್ಞಾನ ವುಂಟಾಗುತ್ತದೆ. ಉದಾಃ— ಅಥಣಿ ಮಹಾಶಿವಯೋಗಿಗಳು ಬಸವಾದಿಪ್ರಮಥರು. ಅಕ್ಕಮಹಾದೇವಿ ಶರಣೆಯರು. ಆಗ ಭಕ್ತನು ತನಗೆ ಪ್ರಿಯತಮವಾದ ಭಗವತ್ಸ್ವರೂಪವನ್ನೇ ಎಲ್ಲೆಲ್ಲಿಯೂ ಕಾಣುತ್ತಾನೆ. ಸರ್ವಜೀವರ ಸೇವೆಯೇ ಸರ್ವೇಶನ ಶೇವೆಯೆಂದು ತಿಳಿಯುತ್ತಾನೆ. ಉದಾಃ— ಮಹಾತ್ಮಾ ಗಾಂಧಿ ? ನಾವು ಪ್ರತಿಫಲವನ್ನು ಅಪೇಕ್ಷಿಸುವದಾದರೆ ನಮ್ಮ ಭಕ್ತಿ ನಿಜವಾದುದಲ್ಲ. ಆಗ ನಮ್ಮ ಇಷ್ಟದೈವ ನಮಗೆ ವಲಿಯಲಾರನು. ಜಗತ್ಕರ್ತನಲ್ಲಿ ಅನನ್ಯವಾದ ಭಕ್ತಿಯನ್ನಿಡಬೇಕು. ಇದರಿಂದ ನಾವು ಪಾವನರಾಗುವೆವು. ಯಾಕಂದರೆ ಪವಿತ್ರನಾದ ಭಗವಂತನನ್ನು ಕುರಿತು ಧ್ಯಾನಮಾಡುವದರಿಂದ ನಗ್ಮ ಕಲ್ಮಷಗಳು ದೂರಾಗುವವು ಭಗವಂತನ ಪಾದದಲ್ಲಿ ಶರಣು ಹೊಕ್ಕು ನಮ್ಮ ಸಕಲ ಕಷ್ಟಗಳನ್ನು ಅವನಲ್ಲಿ ಒಪ್ಪಿಸಿದರೆ ಅವನಲ್ಲಿ ಸಂಪೂರ್ಣ ಭಕ್ತಿನೆಲಿಸುವದು. ಪ್ರಪಂಚದ ಮೇಲೆ ಆಶೆ ತಪ್ಪುವದು. ಆಗ ನಮ್ಮ ಕ್ಲೇಶಗಳೆಲ್ಲವೂ ಮಾಯವಾಗುವವು. ಇದೇ ನಿಜವಾದ ಮೋಕ್ಷ ಇದೇ ಭಕ್ತಿಯೆಂಬ ವೃಕ್ಷದ ಫಲ. ಈ ಫಲವನ್ನು ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳು ಸ್ವೀಕರಿಲೇಬೇಕು, ಮುಖ್ಯವಾಗಿ ಮನುಷ್ಯ ಪ್ರಾಣಿಯು ಹೊಂದಲಿಕ್ಕೇಬೇಕು.

(೪) ನಾ ಬಂದೆ ಹರಿಭಕ್ತನಾಗಿ, ಬಾಹಾಗ ದಾಸನಾಗಿ ಒಂಬತ್ತು ಜೋಳಿಗೆಯು ತಣ್ಣೀರ ಕಣತೆಯ ಹೊತ್ತು ತಿತ್ತಿಗೆ ಸೀರಕಾಣದೆ ಲೆಕ್ಕವಿಲ್ಲದ ನಾಮವ ಸಿಕ್ಕಿದೆ. ಸುತ್ತಿ ಸುತ್ತಿ ಬಳಸಿದೆನಯ್ಯ. ಶೀಲಿಯುಗರಿಯ ಮೇಕಣ್ಣ ಪಚ್ಚೆಯ ನಾಮವ ದೃಷ್ಟಿಯು ಮಧ್ಯದಲ್ಲಿಕ್ಕಿ ಮತ್ತದರ ನಡುವೆ ನಿಶ್ಚಯು ಬಿಳಿಯ ನಾಮವನಿಕ್ಕಿ ಹೊತ್ತದಾಸಿಕೆ ಹುಸಿಯಾಯಿತು. ದಾಸೋಹನೆಂಬು ದನರಿಯುದೆ ಎನ್ನ ದೇಹವು ಹುಸಿಯಾಯಿತಯ್ಯ ನಾರಾಯಣಪ್ರಿಯ ರಾಮ ನಾಥಾ.

(೫) ಹರಿಮಾಡಿದ ಭಕ್ತಿಗೆ ಕಡೆಮೊದಲಿಲ್ಲ. ಜಗದ ಕಂಟಕಬಂದಲ್ಲಿ ದಶಾವತಾರನಾಗಿ ಪಶುಪತಿಯು ಸೇವೆಮಾಡಿದ. ಶಶಿಶೇಖರನ ಆಲಯದಲ್ಲಿ ಪತಿಭಕ್ತಿಯಾಗಿಪ್ಪ ನಾರಾಯಣನ ಜಗವೇಷಮುಂ ತಾಳಿ. ಇಂತಿವರೆಲ್ಲರು ಎನ್ನ ರಾಮನಾಥ ಗೋವಿಂದ ಎನುತಿದ್ದರು.

ಗುಪ್ತಭಕ್ತಿ ಮಾಡಬೇಕೆಂಬ ವಿಷಯವಾಗಿ ಅವನು ಹೇಳುವದೇನೆಂದರೆ–

(೬) ಶಿವಭಕ್ತಿ, ಶಿವಪೂಜೆ, ಶಿವಜ್ಞಾನ ಇಂತಿವಕೆ ಬಾಹ್ಯಾಡಂಬ ರವೇ? ಅರಿವುದೊಂದು ಅರುಹಿಸಿಕೊಂಬುದೊಂದು ಇಂತೀ ಉಭಯ ಸುಖ ಸಂಭಾಷಣವಲ್ಲದೆ ರಚ್ಚೆಯ ಪೂಜೆ ಕರ್ಕಶದನುಭಾವ ಡೊಂಬರ ಡೋಲು ಕೇಳಬಂದವರೆಲ್ಲರು ನಿಂದು ನೋಡಿ ತಮ್ಮ ತಮ್ಮ ಮಂದಿರಕ್ಕೆ ಹೋದಂತಾ ಯಿತ್ತು. ಈ ಪಥವನಾರು ಅರಿಯರು. ನಾರಾಯಣಪ್ರಿಯ ರಾಮನಾಥನಲ್ಲಿ ತನ್ನ ತಾನೆ ತಿಳಿದ ಶರಣ ಬಲ್ಲ.

ಬಾಹ್ಯಾಡಂಬರದ ಪೂಜೆ ಮತ್ತು ಕಠಿಣ ಶಬ್ದಗಳನ್ನು ಉಪಯೋಗಿ ಸುತ್ತ ಶಿವಾನುಭವದ ಬಾಹ್ಯ ಹೋರಾಟ, ಇವುಗಳನ್ನು ಕೇಳುವದು ಡೊಂಬ ರಾಟವನ್ನು ನೋಡಿ ಅಷ್ಟಕ್ಕೆ ಸಮಾಧಾನ ಹೊಂದಿ ಜನರು ತಮ್ಮ ತಮ್ಮ ಮನೆಗೆ ಹೋದಂತಾಗುತ್ತದೆಂದು ಹೇಳುತ್ತಾನೆ.

ಶಿವಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ಕೆಳಗಿನ ವಚನದಲ್ಲಿ ಹೇಳಿದ್ದಾನೆ.

(೭) ಈಶ್ವರ ಮೂರ್ತಿಯ ಕರಕಮಲಕ್ಕೆ ತಂದಲ್ಲಿ ಕಣ್ಮನ ಮೂರ್ತಿ ಧ್ಯಾನದಲ್ಲಿ ಹೆರೆ ಹಿಂಗದೆ ಅಕ್ಕರದಿಂದ ಭಾವಭ್ರಮಿಸದೆ ಚಿತ್ತ ಸಂಚರಿ ಸದೆ ಮನ ವಚನ ಕಾಯ ಭಿನ್ನಭಾವವಿಲ್ಲದೆ ಪೂಜಿಸುವ ಕೈ ತಾನಾಗಿ, ಅರಿವ ಮನವು ತಾನಾಗಿ, ಹೊತ್ತಿಪ್ಪ ಅಂಗದ ನೆಲೆಯು ತಾನಾಗಿ, ಹೆರೆ

ಹಿಂಗದೆ ಪೂಜೆಯ ಮಾಡುತಿಪ್ಪಾತನ ಅಂಗವೇ ಲಿಂಗ, ಆತನಿದ್ದುದೇ ಅವಿಮುಕ್ತ ಕ್ಷೇತ್ರ. ಇಂತಪ್ಪ ಮಹಾಮಹಿಮ ನಾರಾಯಣ ಪ್ರಿಯರಾಮನಾಥಾ.

ಮೇಲಿನ ವಚನಗಳು ಗುಪ್ತಮಂಚಣ್ಣನ ಚರಿತ್ರೆಯೊಳಗಿನ ಅನೇಕ ಸಂಗತಿಗಳನ್ನು ದೃಢಪಡಿಸುತ್ತವೆ.

ಒಂದು ಕಾಲದಲ್ಲಿ ಶಿವ, ವಿಷ್ಣುಗಳಲ್ಲಿ ಯಾರು ಶ್ರೇಷ್ಠರೆಂಬ ವಿಷಯವಾಗಿ ಕಲಹಗಳು ದಕ್ಷಿಣ ಹಿಂದುಸ್ತಾನದಲ್ಲಿದ್ದವೆಂದು ತೋರುತ್ತದೆ. ಇದು ಅನೇಕ ಧಾರ್ಮಿಕ ಪುರುಷರ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಆದರೆ ಬಸವೇಶ್ವರನು ಇಂಥ ಕಲಹಗಳನ್ನು ಪುರಸ್ಕರಿಸುತ್ತಿದ್ದಿಲ್ಲವೆಂಬುದನ್ನು ನಾವು ಗುಪ್ತಮಂಚಣ್ಣನ ಚರಿತ್ರೆಯಿಂದ ತಿಳಿಯಬಹುದು. ಬಾಹ್ಯದಲ್ಲಿ ಯಾವ ವೇಷವಿದ್ದರೂ ಶಿವಾನುಭವದಂತೆ ನಡೆಯಬಹುದೆಂದು ಇದರಿಂದ ಗೊತ್ತಾಗುತ್ತದೆ. ಶಿವಶರಣರ ಹೆಸರುಗಳಲ್ಲಿ ಮತ್ತು ಅವರ ಮುದ್ರಿಕೆಗಳಲ್ಲಿ ರಾಮ, ರಾಮನಾಥ, ರಾಮೇಶ್ವರ, ರಾಘವ ಎಂಬ ಶಬ್ದಗಳು ಹೇರಳವಾಗಿ ಬರುತ್ತವೆ. ಅಲ್ಲದೆ ಷಟ್‌ಸ್ಥಲ ಸಿದ್ಧಾಂತದಲ್ಲಿ ಬ್ರಹ್ಮ, ವಿಷ್ಣು, ರುದ್ರ, ಇವರಿಗೆ ಕೆಲವು ನಿಶ್ಚಿತ ಸ್ಥಾನಗಳಿರುತ್ತವೆ. ಶಿವಶರಣರು ದೇವರೊಬ್ಬನೇ ಇದ್ದಾನೆ ಎಂದು ಪ್ರತಿಪಾದಿಸುವದರಿಂದ ತ್ರಿಮೂರ್ತಿಗಳ ಇಂಥ ಪರಸ್ಪರ ಕಲಹಗಳಿಗೆ ಸ್ಥಾನವು ಇರಲಾರದು.

ಗುಪ್ತಮಂಚಣ್ಣನಿಗೆ, ಮಂಚಣ್ಣ, ಮಂಚರಸ, ಧೂಪದ ಮಂಚಣ್ಣ ಎಂಬ ಹೆಸರುಗಳೂ ಕೂಡ ಇರುತ್ತವೆ.

# ೩. ಮೈದುನ ರಾಮಯ್ಯ.

ಆಂಧ್ರದೇಶದಲ್ಲಿ ಭೀಮಾವತೀ ಎಂಬ ಗ್ರಾಮವಿದ್ದು ಅಲ್ಲಿ ಸೋಮನಾಥನೆಂಬ ಶೈವ ಬ್ರಾಹ್ಮಣನು ವಾಸಮಾಡುತ್ತಿದ್ದನು. ಅವನ ಹೆಂಡತಿಯು ಹೆಸರು ಮಹಾದೇವಿ. ಉಭಯ ದಂಪತಿಗಳು ಬಹಳ ಬಡವರು. ಆದ್ದರಿಂದ ಅವರು ಕಷ್ಟದಿಂದ ತಮ್ಮ ಜೀವನವನ್ನು ಸಾಗಿಸುತ್ತ ಬಂದರು. ಆದರೂ ಅವರು ಶಂಕರನ ಪ್ರೇಮಿಗಳು. ಶಂಕರನ ಭಜನೆಯಲ್ಲಿಯೇ ಅವರು ಸಂತೋಷದಿಂದ ಕಾಲಕಳೆಯುವರು. ಹೀಗಿರುವಲ್ಲಿ ಮುಂದೆ ಅವರಿಗೆ ಒಬ್ಬ ಮಗನು ಜನಿಸಿದನು. ಅವರು ಆತನಿಗೆ 'ರಾಮಯ್ಯ' ಎಂಬ ಹೆಸರನ್ನಿಟ್ಟರು. ಆದರೆ ಸೋಮನಾಥನು ಮುಂದೆ ಸ್ವಲ್ಪ ದಿವಸಗಳಲ್ಲಿ ಮರಣಹೊಂದಿದನು. ಇದರಿಂದ ಮಹಾದೇವಿಯ ಮೇಲೆ ತನ್ನ ಮಗನನ್ನು ಸಲುಹುವ ಭಾರವು ಬೀಳಲು ಅವಳು ತನ್ನ ಬಡತನದಲ್ಲಿ ತನ್ನ ಸಂಸಾರವನ್ನು ಕಷ್ಟದಿಂದ ಸಾಗಿಸುತ್ತ ಬಂದಳು.

ಮಗನು ಸ್ವಲ್ಪ ದೊಡ್ಡವನಾದ ಬಳಿಕ ಮಹಾದೇವಿಯು ಅವನಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಬಯಸಿ ಅವಳು ಅವನನ್ನು ಒಬ್ಬ ಶೈವ ಬ್ರಾಹ್ಮಣನ ಕಡೆಗೆ ಇಟ್ಟಳು. ಈ ಬ್ರಾಹ್ಮಣನು ಇತರ ಬಾಲಕರೊಡನೆ ಇವನಿಗೂ ಕಲಿಸಹತ್ತಿದನು. ರಾಮಯ್ಯನು ಬಹು ಕುಶಾಗ್ರಬುದ್ಧಿಯುವನು. ಅವನ ಗುರುವು ಹೇಳಿದ್ದನ್ನು ತಿಳಿದುಕೊಂಡು ತನ್ನ ಅಭ್ಯಾಸದಲ್ಲಿ ಎಲ್ಲರಿಗಿಂತಲೂ ಮಿಗಿಲಾದವನೆಂದು ಎಣಿಸಿಕೊಂಡನು.

ಹೀಗಿರುವಲ್ಲಿ ಓದುವ ಮಕ್ಕಳೆಲ್ಲರೂ ದೀಪಾವಳಿಯ ಹಬ್ಬದ ಪೂರ್ವದಲ್ಲಿ ಒಂದು ದಿನ ಒಂದು ಗಿಡದಡಿಯಲ್ಲಿ ನೆರೆದು ಅವರು ತಮ್ಮ ತಮ್ಮೊಳಗೆ ಮಾತನಾಡುತ್ತಿರುವಾಗ— ನಾವು ಹಬ್ಬಕ್ಕೆ ನಮ್ಮ ಅಕ್ಕಭಾವಂದಿರನ್ನು ಕರೆತರುವೆವು. ಅವರೊಡನೆ ನಾವು ನಮ್ಮ ಹಬ್ಬವನ್ನು ಮಾಡುವೆವು ಎಂದು ಹೇಳಿಕೊಳ್ಳಹತ್ತಿದರು. ಅದನ್ನು ರಾಮಯ್ಯನು ಕೇಳಿ— ನಾನೂ ನನ್ನಕ್ಕಭಾವರನ್ನು ಕರೆತರುವೆನು ಎಂದೆನಲು ಆ ಮಕ್ಕಳೆಲ್ಲರೂ ಅವನಿಗೆ— ನೀನೊಬ್ಬ ಮುಂಡೆಯ ಮಗ. ನಿನಗೆಲ್ಲಿ ಅಕ್ಕಭಾವಂದಿರಿದ್ದಾರೆ? ಅವರನ್ನೆಲ್ಲಿಂದ ತರುವೆ? ನೀನು ದರಿದ್ರ. ನೀನೇನು ಹಬ್ಬ ಮಾಡುವಿ ? ಎಂದು ಅವನಿಗೆ ಚುಚ್ಚಿ ನುಡಿದು ಹಾಸ್ಯ ಮಾಡಿದರು.

ಈ ನುಡಿಗಳು ರಾಮಯ್ಯನ ಮನಸ್ಸಿಗೆ ಬಹಳ ತಾಕಿದವು. ಅವನು ಅಳುತ್ತ ತನ್ನ ತಾಯಿಯ ಬಳಿಗೆ ಬಂದು— ನನ್ನ ಅಕ್ಕ ಭಾವಂದಿರು ಎಲ್ಲಿದ್ದಾರೆ

ಎಂದು ಕೇಳಿದನು. ಮಹಾದೇವಿಯಾದರೂ ಶಿವನಲ್ಲಿ ಅತ್ಯಂತ ನಿಷ್ಠೆಯುಳ್ಳವಳು. ಅವಳು ತನ್ನ ಮಗನ ಇಂಗಿತವನ್ನು ತಿಳಿದುಕೊಂಡು—ನಿನಗೆ ಅಕ್ಕ ಭಾವಂದಿರು ಇದ್ದಾರೆ ಎಂದು ಹೇಳಿದಳು. ಅವರ ಹೆಸರು ಹೇಳು ಎಂದು ಬಾಲಕನು ಅಳುತ್ತಿರಲು, ತಾಯಿಯು ಅವನಿಗೆ—ನಿನ್ನ ಗೌರಿ, ನಿನ್ನ ಭಾವ ಚನ್ನಮಲ್ಲಿಕಾರ್ಜುನ, ಅವರು ಇರುವ ಊರು ಶ್ರೀಶೈಲ ಎಂದು ಹೇಳಲು ಬಾಲಕನು ಅವರನ್ನು ಹಬ್ಬಕ್ಕೆ ಕರೆತರುವೆನೆಂದು ಶ್ರೀಶೈಲಕ್ಕೆ ಹೊರಟನು. ಅವನು ಅಲ್ಲಿಗೆ ಹೋಗಿ ಗೌರಕ್ಕಾ, ಚನ್ನಮಲ್ಲಯ್ಯಾ, ಎಂದು ಕೂಗಿ ಕರೆಯಹತ್ತಿದನು. ಆದರೆ ಯಾರೂ ಮಾತಾಡದಿರಲು ಬಾಲಕನು—ನಾನೆಂಥ ಪಾಪಿಯು, ಎಂದು ಹಲುಬುತ್ತ ದುಃಖಿಸುತ್ತ ಅರಣ್ಯವನ್ನು ಸುತ್ತುತ್ತ ತಿರುಗಹತ್ತಿದನು. ಅವನು ಅಳಿಗಿಳಿಗಳನ್ನೂ ತರುಗಿರಿಗಳನ್ನೂ ಖಗ ಮೃಗಗಳನ್ನೂ ಕೇಳುತ್ತ ಸಾಗಿದನು. ಅವನು ಕಲ್ಲುಮುಳ್ಳುಗಳನ್ನು ತುಳಿಯುತ್ತ ಹೋದನು ಕಾಲುಗಳಿಂದ ನೆತ್ತರು ಬಸಿಯುತ್ತಿದ್ದರೂ ಲಕ್ಷಿಸಲಿಲ್ಲ. 'ಹಬ್ಬ ಹತ್ತಿರವಾಯಿತ್ತು. ನಮ್ಮಕ್ಕ ಭಾವನನ್ನು ಕಾಣಿರೇ' ಎಂದು ತಾನು ಕಂಡ ಪಕ್ಷಿಗಳನ್ನೂ ಮರಗಳನ್ನೂ ಸಿಂಹ ಶಾರ್ದೂಲಗಳನ್ನೂ ಕೇಳುವನು. ಹಸಿವೆ ಬಳಲಿಕೆಗಳಿಂದ ಎಷ್ಟು ಕಷ್ಟಪಟ್ಟರೂ ತನ್ನ ಅಕ್ಕ ಭಾವಗಳ ಸ್ಮರಣೆಯೊಂದೇ ಅವನಿಗಾಯಿತು. ಹೀರುವಲ್ಲಿ ಅವನು ಬಸವಳಿದು ಒಂದು ಕೋಡುಗಲ್ಲಿನ ಕೆಳಗೆ ಬಂದು ಬಿದ್ದನು. ಅವನು ನಿಶ್ಚೇಷ್ಟಿತನಾಗಿರಲು ಶಿವನಲ್ಲಿ ಅವನಿಗೋಸ್ಕರ ಕರುಣೆಯುಂಟಾಗಿ ಅವನು ಗಿರಿಜೆ ಸಹಿತ ಪ್ರತ್ಯಕ್ಷನಾಗಿ ರಾಮಯ್ಯನ ಕೈ ಹಿಡಿದು, ಅವನನ್ನು ಸಂತವಿಸಿ, ಅವನಿಗೆ ಅಂದದ್ದು—ನಾವೇ ನಿನ್ನ ಅಕ್ಕ ಭಾವಂದಿರು. ನಮ್ಮನ್ನು ನೀನು ಕಂಡೆ. ಇನ್ನು ಮೇಲೆ ನೀನು ಮನೆಗೆ ತಿರುಗಿಹೋಗು ಎಂದು ಹೇಳಲು ಬಾಲಕನು ಅವರಿಗೆ—ನೀವು ನಮ್ಮ ಮನೆಗೆ ಬಂದಲ್ಲದೆ ಹಬ್ಬವನ್ನು ಮಾಡೆವು. ನೀವು ನನ್ನೊಡನೆ ಊರಿಗೆ ಬರಬೇಕು ಎಂದು ನುಡಿದನು. ಆಗ ಶಿವನೂ ಅಗಜೆಯೂ ಬಾಲಕನ ಮುಗ್ಧಭಕ್ತಿಗೆ ಮೆಚ್ಚಿದವರಾಗಿ ಅವನೊಡನೆ ಭೀಮಾವತೀ ಗ್ರಾಮಕ್ಕೆ ಬಂದು ತಾಯಿಮಗನೊಡನೆ ಹಬ್ಬವನ್ನು ತೀರಿಸಿದರು. ಆಗ ಶಿವನು ತನಗೆ ಮೈದುನನಾಗಿ ಆಚರಿಸಿದ ರಾಮಯ್ಯನ ಭಕ್ತಿಗೆ ಮೆಚ್ಚಿ ಅವನಿಗೆ ವೀರಶೈವೋಪದೇಶವನ್ನು ಮಾಡಿ ಇಷ್ಟಲಿಂಗದ ಮೂಲಕ ನಾನು ನಿನ್ನಲ್ಲಿ ಸದಾ ವಾಸಿಸುತ್ತೇನೆಂದು ಅಭಯವನ್ನಿತ್ತು ಅಲ್ಲಿಯೇ ಅಂತರ್ಧಾನನಾದನು.

ಅಂದಿನಿಂದ ರಾಮಯ್ಯನು ಮೈದುನ ರಾಮಯ್ಯನೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾದನು. ಅವನು ವೀರಶೈವೋಪದೇಶವನ್ನು ಹೊಂದಿ

ಶಿವಾನುಭವದ ಆಚರಣೆಯಂತೆ ನಡೆಯುತ್ತ ಒಬ್ಬ ಶ್ರೇಷ್ಠ ಶಿವಶರಣನೆಂದೆನಿಸಿಕೊಂಡನು. ವೈದುನ ರಾಮಯ್ಯನು ವಚನಕಾರನಿದ್ದಾನೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. 'ಮಹಾಲಿಂಗ ಚನ್ನರಾಮ' ಎಂಬುದೇ ಅವನ ಮುದ್ರಿಕೆಯು.

## ವಚನಗಳು.

(೧) ಮಳಲಲ್ಲಿರಸಲುಂಟೇ ? ನೆಳಲಿಗೆ ತಡೆಯುಂಟೇ ? ರಣದಲ್ಲಿ ತಪ ಉಂಟೇ ? ನೇಹ ತಪ್ಪಿದಲ್ಲಿ ಮೋಹವನರಸಲುಂಟೇ ? ಮಹಾಲಿಂಗ ಚನ್ನರಾಮನ ಮನ ಮುರಿದ ಬಳಿಕ ಕಂಗಳಿಗೆ ವಿಷವಯ್ಯ.

(೨) ಹೊಲೆಯರಲ್ಲುಂಡೆ. ನೀ ಕುಲವಂತನೇ ? ತರುಳನ ಕೊಲಿಸಿದೆ. ನೀ ಕರುಣವಂತನೇ ? ತಿರಿದುಂಬೆ. ನೀ ಸಿರಿವಂತನೇ ? ಪಂಚವರ್ಣದ ಮುಖ. ನೀ ಚೆಲುವನೇ? ಕಂಚಿಲ್ಲದೆ ಹಂಚಿನಲ್ಲುಂಬೆ. ಮರುಳ್ಗಳನೊಡಗೂಡಿ ಬೂದಿಯಂ ಪೂಸಿದೆ. ನಮ್ಮಕ್ಕನೊಡನಾಡಿ ನೀ ಸೊಕ್ಕಿದೆಯಾ ಮಹಾಲಿಂಗ ಚನ್ನರಾಮಾ?

(೩) ಗಣಂಗಳ ಬರವ ಕಂಡು ಕೈಮುಗಿದು ಅಂಜಲೇಬೇಕು. ಶರಣೆನ್ನಲೊಲ್ಲದೀ ಮನವು. ಆಳ್ದನೆಂದು ನಂಬಿ. ನಂಬಲೊಲ್ಲದಾಗಿ ಮಹಾಲಿಂಗ ಚನ್ನರಾಮನೆನ್ನ ಕೆಡೆ ನೋಡಿ ನಗುತ್ತಲೈದಾನೆ.

(೪) ಎನಗೆ ನೀ ಕಟ್ಟುವರೆ ಕೇಳು ಎಂಬುವಲ್ಲಿ ಕೇಳು ಭಂಡಾರಿ ಬಸವಣ್ಣನೇ, ಎನಗೆ ನೀ ಕಟ್ಟುವರೆ ಕೇಳು ನಂಬಿಯಣ್ಣನೇ, ಎನಗೆ ನೀ ಕಟ್ಟುವರೆ ಎಂಬಲ್ಲಿ ಕೇಳು ಅಜಗಣ್ಣನೇ, ಆನೆ ಮುರಿದಲ್ಲಿ ಸುಂಡಾಲವೇ? ಆನಿಲ್ಲದಿರ್ದಡೆ ನೀನಿಲ್ಲ. ನೀನಿಲ್ಲದಿರ್ದೊಡೆ ಆನಿಲ್ಲ. ಆನು ನೀನೆಂಬುದಂತಿರಲಿ. ಹಿಡಿಯೋ, ಮುಡಿಯೋ, ನೀ ಮಾಡಿದಂತಿಪ್ಪೆನು. ಸಾತ್ವಿಕ ಸಜ್ಜನ ಸದ್ಗುರುವಿನಿಂದೆ ಬದುಕಿದೆನಾಗಿ ನಿಮಗಾನಂಜೆ ಮಹಾಲಿಂಗ ಚನ್ನರಾಮಾ.

ಈ ಕಡೆಯ ವಚನದ ಮೇಲಿಂದ ವೈದುನ ರಾಮಯ್ಯನು ಬಸವೇಶ್ವರನ ತರುವಾಯ ಪ್ರಸಿದ್ಧಿಗೆ ಬಂದನೆಂಬುದು ಸ್ಪಷ್ಟವದೆ. ಇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವನು ಶಿವಶರಣರಲ್ಲಿ ಪುರಾತನ ಕಾಲದವನು. ಇವನ ಹೆಸರು ಶಿವಶರಣರ ಹೆಸರುಗಳ ಯಾವ ಮಾಲಿಕೆಯಲ್ಲಾದರೂ ಬರುವದುಂಟು. ಇಷ್ಟು ಈತನು ಪ್ರಸಿದ್ಧನಾಗಿದ್ದಾನೆ. ಆರಂಭದಲ್ಲಿ ಇವನು ಮುಗ್ಧಭಕ್ತಿಯುಳ್ಳವನಾಗಿ ಗಿರಿಜೆ ಮತ್ತು ಶಿವ ಇವರು ತನ್ನ ಅಕ್ಕ ಭಾವಂದಿರು ಎಂದು

ತಿಳಿದು ಆ ಬಗೆಯ ಪ್ರೇಮದಿಂದ ವರ್ಣಿಸಿ ಪರಮಾತ್ಮನನ್ನು ಒಲಿಸಿದ್ದಾನೆ. ಇದು ಅವನ ವೈಶಿಷ್ಟ್ಯವು. ಆರಂಭದಲ್ಲಿ ಚಿಕ್ಕಮಕ್ಕಳಂತೆ ಮುಗ್ಧಭಕ್ತಿಯುಳ್ಳವನಾದರೂ ಮುಂದೆ ಅವನು ಒಬ್ಬ ಶ್ರಿಷ್ಠ ಶಿವಾನುಭವಿಯಾಗಿ ಆಚರಿಸಿದನೆಂಬುದು ನಾವು ಮೇಲೆ ಉಲ್ಲೇಖಿಸಿದ ವಚನಗಳ ಮೇಲಿಂದ ಕಂಡುಬರುತ್ತದೆ. ರಾಮಯ್ಯನು ಆಂಧ್ರ ದೇಶದವನು. ಅವನು ಬಹುಶಃ ಶ್ರೀಶೈಲಕ್ಕೆ ಸಮೀಪವರ್ತಿಯಾದ ಕೆಲವೊಂದು ಗ್ರಾಮದಲ್ಲಿದ್ದನೆಂದು ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಅನೇಕ ಆಂಧ್ರರು ವೀರಶೈವ ಧರ್ಮವನ್ನು ಸ್ವೀಕರಿಸಿ ಕನ್ನಡ ಭಾಷೆಯಲ್ಲಿ ವಚನಗಳನ್ನು ರಚಿಸಿದ್ದಾರೆ. ಅಂಥವರಲ್ಲಿ ಮೈದುನ ರಾಮಯ್ಯನು ಒಬ್ಬನು ಇದ್ದಾನೆ.

## ೪. ಏಕಾಂತದ ರಾಮಯ್ಯ.

ನಿಜಾಮನ ರಾಜ್ಯದಲ್ಲಿ ಕಲಬುರ್ಗಿ ಜಿಲ್ಲೆಯಲ್ಲಿ ಆಲ್ದಿ ಎಂಬ ಗ್ರಾಮವಿದೆ. ಅದು ಈಗ ಒಂದು ತಾಲೂಕಿನ ಸ್ಥಳವಾಗಿರುತ್ತದೆ. ಅದು ಸೊಲ್ಲಾಪುರ ಪಟ್ಟಣದ ಪೂರ್ವಕ್ಕೆ ೨೨ ಮೈಲುಗಳ ಮೇಲೆ ಇರುವ ಅಕ್ಕಲಕೋಟೆಯಿಂದ ೩೩ ಮೈಲು ದೂರವಿರುತ್ತದೆ. ಈ ಗ್ರಾಮದ ಪೂರ್ವದ ಹೆಸರು 'ಆಲಂದೆ' ಎಂಬುದಾಗಿತ್ತು.

ಈ ಆಲಂದೆ ಗ್ರಾಮದಲ್ಲಿ ವತ್ಸಗೋತ್ರದ ' ಪುರುಷೋತ್ತಮ ಭಟ್ಟ ' ಎಂಬ ಹೆಸರಿನ ಬಾಹ್ಮಣನು ಅಲ್ಲಿಯ ಬ್ರಹ್ಮಪುರಿ ಅಂದರೆ ಬ್ರಾಹ್ಮಣರ ಕೇರಿಯಲ್ಲಿ ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಸೀತಾದೇವಿಯು. ಅವರಿಗೆ ಮಕ್ಕಳಿದ್ದಿಲ್ಲ. ಅವರು ತಮ್ಮ ಗ್ರಾಮದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಸೋಮನಾಥ ದೇವರಿಗೆ ಉಭಯ ದಂಪತಿಗಳು ತಮಗೆ ಒಬ್ಬ ಮಗನಾಗಬೇಕೆಂದು ಬೇಡಿಕೊಂಡು ಆ ದೇವರನ್ನು ಯಾವಾಗಲೂ ಪೂಜಿಸುವರು. ಹೀಗಿರಲು ಅವರಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಅವರು 'ರಾಮ' ಎಂಬ ಹೆಸರನ್ನಿಟ್ಟರು.

ರಾಮನು ದೊಡ್ಡವನಾದ ಹಾಗೆ ಅವನಲ್ಲಿ ಶಿವಭಕ್ತಿಯು ಹೆಚ್ಚುತ್ತಲೇ ಬಂದಿತು. ಅವನು ನುಡಿದ ನುಡಿಯಲ್ಲಿ ಎಂದೂ ತಪ್ಪನು. ಹಿಡಿದ ಭಾಷೆಯನ್ನು ಬಿಡನು. ಅತ್ಯಂತ ನಿಸ್ಪೃಹವೃತ್ತಿಯುಳ್ಳವನು. ಶಿವಜ್ಞಾನಿಯಾಗಿ ಶಿವಯೋಗದಲ್ಲಿ ಯಾವಾಗಲೂ ನಿರತನು. ಆವನು ತನ್ನ ಶಿವಯೋಗಾಚರಣೆಯನ್ನು ಪಾಲಿಸುತ್ತ ಏಕಾಂತದಲ್ಲಿ ಧ್ಯಾನಮಗ್ನನಾಗಿ ಕಾಲಕಳೆಯುವನು. ಅವನ ಈ ಅಚಲವಾದ ಗುಪ್ತಭಕ್ತಿಯನ್ನು ಜನರು ನೋಡಿ ಅವನನ್ನು 'ಏಕಾಂತದ ರಾಮಯ್ಯ'ನೆಂಬ ಹೆಸರಿನಿಂದ ಕರೆಯಹತ್ತಿದರು. ಈ ಹೆಸರಿನಿಂದಲೇ ಅವನು ನಾಡಿನಲ್ಲಿ ಪ್ರಸಿದ್ಧನಾದನು.

ಆಲಂದೆ ಗ್ರಾಮದಲ್ಲಿ ಏಕಾಂತದ ರಾಮಯ್ಯನು ಶಿವಯೋಗಾಚರಣೆಯಲ್ಲಿ ಕಾಲಕಳೆಯುತ್ತಿರಲು ಅವನ ಮನಸ್ಸಿನಲ್ಲಿ ಶಿವಶರಣರು ತಮ್ಮ ಮಹಾತ್ಮೆಯನ್ನು ತೋರಿಸಿದ ಸ್ಥಳಗಳನ್ನು ನೋಡಬೇಕೆಂಬ ಕುತೂಹಲವು ಉಂಟಾಯಿತು. ಆಗ ಅವನು ಮೊದಲು ತನ್ನ ಗ್ರಾಮದಿಂದ ೩೬ ಮೈಲು ದೂರವಿರುವ ಕಲ್ಯಾಣ ಪಟ್ಟಣಕ್ಕೆ ಹೋಗಿ ಅದಕ್ಕೆ ಸಮೀಪವಾಗಿದ್ದ 'ಶಿವಪುರ' ಎಂಬ ಗ್ರಾಮಕ್ಕೆ ಬಂದನು. ಅದು ಕಲ್ಯಾಣಕ್ಕೆ ಹೋಗಿಬರುವ ಶಿವಶರ

ಣರ ಮುಖ್ಯ ಆವಾಸಸ್ಥಾನವಾಗಿತ್ತು. ಅಲ್ಲಿ ಅವನು ಶಿವಾನುಭವ ಗೋಷ್ಠಿಯಲ್ಲಿ ಕೆಲಕಾಲವಿದ್ದು ಅಲ್ಲಿಂದ ದಕ್ಷಿಣ ದೇಶಕ್ಕೆ ಹೊರಟನು. ಅಲ್ಲಲ್ಲಿಯ ಶಿವಶರಣರನ್ನು ಕಾಣುತ್ತ 'ಪುಲಿಗೆರೆ' ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಅದು ಸೋಮಯ್ಯನ ಸ್ಥಾನವು. ಅಲ್ಲಿ ಅವನಿಂದುಂಟಾದ 'ಹುಲಿಗೆರೆಯ ಸೋಮನಾಥ'ನನ್ನು ಸಂದರ್ಶಿಸಿ ಅಲ್ಲಿಂದ ಹೊರಟು ಅನೇಕ ಶಿವಶರಣರು ವಾಸಮಾಡುತ್ತಿದ್ದ ಬನವಾಸಿ ಪ್ರಾಂತದ ಕಡೆಗೆ ಹೊರಟನು. ಈ ನಾಡಿನಲ್ಲಿ ಬಳ್ಳಿಗಾವಿ, ಅಲ್ಲದೆ ಬನವಾಸಿಯ ಈಶಾನ್ಯದಿಕ್ಕಿಗೆ ೨೪ ಮೈಲುಗಳ ಮೇಲೆ ಇರುವ 'ರೇವಣಸಿದ್ಧಗಿರಿ' ಮುತ್ತಿಗಿ, ಹಿರೇಜಂಬೂರು ಇವೇ ಮೊದಲಾದ ಶಿವಶರಣರ ಕ್ಷೇತ್ರಗಳನ್ನು ಸಂದರ್ಶಿಸಲು ಹೊರಟು ಮಾರ್ಗದಲ್ಲಿ ಪುಲಿಗೆರೆಯಿಂದ ದಕ್ಷಿಣಕ್ಕೆ ೪೦ ಮೈಲುಗಳ ಮೇಲಿರುವ ಅಬ್ಬಲೂರು ಎಂಬ ಗ್ರಾಮವಿದ್ದು ಅಲ್ಲಿಗೆ ಬಂದನು. ಈ ಗ್ರಾಮವು ಬನವಾಸಿ ಪಟ್ಟಣದ ಪೂರ್ವದಿಕ್ಕಿಗೆ ೨೪ ಮೈಲು ದೂರವಿರುತ್ತದೆ.

ಅವನು ಈ ಅಬ್ಬಲೂರು ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ಎಲ್ಲೆಲ್ಲಿಯೂ ಜೈನರ ಸಂಚಾರವೂ ಅವರ ಬಸದಿಗಳೂ ಕಂಡುಬಂದವು. ಅಲ್ಲಿ ಶಿವಭಕ್ತರಾರೂ ಅವನಿಗೆ ಕಾಣಬರಲಿಲ್ಲ. ಅವನು ಆ ದಿನ ಗ್ರಾಮದಲ್ಲಿ ಬಿಡಾರಬಿಡಬೇಕೆಂದು ಯೋಚಿಸಿ ಶಿವಾಲಯವನ್ನು ಹುಡುಕುತ್ತ ಹೊರಟನು. ಹೀಗೆ ಹೋಗುವಲ್ಲಿ ಮಾರ್ಗದಲ್ಲಿ ಒಂದು ಶಿವಾಲಯವು ಅವನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿ ಅವನು ಅದರ ಪ್ರವೇಶ ಮಾಡಿದನು.

ಅವನು ಒಳಗೆ ಪ್ರವೇಶಿಸಲಾಗಿ ಅದು 'ಬ್ರಹ್ಮೇಶ್ವರ ದೇವಾಲಯ' ವಿರುತ್ತದೆಂದು ಅವನಿಗೆ ತಿಳಿದುಬಂದಿತು. ಗರ್ಭಗುಡಿಯೊಳಗೆ ಹೋಗಿ ನೋಡುತ್ತಾನೆಯೇ ಒಳಗಿದ್ದ ಶಿವಲಿಂಗಕ್ಕೆ ಅರ್ಚನೆ ಪೂಜಾದಿ ಕಾರ್ಯಯಾವವೂ ನಡೆದಂತೆ ತೋರಲಿಲ್ಲ. ದೇವಾಲಯದಲ್ಲಿ ಎಲ್ಲೆಲ್ಲಿಯೂ ಕಸವೂ ದೂಳೂ ತುಂಬಿಹೋಗಿದ್ದವು. ರಾಮಯ್ಯನು ಅದನ್ನು ನೋಡಿ ಖಿನ್ನಮನಸ್ಕನಾಗಿ ದೇವಾಲಯವನ್ನೆಲ್ಲ ಶುಚಿಮಾಡಿ ಸಿಟ್ಟುಸಿರುಬಿಡುತ್ತ ಉಮ್ಮಳಿಸುತ್ತ ಲಿಂಗದ ಪೂಜೆ ಮಾಡಬೇಕೆಂದು ಪುಷ್ಪಗಳನ್ನು ತರಲು ಹೊರಗೆಹೊರಟನು. ಅಷ್ಟರಲ್ಲಿ ಶಂಕರಗೌಡನೆಂಬ ಗ್ರಾಮದ ಜೈನ ಅಧಿಪತಿಯು ಕೆರಹುಗಾಲಿನಿಂದ ಗಳಗಳನೆ ಒಳಗೆ ಬಂದು ಗರ್ಭಗುಡಿಯಲ್ಲಿ ಬಂದು ನಿಂತನು. ಆಗ ಏಕಾಂತದ ರಾಮಯ್ಯನು ಕ್ರೋಧಾವಿಷ್ಟನಾಗಿ ಅವನಿಗೆ— ಶಿವದ್ರೋಹಿಯೇ, ಹೀಗೆ ನೀನು ಕೆರಹುಗಾಲಿನಿಂದ ಶಿವಾಲಯದ ಒಳಗೆ ಪ್ರವೇಶಿಸಬಹುದೇ ? ಎಂದು ನುಡಿ

ಯಲು, ಜೈನನು— ಗೊರವನೇ, ಇಲ್ಲಿಲ್ಲಿಯ ನಿನ್ನ ಶಿವನು? ಅವನಾರು? ಬೊಗಳದಿರು. ಜಿನನೇ ದೈವವು. ಶಿವನೆಂಬುದು ಸುಳ್ಳು. ಆ ನಿನ್ನ ಶಿವನು ಯಾರಿಗೆ ಏನು ಕೊಟ್ಟಿದ್ದಾನೆ? ಎಂದು ನುಡಿದನು. ಅದಕ್ಕೆ ಏಕಾಂತದ ರಾಮಯ್ಯನು— ಎಲೋ ಕುನ್ನಿಯೇ, ಪರಿವಳಿಗೆಯಲ್ಲಿ ಶಿವನು ವೈಜವ್ವೆಗೋಸ್ಕರ ಜಿನನನ್ನು ಒಡೆದು ಲಿಂಗವನ್ನಾಗಿ ಮಾಡಿ ವೈಜನಾಥನಾದನೆಂಬುದು ನಿನಗೆ ಗೊತ್ತಿಲ್ಲವೇ? ಹುಲಿಗೆರೆಯಲ್ಲಿ ಸೋಮಯ್ಯನಿಗೋಸ್ಕರ ಶಿವನು ಜಿನನಲ್ಲಿ ಮಾಡಿ ಸೋಮನಾಥನಾದನೆಂಬುದನ್ನು ನೀನು ಅರಿಯೆಯಾ ? ಪೊಟ್ಟಲಕೆರೆಯಲ್ಲಿ ದೇವರ ದಾಸಿಮಯ್ಯನಿಗೆ ಶಿವನು ಲಿಂಗವಾಗಿ ತೋರಿ ಅವನಿಗೆ ತವನಿಧಿಯನ್ನು ಕೊಟ್ಟುದನ್ನು ಅರಿಯೆಯಾ? ಎಂದು ಕೇಳಿದನು. ಅದಕ್ಕೆ ಆ ಜೈನನು— ಆ ಹಿಂದಿನವರ ಕಥೆಗಳನ್ನು ನನಗೆ ಹೇಳಬೇಡ. ಈಗ ನೀನು ನಿನ್ನ ತಲೆಯನ್ನು ಕತ್ತರಿಸಿಕೊಂಡು ಅದನ್ನು ಮರಳಿ ಪಡೆದರೆ ನಿನ್ನ ಶಿವನು ನಿಜವೆಂದು ನಾನು ನಂಬುತ್ತೇನೆ. ಹಾಗೆ ಮಾಡಿದಲ್ಲಿ ನಮ್ಮ ಗ್ರಾಮದ ಬಸದಿಯಲ್ಲಿಯ ಜಿನಮೂರ್ತಿಯನ್ನು ತೆಗೆದುಹಾಕಿ ಅದರ ಸ್ಥಳದಲ್ಲಿ ಲಿಂಗವನ್ನು ನಾವು ಸ್ಥಾಪಿಸುವೆವು ಎಂದು ಹೇಳಿದನು. ಅದಕ್ಕೆ ರಾಮಯ್ಯನು—ಇದು ನಿಜವೇ? ಹಾಗಾದರೆ ನನ್ನ ಕತ್ತನ್ನು ಕತ್ತರಿಸಿಕೊಳ್ಳಲು ಒಪ್ಪುತ್ತೇನೆ. ಆದರೆ ಜಿನಮೂರ್ತಿಯನ್ನು ತಗೆದು ಅದರ ಸ್ಥಳದಲ್ಲಿ ಲಿಂಗವನ್ನು ಪ್ರತಿಷ್ಠಿಸುವೆವೆಂದು ನೀನು ಒಂದು ಭಾಷಾಪತ್ರವನ್ನು ನನಗೆ ಬರೆದುಕೊಡಬೇಕು. ಇದಕ್ಕೆ ಒಪ್ಪುವಿರೋ ಎಂದು ಕೇಳಲು, ಅಷ್ಟರಲ್ಲಿ ಅಲ್ಲಿ ನೆರೆದಿದ್ದ ಜೈನರು ಅದಕ್ಕೆ ಒಪ್ಪಿ ಆ ರೀತಿಯಾಗಿ ಅವರು ಏಕಾಂತದ ರಾಮಯ್ಯನಿಗೆ ಒಂದು ಓಲೆಯನ್ನು ಬರೆದುಕೊಟ್ಟರು.

ಏಕಾಂತದ ರಾಮಯ್ಯನು ತನ್ನ ಕತ್ತನ್ನು ಕತ್ತರಿಸಿ ಪುನಃ ಅದನ್ನು ಪಡೆಯುವನೆಂಬ ಸುದ್ದಿಯು ಸುತ್ತಲಿನ ಗ್ರಾಮಗಳಲ್ಲಿ ಹಬ್ಬಿತು. ಆಗ ಈ ಕೌತುಕವನ್ನು ನೋಡಬೇಕೆಂದು ಅಸಂಖ್ಯ ಜನ ಭಕ್ತರೂ ಜೈನರೂ ಪಟ್ಟಣಕ್ಕೆ ಬಂದು ದೇವಾಲಯದ ಮುಂದೆ ನೆರೆದರು. ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾದ ಅಗ್ಗವಣಿಯ ಹೊನ್ನಯ್ಯನೂ ಕೂಡ ಅಲ್ಲಿಗೆ ಬಂದಿದ್ದನು.

ಹೀಗೆ ಜನರು ನೆರೆಯಲು ಏಕಾಂತದ ರಾಮಯ್ಯನು ವೀರಗಾಸೆಯನ್ನುಟ್ಟು, ಹಣೆಯಲ್ಲಿ ಭಸಿತವನ್ನಿಟ್ಟು, ನೆರೆದ ಮಹೇಶ್ವರರಿಗೆ ನಮಿಸಿ—ನನ್ನ ಶಿರವನ್ನು ಪರಮಾತ್ಮನಿಗೆ ಅರ್ಪಿಸಿ ಅದನ್ನು ಅವನಿಂದ ಪಡೆದು ಶಿವಮತದ ಶ್ರೇಷ್ಠತೆಯನ್ನು ಬೆಳಗುವೆನು ಎಂದು ಉಚ್ಚರಿಸುತ್ತ, ಶಿವನನ್ನು ಧ್ಯಾನಿಸುತ್ತ ತನ್ನ ಶಿರವನ್ನು ಕತ್ತರಿಸಿ ಪರಮಾತ್ಮನಿಗರ್ಪಿಸಿದನು. ಆಗ ಅಗ್ಗವಣಿಯ ಹೊನ್ನ

ಯ್ಯನು ಆ ಸಿರವನ್ನು ತನ್ನ ಕಯ್ಯಲ್ಲಿ ಹಿಡಿದು ಮುಂಡಕ್ಕೆ ಹಚ್ಚುವಷ್ಟರಲ್ಲಿ ನೆರೆದ ಜೈನರು—ಇದು ಕೃತಕವು. ಮದ್ದು ಮಂತ್ರ ಮಹೇಂದ್ರ ಜಾಲವು. ಇದು ಸುಳ್ಳು. ಆದರೆ ಇನ್ನೇಳು ದಿನಗಳವರೆಗೆ ಈ ತಲೆಯನ್ನು ನೀವು ಹೀಗೆಯೇ ಇಟ್ಟು ಆಮೇಲೆ ಮುಂಡಕ್ಕೆ ಹತ್ತಿಸಿದರೆ ನಾವು ಒಪ್ಪುತ್ತೇವೆ. ಆಗ ನಾವು ನಮ್ಮ ಜಿನದೇವತೆಯನ್ನು ತ್ಯಜಿಸುವೆವು, ಎಂದೆನ್ನಲು ಶಿವಶರಣನಾದ ಅಗ್ಗವಣಿಯ ಹೊನ್ನಯ್ಯನು—ಹಾಗೆಯೇ ಆಗಲಿ ಎಂದು ನುಡಿದು, ಅವನು ಆ ತಲೆಯನ್ನು ಒಂದು ಹರಿವಾಣದಲ್ಲಿ ವಿಭೂತಿಯೊಡನೆ ಇಟ್ಟು, ಅದರ ಮೇಲೆ ಪಾದೋದಕವನ್ನು ತಳಿದು ಏಳು ದಿನಗಳ ವರೆಗೆ ಅಲ್ಲಿಯೇ ಇಟ್ಟನು. ಮುಂದೆ ಏಳು ದಿನಗಳಾದ ಮೇಲೆ ಹೊನ್ನಯ್ಯನು ಆ ಸಿರವನ್ನು ಮುಂಡಕ್ಕೆ ಹಚ್ಚಲು ಏಕಾಂತದ ರಾಮಯ್ಯನಿಗೆ ಪ್ರಾಣವು ಬಂದು ಅವನು ಎದ್ದು ನಿಂತನು. ಅದನ್ನು ನೆರೆದ ಜನರು ನೋಡಿ ವಿಸ್ಮಿತರಾಗಿ ಶಿವನ ಮಹಿಮೆಯನ್ನು ಹೊಗಳುವವರಾದರು.

ಏಕಾಂತದ ರಾಮಯ್ಯನಿಗೆ ಹಾಗೆ ಪ್ರಾಣವು ಬಂದದ್ದನ್ನು ನೋಡಿ ಜೈನರು ತಮ್ಮ ಜಿನನಿಗೆ ಇನ್ನುಮೇಲೆ ಪ್ರಳಯವಾಗುವದೆಂದು ಭಯಭೀತರಾದರು. ಆಗ ಭಕ್ತರು ಕಯ್ಯಲ್ಲಿ ಖಡ್ಗಗಳನ್ನು ಹಿಡಿದುಕೊಂಡು ಇದಿರ್ಗೊಂಡ ಜೈನರನ್ನು ಸಂಹರಿಸುತ್ತ ಬಸದಿಯನ್ನು ಪ್ರವೇಶಿಸಿದರು. ಮತ್ತು ಅಲ್ಲಿದ್ದ ಜಿನಮೂರ್ತಿಯನ್ನು ಒಡೆದು ಬತ್ತಲೆ ಬೊಂಬೆಗಳನ್ನು ಕಿತ್ತುಹಾಕಿದರು. ಆಮೇಲೆ ರಾಮಯ್ಯನು ಒಂದು ಶ್ರೇಷ್ಠತರವಾದ ಲಿಂಗವನ್ನು ಆ ಜಿನನ ಸ್ಥಳದಲ್ಲಿ ಪ್ರತಿಷ್ಠಿಸಿದನು. ಹೀಗಾದ ಬಳಿಕ ಭಕ್ತಜನರೆಲ್ಲರೂ ರಾಮಯ್ಯನನ್ನು ಹೊಗಳುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೋಗುವವರಾದರು.

ಹೀಗೆ ಜಿನಾಲಯದಲ್ಲಿ ಲಿಂಗವನ್ನು ಪ್ರತಿಷ್ಠಿಸಿದ ಬಳಿಕ ಆ ಲಿಂಗಕ್ಕೆ 'ವೀರಸೋಮೇಶ'ನೆಂಬ ಹೆಸರು ಪ್ರಾಪ್ತವಾಯಿತು.

ಈ ಎಲ್ಲ ವಿವರಗಳು ಅಬಲೂರು ಗ್ರಾಮದಲ್ಲಿರುವ ಸೋಮನಾಥ ದೇವಾಲಯದ ಗೋಡೆಯ ಈಗಲೂ ಇರುವ ಶಿಲಾಶಾಸನದಲ್ಲಿ ಲಿಖಿಸಲ್ಪಟ್ಟಿರುತ್ತವೆ. ಅವುಗಳನ್ನು ನಾವು ಮುಖ್ಯವಾಗಿ ಇಟ್ಟುಕೊಂಡು ಅವುಗಳಿಗೆ ವಿರೋಧವಲ್ಲದ ಸಂಗತಿಗಳನ್ನು ಬೇರೆ ಪುರಾಣ ಗ್ರಂಥಗಳಿಂದ ಎತ್ತಿ ಇಲ್ಲಿ ತೆಗೆದುಕೊಂಡಿರುತ್ತೇವೆ. ಈ ಶಿಲಾಶಾಸನದಲ್ಲಿ ಮುಂದೆ ಕಾಣಿಸಿದ ಐತಿಹಾಸಿಕ ಸಂಗತಿಗಳು ಹೇಳಲ್ಪಟ್ಟಿವೆ.

ಹೀಗೆ ಏಕಾಂತದ ರಾಮಯ್ಯನು ದೇವಾಲಯದಲ್ಲಿದ್ದ ಜಿನಪ್ರತಿಮೆಯನ್ನು ತೆಗೆದುಹಾಕಿದ ಬಳಿಕ ನಾಡಿನಲ್ಲೆಲ್ಲ ಹೀಗೆಯೇ ಮುಂದೆ ಜೀನಪ್ರಳ

ಯವಾಗುವದೆಂದು ಜೈನರು ಭೀತಿಯುಳ್ಳವರಾಗಿ ಅವರು ಬಿಜ್ಜಳನೃಪನ ಕಡೆಗೆ ಹೋಗಿ ರಾಮಯ್ಯನು ಮಾಡಿದ ಈ ಕೃತ್ಯಗಳನ್ನು ಕುರಿತು ಬಹಳ ಹೆಚ್ಚಾಗಿ ಅವನ ಮುಂದೆ ದೂರು ಹೇಳಿದರು. ಬಿಜ್ಜಳನು ಈ ವೃತ್ತಾಂತವನ್ನು ಕೇಳಿ ಕುಪಿತನಾಗಿ ಏಕಾಂತದ ರಾಮಯ್ಯನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಗೆ—ನೀನಿದೇನು ಮಾಡಿದೆ? ನೀನು ಹೀಗೆಕೆ ಮಾಡಿದೆ? ಎಂದು ಕೇಳಲು ಅವನು ಜೈನರು ತನಗೆ ಬರೆದುಕೊಟ್ಟ ಭಾಷಾಪತ್ರವನ್ನು ಅವನ ಮುಂಟಿರಿಸಿ ಅವನಿಗೆ—ಈ ಓಲೆಯು ನಿನ್ನ ಭಾಂಡಾರದಲ್ಲಿರಲಿ. ಜೈನರು ಒಪ್ಪಿದಲ್ಲಿ ಈಗಲೂ ಸಹ ನಾನು ನನ್ನ ತಲೆಯನ್ನು ಪುನಃ ಕತ್ತರಿಸಿಕೊಂಡು ಅದನ್ನು ಪಡೆಯುವೆನು. ಆದರೆ ನಾನು ಹೀಗೆ ಪಡೆದದ್ದಾವರೆ ಈ ನಾಡಿನಲ್ಲಿರುವಂಥ ಆನೆಸೆಜ್ಜೆ ಬಸದಿ ಮೊದಲಾದ ಎಂಟನೂರು ಬಸದಿಗಳನ್ನು ಪಣವಾಗಿ ಒಡ್ಡಿ ಅವುಗಳಲ್ಲಿರುವ ಜಿನಪ್ರತಿಮೆಗಳ ಬದಲಾಗಿ ಶಿವಲಿಂಗಗಳನ್ನು ಪ್ರತಿಷ್ಠಿಸುವೆವೆಂದು ಒಪ್ಪಿಕೊಳ್ಳಬೇಕು. ಎಂದು ಹೇಳಿದನು. ಅದಕ್ಕೆ ಬಿಜ್ಜಳನು ಈ ಕೌತುಕವನ್ನು ನೋಡಬೇಕೆಂದು ಆ ಬಸದಿಗಳ ಒಡೆಯರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆ—ನೀವು ನಿಮ್ಮ ಬಸದಿಗಳನ್ನು ರಾಮಯ್ಯನಿಗೆ ಹೀಗೆ ಪಣವಾಗಿ ಇಡಲು ಒಪ್ಪಿಕೊಂಡು, ಹಾಗೆ ಓಲೆಯನ್ನು ಬರಕೊಡುವಿರಾ ಎಂದು ಕೇಳಲು ಅದಕ್ಕೆ ಅವರು—ನಾವು ಈ ಮೊದಲಿಗೆ ಒಡೆದುಹೋದ ಬಸದಿಯ ವಿಷಯವಾಗಿ ದೂರು ಹೇಳಲು ಬಂದಿರುತ್ತೇವೆಯೇ ಹೊರ್ತು ಉಳಿದ ಬಸದಿಗಳನ್ನು ಪಣವಾಗಿಟ್ಟುಕೊಂಡು ಅವುಗಳಿಗೆ ಪ್ರಳಯ ಮಾಡಲು ಬಂದಿಲ್ಲ. ಎಂದು ಹೇಳಲು ಬಿಜ್ಜಳರಾಯನು ನಕ್ಕು—ನೀವಿನ್ನು ಹಿಂದಿರುಗಿ ಹೋಗಿರಿ ಎಂದು ಹೇಳಿ, ಏಕಾಂತದ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟನು. ಇಷ್ಟೇ ಅಲ್ಲ, ಏಕಾಂತದ ರಾಮಯ್ಯನು ತೋರಿಸಿದ ನಿರತಿಶಯವಾದ ಮಾಹೇಶ್ವರ ಭಕ್ತಿ ಮತ್ತು ಸಾಹಸಗಳನ್ನು ಹೊಗಳಿ ಮೆಚ್ಚಿದವನಾಗಿ ಅವನು ಸ್ಥಾಪಿಸಿದ ವೀರ ಸೋಮನಾಥ ದೇವರ ಪ್ರಸಾದ, ಜೀರ್ಣೋದ್ಧಾರ, ಅಂಗಭೋಗ, ನೈವೇದ್ಯ ಇವುಗಳ ಸಲುವಾಗಿ ಬನವಾಸೆ ೧೨ ಸಾವಿರ ಪ್ರಾಂತದಲ್ಲಿರುವ ಗೋಗಾವೆ ಎಂಬ ಗ್ರಾಮವನ್ನು ಅವನ ಪಾದಪೂಜೆ ಮಾಡಿ ಅವನಿಗೆ ಉಂಬಳಿ ಹಾಕಿ ಕೊಟ್ಟನು. ಈ ಗೋಗಾವೆ ಗ್ರಾಮಕ್ಕೆ ಈಗ ಭೋಗಾದಿ ಎಂಬ ಹೆಸರಿದ್ದು ಅದು ಅಬ್ಬಲೂರಿನ ಉತ್ತರಕ್ಕೆ ೨ ಮೈಲುಗಳ ಮೇಲೆ ಇರುತ್ತದೆ.

ಅಬ್ಬಲೂರು ಶಿಲಾಶಾಸನದಿಂದ ಏಕಾಂತದ ರಾಮಯ್ಯನು ತನ್ನ ಮಹಾತ್ಮೆಯನ್ನು ಮೆರೆಯಿಸಿದ್ದು ಬಿಜ್ಜಳರಾಯನು ಇನ್ನೂ ಚಕ್ರವರ್ತಿಯಾಗಿರದೆ

ಕೇವಲ ಮಹಾಮಂಡಲೇಶ್ವರ ಎಂದರೆ ಮಾಂಡಲಿಕನಾಗಿದ್ದಾಗ ಎಂದು ತಿಳಿದು ಬರುತ್ತಿದೆ. ಅವನು ಮಾಂಡಲಿಕನಾಗಿದ್ದದ್ದು ೧೧೩೮ ರಿಂದ ೧೧೫೬ ರ ವರೆಗೆ ಮಾತ್ರ. ಈ ಅವಧಿಯ ಆರಂಭಕಾಲದಲ್ಲಿ ಅವನು ಕೆಲಕಾಲ ಮಂಗಳವಾಡದಲ್ಲಿಯೂ, ಆ ಮೇಲೆ ಬನವಾಸಿ ನಾಡಿನಲ್ಲಿಯೂ ಚಾಲುಕ್ಯರಾಜರಿಗೆ ಮಾಂಡಲಿಕನಾಗಿ ರಾಜ್ಯವಾಳಿದನೆಂದು ಇತಿಹಾಸದಿಂದ ತಿಳಿದುಬರುತ್ತಿದೆ. ಆದರೆ ಈ ಅವಧಿಯ ತರುವಾಯ ಅವನು ಪ್ರಬಲನಾಗಿ ೧೧೫೬ ರಿಂದ ೧೧೬೨ ವರೆಗೆ ನೂರ್ಮಡಿ ತೈಲಪ ತ್ರಿಭುವನಮಲ್ಲ ಚಾಲುಕ್ಯರಾಜನ ಸರ್ವಾಧಿಕಾರಿಯಾಗಿ ಬನವಾಸಿಯಲ್ಲಿಯೂ ಆ ಮೇಲೆ ೧೧೬೨ ರಿಂದ ೧೧೬೮ ವರೆಗೆ ಈ ಚಾಲುಕ್ಯರಾಜನನ್ನು ತಳ್ಳಿ ಚಕ್ರವರ್ತಿಯಾಗಿ ಕಲ್ಯಾಣಪಟ್ಟಣದಲ್ಲಿಯೂ ರಾಜ್ಯವಾಳಿದನು.

ಈ ಸಂಗತಿಗಳನ್ನೆಲ್ಲ ಲಕ್ಷಿಸಿದಲ್ಲಿ ಏಕಾಂತದ ರಾಮಯ್ಯನ ಮಹಾತ್ಮೆಯು ಘಟಿಸಿದ್ದು ಬಿಜ್ಜಳನು ಬನವಾಸಿಯಲ್ಲಿ ಮಾಂಡಲಿಕನಾಗಿ ಆಳುತ್ತಿದ್ದಾಗ ಅಂದರೆ ೧೧೫೬ ರ ಕಿಂತಲೂ ಸ್ವಲ್ಪ ಮೊದಲು ಇರಬಹುದೆಂಬ ಅನುಮಾನವು ಉಂಟಾಗುತ್ತದೆ. ಆದರೆ ಬಸವೇಶ್ವರನು ಕಲ್ಯಾಣ ಪಟ್ಟಣಕ್ಕೆ ಬಂದು ಧರ್ಮಕ್ರಾಂತಿಯನ್ನು ಮಾಡಿದ್ದು ಬಿಜ್ಜಳನು ಚಕ್ರವರ್ತಿಯಾದಾಗ್ಗೆ, ಅಂದರೆ ೧೧೫೬ ಅಥವಾ ೧೧೬೨ ರ ತರುವಾಯ.' ಆದ್ದರಿಂದ ಏಕಾಂತದ ರಾಮಯ್ಯನ ಕ್ರಾಂತಿಯು ಪ್ರಾರಂಭವು ಬಸವೇಶ್ವರನಕಿಂತಲೂ ಸ್ವಲ್ಪ ಮೊದಲು ಆಗುತ್ತದೆ.

ಬಿಜ್ಜಳನು ೧೧೬೮ ರ ವರೆಗೆ ರಾಜ್ಯವಾಳಿದ ಬಳಿಕ ಅವನ ವಂಶಜರು ೧೧೮೨ ರ ವರೆಗೆ ರಾಜ್ಯವಾಳಿದರು. ಆಮೇಲೆ ಚಾಲುಕ್ಯ ವಂಶದ ನೂರ್ಮಡಿ ತೈಲಪನ ಮಗನಾದ ೪ ನೇ ಸೋಮೇಶ್ವರನು ತನ್ನ ಸೇನಾನಾಯಕನಾದ ಬರ್ಮದೇವನ ಸಹಾಯದಿಂದ ಬಿಜ್ಜಳನ ವಂಶದ ಕಡೆಯ ಅರಸನನ್ನು ಪಟ್ಟದಿಂದ ತಳ್ಳಿ, ಮೊದಲು ಅಣ್ಣಿಗೇರಿಯಲ್ಲಿ, ಆಮೇಲೆ ಕಲ್ಯಾಣದಲ್ಲಿ ರಾಜ್ಯವಾಳಹತ್ತಿದನು. ಹೀಗೆ ಈ ರಾಜನಿಗೆ ಸಹಾಯಮಾಡಿದ್ದಕ್ಕಾಗಿ ಬರ್ಮದೇವನಿಗೆ 'ಚಾಳುಕ್ಯರಾಜ್ಯ ಪ್ರತಿಷ್ಠಾಪಕ'ನೆಂಬ ಹೆಸರು ಬಂದಿರುತ್ತದೆ. ಮೇಲೆ ಉಲ್ಲೇಖಿಸಿದ ಅಬ್ಬಲೂರು ಶಿಲಾಶಾಸನದಿಂದ ತಿಳಿದು ಬರುವ ಬೇರೆ ಸಂಗತಿಗಳು ಆವವೆಂದರೆ:—

ಈ ಬರ್ಮದೇವ ಸೇನಾಪತಿಯೂ ರಾಜ್ಯನಾದ ಸೋಮೇಶ್ವರನೂ ಸೆಲೆಯಹಳ್ಳಿಯಕೊಪ್ಪ ಎಂಬ ಗ್ರಾಮದಲ್ಲಿ ಬಿಡಾರ ಬಿಟ್ಟಾಗ್ಗೆ ಅವರು 'ಧರ್ಮಗೋಷ್ಠಿ'ಯನ್ನು ಅಲ್ಲಿ ನಡಿಸುತ್ತಾ ಇದ್ದರು. ಆಗ ಹಿಂದಿನವರೂ ನೂತನರೂ ಆದ ಶಿವಭಕ್ತರ ಗುಣಸ್ತವನವು ಅವರ ಮುಂದೆ ನಡಿಯುತ್ತಾ

ಇದ್ದಿತು. ಆ ಸಮಯದಲ್ಲಿ ಸೋಮೇಶ್ವರ ರಾಜನು ಅಬ್ಬಲೂರಲ್ಲಿ ಏಕಾಂತದ ರಾಮಯ್ಯನು ನಡಿಸಿದ ಮಹಾತ್ಮೆಯನ್ನು ಕೇಳಿ, ಅವನಿಗೋಸ್ಕರ ಪೂಜ್ಯ ಭಾವವನ್ನು ತಾಳಿದವನಾಗಿ ಅವನನ್ನು ತಾನಿದ್ದ ಸೆಲೆಯಹಳ್ಳಿಯಕೊಪ್ಪಕ್ಕೆ ಬರಮಾಡಿಕೊಂಡನು. ಆಗ ಅವನನ್ನು ಪೂಜಿಸಿ, ಅವನು ಸ್ಥಾಪಿಸಿದ ವೀರಸೋಮನಾಥ ದೇವಾಲಯದ ಜೀರ್ಣೋದ್ಧಾರಕ್ಕೂ ಅಂಗಭೋಗ, ರಂಗಭೋಗ, ನೈವೇದ್ಯಕ್ಕೂ, ಉತ್ಸವಾದಿ ಪರ್ವಗಳಿಗೂ, ಅನ್ನದಾನ ವಿದ್ಯಾ ದಾನಕ್ಕೂ ಬನವಸೆ ಹನ್ನೆರಡು ಸಾವಿರ ಪ್ರಾಂತದಲ್ಲಿದ್ದ ಅಬ್ಬಲೂರು ಗ್ರಾಮ ವನ್ನು ಅದರ ಮೇಲಾಳಿಕೆ, ಮನ್ನೆಯ ಸುಂಕ, ದಂಡ ದೋಷ, ನಿಧಿನಿಕ್ಷೇಪ ಸಹವಾಗಿ ಧಾರಾಪೂರ್ವಕವಾಗಿ ರಾಮಯ್ಯನಿಗೆ ಉಂಬಳಿ ಹಾಕಿಕೊಟ್ಟನು. ಈ ಚಾಲುಕ್ಯ ಸೋಮೇಶ್ವರನು ೧೧೮೧ ರಿಂದ ೧೧೮೯ ವರೆಗೆ ಆಳಿದ್ದರಿಂದ ಈ ವರ್ಷಗಳ ಮಧ್ಯದಲ್ಲಿ ಈ ಉಂಬಳಿಯು ಏಕಾಂತ ರಾಮೇಶ್ವರನಿಗೆ ದೊರ ಕಿರಬಹುದೆಂದು ತೋರುತ್ತದೆ. ಆಗ ಅವನು ಇನ್ನೂ ಜೀವಂತ ಇದ್ದ ನೆಂಬುದು ಸ್ಪಷ್ಟವು.

೧೧೮೯ ರ ಸುಮಾರಿನಲ್ಲಿ ದೇವಗಿರಿ ಯಾದವರಾಜನಾದ ಭಿಲ್ಲಮನು ಚಾಲುಕ್ಯ ರಾಜ್ಯವನ್ನು ಅಭಿಯೋಗಿಸಿ ಈಗಿನ ಕಲಬುರ್ಗಿ ಮತ್ತು ವಿಜಾಪುರ ಜಿಲ್ಲೆಗಳನ್ನು ಆಕ್ರಮಿಸಿದನು. ಆದ್ದರಿಂದ ಕಲ್ಯಾಣ ಚಾಲುಕ್ಯರ ರಾಜ್ಯವು ಅಂದಿನಿಂದ ಪೂರ್ಣವಾಗಿ ನಿಂತುಹೋಯಿತು.

ಇದರ ತರುವಾಯ ಅಬ್ಬಲೂರು ಇದ್ದ ಪ್ರದೇಶವನ್ನು ಕದಂಬ ರಾಜ ನಾದ ಕಾಮದೇವನು ಹಾನಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಕೊಂಡು ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಅವನು ಒಂದುದಿನ ಅಬ್ಬಲೂರಿಗೆ ಬಂದಾಗ್ಗೆ ಅಲ್ಲಿ ಬಹು ಉನ್ನತವೂ ವಿಸ್ತಾರವೂ ಆದ ವೀರ ಸೋಮನಾಥನ ದೇವಾಲಯವನ್ನು ಕಂಡು ಏಕಾಂತದ ರಾಮಯ್ಯನು ನಡಿ ಸಿದ ಮಹಾತ್ಮೆಯನ್ನು ತಿಳಿದು, ಅವನನ್ನು ತನ್ನ ರಾಜಧಾನಿಯಾದ ಹಾನ ಗಲ್ಲಿಗೆ ಕರೆದುಕೊಂಡು ಬಂದು, ಅವನ ಕೂಡ ಶಿವಗೋಷ್ಠಿಗಳನ್ನು ನಡಿಸಿ, ಅವನಿಗೆ ಹಾನುಗಲ್ಲು ಐದುನೂರು ಪ್ರಾಂತದಲ್ಲಿದ್ದ ಮಲ್ಲವಳ್ಳಿ ಎಂಬ ಗ್ರಾಮ ವನ್ನು ವೀರಸೋಮನಾಥ ದೇವರ ದೇಗುಲದ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ರಂಗಭೋಗ ನೈವೇದ್ಯಕ್ಕೂ, ಉತ್ಸವಾದಿ ಪರ್ವಗಳಿಗೂ ಅನ್ನ ದಾನಕ್ಕೂ ರಾಮಯ್ಯನ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ದಾನ ಮಾಡಿಕೊಟ್ಟನು. ಈ ಮಲ್ಲವಳ್ಳಿಯು ಈಗ ಮುಂಡಗೋಡ ಗ್ರಾಮದ ನೈಋತ್ಯ ದಿಕ್ಕಿಗೆ ಮೂರು ಮೈಲುಗಳ ಮೇಲೆ ಇದೆ.

ಕಾಮದೇವನ ಶಿಲಾಶಾಸನಗಳು ೧೧೮೮ ರಿಂದ ೧೨೧೧ ವರೆಗೆ ಉಪಲಬ್ಧವಿರುತ್ತವೆ. ಆದ್ದರಿಂದ ಈ ಅವಧಿಯ ಮಧ್ಯದಲ್ಲಿ ಆವುದೇ ಒಂದು ವರ್ಷ ಮೇಲೆ ಕಾಣಿಸಿದ ಸಂಗತಿಯು ಘಟಿಸಿರಬಹುದು. ಈ ಕಾಲದಲ್ಲಿಯೂ ಏಕಾಂತದ ರಾಮಯ್ಯನು ಜೀವಿಸಿದ್ದನು.

ಈ ಬನವಾಸಿ ಭಾಗವನ್ನು ಕೆಲವುಕಾಲ ಕೇಶಿರಾಜ ದಂಡನಾಯಕನೆಂಬುವನು ಆಳುತ್ತಿದ್ದನು. ಅವನು ಅಬ್ಬಲೂರಿಗೆ ಬಂದಾಗ್ಗೆ ಏಕಾಂತ ರಾಮಯ್ಯನ ಮಹಾತ್ಮೆಯನ್ನು ತಿಳಿದುಕೊಂಡು ಅವರ ವಿವರವನ್ನು 'ಶರಣ' ಎಂಬವನಿಂದ ಈ ಶಿಲಾಶಾಸನದಲ್ಲಿ ತಿದ್ದಿ ಬರೆಯಿಸಿದನೆಂದು ತಿಳಿಯುತ್ತದೆ. ಇದು ಯಾವ ವರ್ಷ ಎಂಬುದು ಶಾಸನದಲ್ಲಿ ಹೇಳಿಲ್ಲ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿಸಿದ್ದನೆಂದು ತೋರುವದಿಲ್ಲ. ಹಿಂದಿನ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಈ ಶಾಸನವನ್ನು ಬರೆಯಿಸಿದವನು ಈ ಕೇಶರಾಜನೆಂದು ತೋರುತ್ತದೆ.

ಕದಂಬವಂಶದ ಕಾಮದೇವನ ತರುವಾಯು ಅದೇ ವಂಶದ ಮಲ್ಲಿದೇವನೆಂಬ ರಾಜನು ಈ ಭಾಗವನ್ನು ಆಳುತ್ತಿದ್ದನು. ಅವನು ಸಹ ಈ ದೇವಾಲಯಕ್ಕೆ ಉಂಬಳಿಯನ್ನು ಹಾಕಿಕೊಟ್ಟದ್ದು ಈ ಅಬ್ಬಲೂರು ಶಾಸನದಲ್ಲಿ ಹೇಳಿಹೆ. ಅವನ ಶಾಸನಗಳು ೧೨೧೯ ರಿಂದ ೧೨೨೧ ರ ವರೆಗೆ ಉಪಲಬ್ಧವಿವೆ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿಸಿದ್ದಿಲ್ಲೆಂದು ತೋರುತ್ತದೆ. ಶಿಲಾಶಾಸನದ ಅಕ್ಷರಗಳು ಇಲ್ಲಿಯು ಮುಂದೆ ಅಳಿಕಿಸಿ ಹೋಗಿರುವದರಿಂದ ಈ ಉಂಬಳಿ ಹಾಕಿದ ವರ್ಷವು ತಿಳಿಯುವದಿಲ್ಲ.

ಈ ಪ್ರಕಾರ ಏಕಾಂತದ ರಾಮಯ್ಯನು ಬಿಜ್ಜಳನು ೧೧೫೫ ಅಥವಾ ಅದಕ್ಕೂ ಸ್ವಲ್ಪ ಮೊದಲು ಬನವಾಸಿನಾಡಿನಲ್ಲಿ ಆಳಹತ್ತಿದಂದಿನಿಂದ ಸುಮಾರು ೪೦—೫೦ ವರ್ಷಗಳ ವರೆಗೆ ಜೀವಿಸಿ ತನ್ನ ಶಿವಯೋಗ ಸಾಮರ್ಥ್ಯವನ್ನು ಜನರಲ್ಲಿ ತೋರಿಸಿ ಪ್ರಸಿದ್ಧನಾಗಿದ್ದಾನೆ. ಈ ಕಾಲದಲ್ಲಿ ಅವನು ಅನೇಕ ರಾಜರಿಂದಲೂ ಸಾಮಂತರಿಂದಲೂ ಮನ್ನಣೆಯನ್ನು ಹೊಂದಿದ್ದಾನೆ. ಅವನು ಬಸವೇಶ್ವರನ ಸಮಕಾಲೀನನು. ಆದರೂ ಅವನು ಅವನಕಿಂತಲೂ ಸ್ವಲ್ಪಕಾಲ ಹಿಂದಿನವನು ಮತ್ತು ಅವನ ತರುವಾಯು ಸಹ ಅನೇಕ ವರ್ಷ ಜೀವಿಸಿದನು. ಈ ಕಾಲದಲ್ಲಿ ಅವನು ಈ ಭಾಗದಲ್ಲಿ ವೀರಶೈವ ಧರ್ಮವನ್ನು ವಿಸ್ತರಿಸಿರಲಿಕ್ಕೆಬೇಕೆಂಬ ಅನುಮಾನವು ಉಂಟಾಗುತ್ತದೆ.

ಏಕಾಂತದ ರಾಮಯ್ಯನ ಕಾಲದಲ್ಲಿ ಬಸವೇಶ್ವರನಕಿಂತಲೂ ಮೊದಲು ಅನೇಕ ಶಿವಶರಣರು ಆಗಿಹೋಗಿದ್ದುದು ಈ ಶಿಲಾಶಾಸನದಲ್ಲಿ ಬರ್ಮದೇವ ಮತ್ತು ಸೋಮೇಶ್ವರರಾಜ ಇವರಿಗೆ ಸಂಬಂಧಪಟ್ಟ ಉಲ್ಲೇಖಗಳಲ್ಲಿ ಬಂದಿರುತ್ತದೆ. ಇದನ್ನು ನಾವು ಲಕ್ಷಿಸತಕ್ಕದ್ದು. ಇದರಿಂದ ಬಸವೇಶ್ವರನಕಿಂತಲೂ ಮೊದಲು ಶಿವಶರಣರಿದ್ದುದು ಸ್ಪಷ್ಟವಾಗುತ್ತದೆ.

ಏಕಾಂತದ ರಾಮಯ್ಯನು ಉಚ್ಚಸ್ಥಿತಿಯನ್ನು ಹೊಂದಿದ ಶಿವಯೋಗಿಯಾಗಿದ್ದನು. ಅವನು ಹೊಂದಿದ ಈ ಸ್ಥಿತಿಯಲ್ಲಿ ಶಿವಯೋಗಿಯ ದೇಹವು ಬಯಲು ಸ್ವರೂಪವನ್ನು ಹೊಂದುತ್ತದೆಂದು ಶಿವಾನುಭವದ ತತ್ವವಿರುತ್ತದೆ. ಆಗ ಅವನು ತನ್ನ ಅಂಗಚೈತನ್ಯವನ್ನು ತನ್ನಧೀನದಲ್ಲಿಟ್ಟುಕೊಂಡು ಶರೀರ. ಭಾಗಗಳು ಕತ್ತರಿಸಿಹೋದರೂ ಅವುಗಳನ್ನು ಅವನು ಸಮಪಡಿಸಿಕೊಳ್ಳುವ ಸಾಮರ್ಥ್ಯವು ಅವನಲ್ಲಿ ಬರುತ್ತದೆಂಬುದು ಅನೇಕ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇದನ್ನು ನಂಬುವದು ಅಥವಾ ಬಿಡುವದು. ವಾಚಕರ ತಿಳಿವಳಿಕೆ ಮತ್ತು ವಿಶ್ವಾಸದ ಮೇಲೆ ಅವಲಂಬಿಸಿದೆ. ಆದರೆ ಐತಿಹಾಸಿಕ ದೃಷ್ಟಿಯಿಂದ ನಾವು ವಿಚಾರಮಾಡಿದಲ್ಲಿ ಏಕಾಂತದ ರಾಮಯ್ಯನು ಬನವಾಸಿ ನಾಡಿನಲ್ಲಿ ಅಂದರೆ ಈಗಿನ ಧಾರವಾಡ ಜಿಲ್ಹೆಯ ದಕ್ಷಿಣ ಭಾಗದಲ್ಲಿ ಅನೇಕ ವರ್ಷ ಇದ್ದುಕೊಂಡು ವೀರಶೈವ ಧರ್ಮವನ್ನು ಇಲ್ಲಿ ಪ್ರಸಾರಗೊಳಿಸಿದನೆಂಬುದು ನಿರ್ವಿವಾದವಾಗಿರುತ್ತದೆ.

ಏಕಾಂತದ ರಾಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಏಕಾಂತದ ರಾಮಯ್ಯನು ವಚನಕಾರನೂ ಇದ್ದಾನೆ. ಇದರಿಂದ ಅವನು ಮೊದಲು ಬ್ರಾಹ್ಮಣನಾಗಿದ್ದರೂ ಶಿವಶರಣರ ನಡೆಯಂತೆ ನಡೆಯುತ್ತ ಶಿವಾನುಭವದ ತತ್ವಗಳನ್ನು ಬನವಾಸಿನಾಡಿನಲ್ಲಿ ಪ್ರಸಾರಮಾಡಿದ್ದಾನೆಂದು ನಾವು ಊಹಿಸಬೇಕಾಗುತ್ತದೆ. ಅವನ ಮುದ್ರಿಕೆಯು 'ಎನ್ನಯ್ಯ ಚನ್ನರಾಮೇಶ್ವರ' ಎಂದಿರುತ್ತದೆ. ಅವನ ಆರು ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಅವುಗಳನ್ನೆಲ್ಲ ನಾವು ಕೆಳಗೆ ಕೊಟ್ಟಿದ್ದೇವೆ.

## ವಚನಗಳು.

(೧) ಮನ ಲಿಂಗದಲ್ಲಿ ನಿಂದಿತ್ತೆಂಬಲ್ಲಿ ಆ ಮನ ಲಿಂಗಕ್ಕೆ ನೆಲೆಯೋ, ಲಿಂಗಮನದ ಸಂಗಿಯೋ, ಎಂಬುದ ತಿಳಿದೆನೆಂಬುದು ಸಂಗಿಯೋ, ನಿಸ್ಸಂಗಿಯೋ ಬೀಜದೊಳಗಿನ ತಿರುಳು ಭೇದಿಸಿ ಪುಟ್ಟುವಲ್ಲಿ ಅದು ತನ್ನಯ

ಸುನಾದದಿಂದವೋ ಅಪ್ಪುವಿನ ಬಿಂದುವಿನ ಭೇದದಿಂದವೋ? ಈ ಉಭಯ ನೆಲೆ ಘಟಿಸಿದಲ್ಲಿ ಯೋಗಕೂಟವಾತ್ಮಲಿಂಗ ಭೇದಯುಕ್ತಿ. ಭೇದಾಭೇದನಿಂದಲ್ಲಿ ಎನ್ನಯ್ಯ ಚನ್ನರಾಮನ ಕೂಟದ ಬೆಳಗು.

(೨) ಶಿಲೆ ಹಲವು ತೆರದಲ್ಲಿ ಹೊಲಬಿಗರಿಗೆ ಹೊಲಬಿಗನಾಗಿ, ಒಲವರವಿಲ್ಲದೆ ಅವರವರ ಭಾವದಲ್ಲಿ ನಿಲುವುದು ಶಿಲೆಯೋ, ಮನವೋ? ಆ ನಿಜದ ನೆಲೆಯ ತಿಳಿವುದು ದರ್ಪಣದ ತನ್ನೊಪ್ಪದ ಭಾವ ಎನ್ನಯ ಚನ್ನರಾಮನನರಿವಲ್ಲಿ.

(೩) ಕಲ್ಪಿತಾಂತರವನುಂಬುದು ಕಾಯವೋ ಜೀವನ ಜೀವವೆಂದೊಡೆ ನಿರ್ನಾಮಭೇದ. ಕಾಯವೆಂದಡೆ ಅಚೇತನ ಘಟ. ಉಭಯಸಂಗ ಸಂಬಂಧವಾದಲ್ಲಿ ಎನ್ನಯ್ಯ ಚನ್ನರಾಮನ ಭೇದ.

(೪) ಕಾಯ ಹಲವು ಭೇದಗಳಾಗಿ ಆತ್ಮನನೇಕವೆಂಬುದದೇತರವಾತು? ಬೆಂಕಿಯಿಂದಾದ ಬೆಳಗು ಸುಡಬಲ್ಲುದೇ ಬೆಂಕಿಯಲ್ಲದೆ? ಹಲವು ಘಟದಲ್ಲಿ ಅವರವರ ಹೊಲಬಿನಲ್ಲಿ ಅನುಭವಿಸುತ್ತ ಮತ್ತೊಂದರಲ್ಲಿಯ ಕೂಟಸ್ಥವಪ್ಪ ಸುಖ ಉಂಟೆ ? ಈ ಗುಣ ಎನ್ನಯ್ಯ ಚನ್ನರಾಮನನರಿದಲ್ಲಿ.

(೫) ಗುರುಭಕ್ತನಾದಲ್ಲಿ ಘಟಧರ್ಮವಳಿದು, ಲಿಂಗಭಕ್ತನಾದಲ್ಲಿ ಸಂಚಲವಳಿದು, ಜಂಗಮಭಕ್ತನಾದಲ್ಲಿ ತ್ರಿವಿಧಾಂಗ ಸಲೆಸಂದು, ಇಂತೀ ತ್ರಿವಿಧಭಕ್ತಿಯಲ್ಲಿ ತ್ರಿಕರಣ ಶುದ್ಧನಾದಾತ್ಮಂಗೆ ಮರ್ತ್ಯಕ್ಕೆ ಕೈಲಾಸವೆಂಬ ಕಾಳು ಮಾಡಿಲ್ಲ. ಆತ ನಿತ್ಯಮುಕ್ತನೆನ್ನಯ್ಯ ಚನ್ನರಾಮನಾಗಿ.

(೬) ಅಶನ ವ್ಯಸನ ಸರ್ವವಿಷಯಾದಿಗಳಲ್ಲಿ ಹುಸಿದು ಪಿಸುಣತ್ವದಿಂದ ಗಸಣಿಗೊಂಡು ಮಾಡಿಸಿಕೊಂಬುದು ಸದ್ಗುರುವಿಗೆ ಸಂಬಂಧವಲ್ಲ. ತಿಲರಸವಾರಿಯ ಭೇದದಂತೆ ಮಣಿಯೊಳಗಿದ್ದ ಸೂತ್ರದಂತೆ ಅಂಗವ ತೀರ್ಚಿ ಸಾಯ್ವುನಿಂದ ಅಹಿಯ ಅಗದಂತೆ ಗುರುಸ್ಥಲ ಸಂಬಂಧ ಎನ್ನಯ್ಯ ಚನ್ನರಾಮೇಶ್ವರ ಲಿಂಗವನರಿಯಬಲ್ಲಡೆ.

ಈ ವಚನಗಳಲ್ಲಿ ಏಕಾಂತದ ರಾಮಯ್ಯನು ಲಿಂಗಾಂಗಸಾಮರಸ್ಯದ ತತ್ವಗಳನ್ನು ವಿವೇಚಿಸಿದ್ದಾನೆ.

———

ಬೂದಿಯ ಬೊಕ್ಕಣವ ಕಟ್ಟಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಗಂಧವ ಧರಿಸಿದರೆ ಲಿಂಗದ ಚಿತ್ತದಲ್ಲಿ ಚಂಡಿಟ್ಟು ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಅಕ್ಷತೆಯನೇರಿಸಿದರೆ ಲಿಂಗದ ಚಿತ್ತದಲ್ಲಿ ಕಲ್ಲು ಹೊರಿಸಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಪುಷ್ಪವ ಧರಿಸಿದರೆ ಲಿಂಗದ ಚಿತ್ತದಲ್ಲಿ ಬೆನ್ನಮೇಲೆ ಹೇರು ಹೊರಿಸಿದಂತಾಯಿತ್ತಯ್ಯಾ! ಆ ಭಕ್ತನು ಧೂಪವ ಬೀಸಿದರೆ ಲಿಂಗದ ಚಿತ್ತದಲ್ಲಿ ಅರವಸಿಕ್ಕಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ದೀಪಾರತಿಯ ನೆತ್ತಿದರೆ ಲಿಂಗದ ಚಿತ್ತದಲ್ಲಿ ಪಂಜುಗಳ್ಳರು ಬಂದು ಮೋರೆಯ ಸುಟ್ಟು ಸಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಸ್ತೋತ್ರಮಂತ್ರವ ನುಡಿದರೆ ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊನಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ! ಇಂತಪ್ಪ ಲಿಂಗಬಾಧಕನು ಲಿಂಗಪೂಜಕರೆನಬಹುದೆ? ಆತನ ಅಂಗಳವ ಮೆಟ್ಟಬಹುದೆ? ಇದರ ಇಂಗಿತವ ನಿಜಭಾವವುಳ್ಳ ಶರಣರು ನೀವೇ ತಿಳಿದು ನೋಡಿರೆಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವಃ—** ಅನೇಕ ಲೋಭಿಗಳು ಲಿಂಗಪೂಜೆಯನ್ನು ವಿಶೇಷವಾಗಿ ಮಾಡುವದುಂಟು. ಇದರಲ್ಲಿ ಅವರ ಉದ್ದೇಶವು ಇನ್ನಷ್ಟು ಬದುಕಾಗಬೇಕೆಂದು ಮಾತ್ರ ಇರುತ್ತದೆ. ಇಂಥವರ ಪೂಜೆಯು ಯಾವ ತರದ್ದಿರುತ್ತದೆಂಬದನ್ನು ವಚನಕಾರನು ಇಲ್ಲಿ ಚನ್ನಾಗಿ ವರ್ಣಿಸಿರುವನು. ಇಂಥವರು ಪೂಜಾಕಾಲದಲ್ಲಿ ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರಗಳೆಲ್ಲವೂ ಪರಮಾತ್ಮನನ್ನು ಪೀಡಿಸಿದಂತೆ ಆಗುತ್ತದೆ. ಪರಮಾತ್ಮನಿಗೆ ಇವರ ಪೂಜೆಯು ಕಷ್ಟಕರವಾದದ್ದು. ಅವನಿಗೆ ಅತ್ಯಂತ ನೋವನ್ನುಂಟುಮಾಡುವಂಥಾದ್ದು. ಹೀಗೆ ತನ್ನನ್ನು ನೋಯಿಸಿದವನನ್ನು ಪರಮಾತ್ಮನು ಪ್ರೀತಿಸುವ ಬಗೆ ಹೇಗೆ?

೫೧. **ವಚನಃ—** ಉಡುವಿನ ಕಣ್ಣು, ಪಡಿಯುಡಿ, ಕೀಟಕನ ಮುಟ್ಟು, ಘಾತಕನ ಸ್ನೇಹ, ವೇಶಿಯ ಮೋಹದಾಸೆ, ಸುಜಾತಿಯಿಲ್ಲದವನ ಕೊಳುಕೊಡೆ, ನಿರಾಸೆಯಿಲ್ಲದವನ ಮಾತಿನ ಮಾಲೆ, ಅದೇತಕ್ಕೆ ಬಾತೆ ಎಂದನಂಬಿಗಚೌಡಯ್ಯ.

**ಭಾವಃ—** ಮನುಷ್ಯನು ಆಶಾರಹಿತನಾಗಿರತಕ್ಕದ್ದು. ಕೆಲವೊಂದು ಆಸೆಯನ್ನಿಟ್ಟುಕೊಂಡು ನುಡಿಯುವವನ ರೀತಿ ವ್ಯರ್ಥವೆಂದು ವಚನಕಾರನ ಅಭಿಪ್ರಾಯವು. ಇದಕ್ಕೆ ಅವನು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ.

೫೨. **ವಚನಃ—** ಲಿಂಗ ತನುವಿಗಾತ್ಮತೇಜದಹಂಕಾರ ಉಂಟೇ? ಸದ್ಭಕ್ತಂಗೆ ಹುಸಿ ಕುಹಕ ಕ್ಷಣಿಕತ್ವ ಆಸೆ, ಘಾತುಕತನದ ದೆಸೆ ಉಂಟೇ? ಇಂತೀ ಇವರ ದೆಸೆಯ ಹೊದ್ದೆನೆಂದನಂಬಿಗರಚೌಡಯ್ಯ.

**ಭಾವ:—** ಲಿಂಗ ತನುವಾದವನಲ್ಲಿ ಅಹಂಕಾರ, ಹುಸಿ, ಕುಹಕತನ, ಅಲ್ಪಬುದ್ಧಿ, ಆಸೆ, ಘಾತುಕತನ ಇವಿರಬಾರದೆಂದು ವಚನಕಾರನು ಹೇಳಿದ್ದಾನೆ.

೫೩. **ವಚನ:—** ಹೇಳುವ ಕೇಳುವ ಮಾತ ಕೇಳಿ ನಾನಯ್ಯ ನಾದೆನೆಂದು ಬೆಳುಗೆರಿಯಲೇತಕ್ಕೆ? ವೇಣು ಚಂದನದ ಯೋಗದಲಿದ್ದಡೆ ಗಂಧ ತಾನಾಗಬಲ್ಲುದೆ ಎಂದನಂಬಿಗರಚೌಡಯ್ಯ.

**ಭಾವ:—** ದೊಡ್ಡವರ ಸಮೀಪದಲ್ಲಿದ್ದು ಅವರ ಸನ್ನಿಧಿಯಲ್ಲಿ ನಡೆಯುವ ಕಥಾ ಪ್ರಸಂಗಗಳನ್ನು ಕೇಳಿ ಅವರಂತೆಯೇ ನಾನೂ ಆದೆನೆಂದು ಅಹಂಕಾರಿಯಾಗಬಾರದು. ಅಂಥವರ ನೆರೆಯಿಂದ ಅವರ ಗುಣಗಳು ಅವನಲ್ಲಿ ಬಾರವು. ಬಿದಿರಿನ ಗಿಡವು ಗಂಧದ ಮರದ ನೆರೆಯುಲ್ಲಿದ್ದರೂ ಅದರ ಗುಣಗಳು ಬಿದಿರಿಗೆ ಬಾರವು ಎಂದು ವಚನಕಾರನು ಹೇಳುತ್ತಾನೆ.

೫೪. **ವಚನ:—** ಕಾಲವೇಳೆಯನರಿದು ಕೂಗಿದ ಕೋಳಿಯು ಕಂಡು ಊರೆಲ್ಲರು ಬೆಳಗಾಯಿತ್ತೆಂದು ಏಳುವರಿಂದ ಕಡೆಯೇ? ನಾ ಹೇಳುವ ಕೇಳುವ ಮಾತ ಕೇಳಿ ನೀವು ಆರ ಮರೆದು ಮೂರನರಿದು ಈರೈದ ಕಾಣಿರೇ. ಸಾರಿದೆ, ಕೆಡಬೇಡೆಂದನಂಬಿಗರಚೌಡಯ್ಯ.

**ಭಾವ:—** ನಾನು ನಿಮಗೆ ಎಚ್ಚರು ಕೊಡುತ್ತೇನೆ. ನೀವು ಕೋಳಿಯ ಕೂಗನ್ನು ಕೇಳಿ ಮುಂಜಾವಿನಲ್ಲಿ ಕೆಲಸಕ್ಕೋಸ್ಕರ ಏಳುತ್ತೀರಿ. ನಾನೂ ಅದರಂತೆಯೇ ಕೂಗಿ- ನಿಮ್ಮನ್ನು ಎಬ್ಬಿಸುತ್ತೇನೆ. ನಾನು ಕೆಳಗಿಂತ ಕಡೆಯಲ್ಲ. ನಾನು ಹೇಳುವ ಮಾತು ದಯವಿಟ್ಟು ಕೇಳಿರಿ. ನೀವು ಆರು ಮದಗಳನ್ನು ಮರೆಯಬೇಕು. ಇಷ್ಟ ಪ್ರಾಣ ಭಾವಗಳೆಂಬ ಲಿಂಗಗಳನ್ನು ತಿಳಿಯಬೇಕು. ನಿಮ್ಮಲ್ಲಿ ನವಚಕ್ರಗಳಿವೆ ಅವುಗಳಲ್ಲಿರುವ ಲಿಂಗಗಳ ಮೂಲಕ ನಿಶ್ಶೂನ್ಯದಲ್ಲಿ ಹೋಗಿರಿ. ಇದನ್ನು ಸಾರಿಹೇಳುತ್ತೇನೆ. ಕೆಟ್ಟು ಹೋಗಬೇಡಿರಿ ಎಂದು ಎಚ್ಚರಿಸುತ್ತಾನೆ.

೫೫. **ವಚನ:—** ಕಾಮವ ಕಳೆದು ಕ್ರೋಧವ ದಾಂಟಿ ಲೋಭವ ಹಿಂಗಿ ಮೋಹಾದಿಗಳಲ್ಲಿ ಮನವಿಕ್ಕದೆ ಕಾಮವ ಲಿಂಗದಲ್ಲಿ ಮರೆದು ಕ್ರೋಧವ ಕರಣಂಗಳಲ್ಲಿ ಬೈಚಿಟ್ಟು ಲೋಭವ ಸರ್ವೇಂದ್ರಿಯಗಳಲ್ಲಿ ಸಂಭವಿಸಿ ಮೋಹಾದಿ ಗುಣಂಗಳ ಸ್ವಯಚರ ಪರದಲ್ಲಿ ಗರ್ಭೀಕರಿಸಿ ನಿಜನಿವಾಸಿಯಾಗಿ ನಿಂದಾತ ನಡಿಗೆರಗುವೆನೆಂದನಂಬಿಗರಚೌಡಯ್ಯ.

**ಭಾವ:—** ಇದರಲ್ಲಿ ವಚನಕಾರನು ತನ್ನಲ್ಲಿಯೇ ಪರಮಾತ್ಮನಿದ್ದು ತನ್ನಲ್ಲಿಯೇ ಲಯವಾಗಬೇಕೆಂದು ಹೇಳಿದ್ದಾನೆ. ಹೀಗೆ ಇರುವಂಥವನನ್ನು ತಾನು

ನಮಸ್ಕಾರ ಮಾಡುವೆನೆಂದು ಹೇಳುತ್ತಾನೆ. ಇದು ನೀತಿಯಿಂದಿರುವವನಿಗೆ ಶಕ್ಯವು. ಅವನು ಕಾಮ ಕ್ರೋಧ, ಲೋಭ, ಮೋಹ, ಮದಗಳನ್ನು ದೂರ ಮಾಡತಕ್ಕದ್ದು. ಅದು ಹೇಗೆಂದರೆ ಲಿಂಗಿಯಾದವನು ಕಾಮವನ್ನು ಅಂಗ ದಲ್ಲಿ ಮರೆಯಬೇಕು. ಕ್ರೋಧವನ್ನು ಕರಣಂಗಳಲ್ಲಿ ಮುಚ್ಚಿಡಬೇಕು. ಲೋಭ ವನ್ನು ಸರ್ವೇಂದ್ರಿಯಂಗಳಲ್ಲಿರುವ ಲಿಂಗಗಳ ನಿಜದಲ್ಲಿ ಅಡಗಿಸಬೇಕು. ಮೋಹಾದಿಗುಣಂಗಳನ್ನು ಜಂಗಮಲಿಂಗದಲ್ಲಿರುವ ಸ್ವಯ, ಚರ, ಪರ ಇವು ಗಳ ನಡೆಯಲ್ಲಿ ಮರೆಯಿಸಬೇಕು ಎಂದು ಹೇಳಿದ್ದಾನೆ.

೫೬. **ವಚನಃ—** ಘಟದ ಮಧ್ಯದಲ್ಲಿ ನಿಂದವನ ಆತ್ಮನ ಚಿತ್ತದಲ್ಲಿ ಅರಿದವನ ಅಲ್ಲ ಅಹುದೆಂಬ ಗೆಲ್ಲ ಸೋಲಕ್ಕೆ ಹಾರದವನ ಎಲ್ಲ ಜೀವಂಗ ಳಲ್ಲಿ ದಯೆಯುಳ್ಳವನಾತನೆಲ್ಲಿಯೂ ಸುಖಿ ಎಂದನಂಬಿಗರಚೌಡಯ್ಯ.

**ಭಾವಃ—** ಶರೀರದ ಮಧ್ಯದಲ್ಲಿ ದಹರಾಕಾಶವು ಇದ್ದು ಅಲ್ಲಿ ಪ್ರಾಣ ಲಿಂಗವಿದೆ. ಅದರಲ್ಲಿ ನಿಲ್ಲಬೇಕು. ಆತ್ಮನನ್ನು ಚಿತ್ತದಲ್ಲಿ ಅರಿಯಬೇಕು. ಅಲ್ಲ ಅಹುದು ಎಂಬ ವಾದದಲ್ಲಿ ಸಿಕ್ಕಬಾರದು. ಎಲ್ಲ ಜೀವಿಗಳಲ್ಲಿ ದಯಾ ಭಾವವುಳ್ಳವನಾಗಿರಬೇಕು. ಇಂಥವನು ಎಲ್ಲಿಹೋದರೂ ಸುಖಿಯು ಎಂಬ ಭಾವವಿದೆ.

## ಲಿಂಗಪೂಜೆಯ ರೀತಿ.

**ವಿವರಣೆಃ—** ಪರಮಾತ್ಮನು ಎಂದರೇನು, ಅವನ ಜ್ಞಾನವೆಂದರೇನು, ಅವನು ಎಲ್ಲಿ ಇದ್ದಾನೆ, ಅವನನ್ನು ತಿಳಿಯುವ ಬಗೆ ಹೇಗೆ ಮತ್ತು ತಾನು ಹೇಗೆ ಮುಕ್ತನು ಆಗುವದು ಎಂಬುದನ್ನು ವಚನಕಾರನು ವಿವರಿಸಿ ಪರಮಾ ತ್ಮನ ಅಥವಾ ಲಿಂಗದ ಪೂಜೆ ಎಂದರೇನು ಎಂಬುದನ್ನು ಕೆಳಗೆ ಕಾಣಿಸಿದ ವಚನಗಳಲ್ಲಿ ವಿವರಿಸಿರುವನು.

ವೀರಶೈವರಲ್ಲಿ ಲಿಂಗಪೂಜೆ ಎಂದರೆ ಬಾಹ್ಯದಲ್ಲಿ ಆಚರಿಸುವ ಒಂದು ಬಗೆಯ ವಿಧಿ ಎಂದು ತಿಳಿಯಕೂಡದು. ಅದಕ್ಕೂ ಮನಸ್ಸಿಗೂ ನಡತೆಗೂ ಅತ್ಯಂತ ಸಂಬಂಧವಿದೆ. ಲಿಂಗಪೂಜೆಯಿಂದ ಮನಸ್ಸು ದೃಢಪಡುತ್ತಿದೆ. ನೈತಿಕಾಚರಣೆಗಳು ಉನ್ನತ ಸ್ಥಿತಿಯನ್ನು ಹೊಂದುತ್ತವೆ. ಮತ್ತು ಈ ಮೇರೆಗೆ ಅವನಲ್ಲಿ ಶುದ್ಧ ವರ್ತನೆಯು ತೋರಿದ ಹಾಗೆ ಲಿಂಗದ ಪ್ರಕಾಶವು ಅವ ನಲ್ಲಿ ಹೆಚ್ಚೆಚ್ಚಾಗಿ ಒಡಮೂಡುತ್ತ ಹೋಗುತ್ತದೆ. ಈ ಸ್ಥಿತಿಯು ಪ್ರಬಲ

ವಾಗುತ್ತ ಹೋದಹಾಗೆ ಅವನ ಲಿಂಗದ ಪೂಜೆಯ ರೀತಿಯಾದರೂ ಬೇರೆ ತೆರನಾಗುತ್ತ ಹೋಗುತ್ತದೆ. ಅಂದರೆ ಅದು ಮಾನಸ ಪೂಜೆಯ ತೆರನಾಗುವದು. ಈ ವಿವರಣೆ ಮುಂದಿನ ವಚನಗಳಲ್ಲಿ ಬಂದಿರುತ್ತದೆ.

**೫೭. ವಚನ:—** ಈರೇಳು ಭುವನವನೊಳಕೊಂಡ ಮಹಾಘನ ಲಿಂಗವು ಶಿವಭಕ್ತನ ಕರಸ್ಥಲದಾಯತಕ್ಕೆ ಬಂದು ಪೂಜೆಗೊಂಬ ಪರಿಯನೋಡಾ. ಅಪ್ರಮಾಣ ಅಗೋಚರವಾದ ಲಿಂಗದಲ್ಲಿ ಸಂಗವ ಬಲ್ಲಾತನೆ ಸದಾಚಾರ ಸದ್ಭಕ್ತನು. ಹೀಗಲ್ಲದೆ ಹಣದಾಸೆಗೆ ಹಂಗಿಗನಾಗಿ ಜಿಹ್ವಾ ಲಂಪಟಕ್ಕೆ ಅನಾಚಾರದಲ್ಲಿ ಉದರವ ಹೊರೆದು ಬದುಕುವಂತಹ ಭಂಡರು ಭಕ್ತರಾದವರುಂಟೇ ಹೇಳಯ್ಯ? ಅಂತಹ ಅನಾಚಾರಿ ಶಿವದ್ರೋಹಿಗಳ ಮುಖವ ನೋಡಲಾಗದು ಅದೆಂತೆಂದೊಡೆ ಕತ್ತೆ ಭಕ್ತನಾದಡೆ ಕಿಸುಕುಳವ ತಿಂಬುವುದ ಮಾಣ್ಬುದೆ? ಹಂದೆ ಭಕ್ತನಾದಡೆ ಹಡಿಕೆಗೆ ಹರಿವುದು ಮಾಣ್ಬುದೆ? ಶುನಿಕಂಗೆ ಪಂಚಾಮೃತವ ನೀಡಲು ಅಡಗ ತಿಂಬುದ ಮಾಣ್ಬುದೆ? ಇಂತೀ ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ ಮರಳಿ ತನ್ನ ಜಾತಿಯವರ ಕೂಡಿದರೆ, ಆ ಕತ್ತೆ ಹಂದಿ ಬೆಕ್ಕು ಶುನಕಗಿಂದತತ್ತ ಕಾಣಿರೋ, ಚನ್ನ ಬೆಟ್ಟವನೇರಿ ಕಣ್ಣುಗಾಣದಲ್ಪನಂತೆ ಗಣಿಯನೇರಿದ ಡೊಂಬ ಮೈಮರೆದಿಪ್ಪಂತೆ, ಅಂಕವನೇರಿದ ಬಂಟ ಕೈಮರೆದಿಪ್ಪಂತೆ ಇಂತಿವರು ಮಾಡುವ ಭಕ್ತಿ ಎಲ್ಲವು ನಡುನೀರೊಳು ಹೋಗುವ ಹರಿಗೋಲು ಹೊಡೆಗೆಡೆದಂತಾಯಿತ್ತು ಎಂದಾತ ಅಂಬಿಗರ ಚೌಡಯ್ಯ.

**ಭಾವ:—** ಲಿಂಗವೆಂಬುದು ೧೪ ಭುವನಗಳನ್ನು ತುಂಬಿಕೊಂಡದ್ದಿರುತ್ತದೆ. ಇಂಥ ವಿಸ್ತಾರವಾದ ಲಿಂಗವು ಕರಸ್ಥಲಕ್ಕೆ ಬರುವದು ಹೇಗೆ ಮತ್ತು ಅದರ ಪೂಜೆ ಮಾಡುವದಾದರೂ ಹೇಗೆ ಎಂಬುದನ್ನು ವಚನಕಾರನು ಇಲ್ಲಿ ಹೇಳಿರುವನು. ಭಕ್ತನು ಯಾವನಿರುವನೋ ಅವನ ಕರಸ್ಥಲದಲ್ಲಿ ಮಾತ್ರ ಲಿಂಗವು ಬರುವದು ಶಕ್ಯವೆಂದು ಇಲ್ಲಿ ನಿರ್ದೇಶಿಸಿ, ವಚನಕಾರನು ಭಕ್ತನು ಹೇಗೆ ಇರಬೇಕೆಂಬುದನ್ನು ಹೇಳಿರುವನು. ಅವನು ಅನ್ನುವದೇನೆಂದರೆ, ಮೇರೆ ಇಲ್ಲದಂಥ ಮತ್ತು ಕಣ್ಣಿಗೆ ಕಾಣದಂಥ ಲಿಂಗದಲ್ಲಿ ಕೂಡ ಬಲ್ಲವನೇ ಸದಾಚಾರಿಯಾದ ಸದ್ಭಕ್ತನು. ಇಂಥವನು ಹಣದಾಸೆಯಿಂದ ದೂರಿರುವನು. ನಾಲಿಗೆಯ ರುಚಿಗೆ ಎಳಸನು. ದುಷ್ಟ ಕೃತಿಗಳನ್ನು ಮಾಡಿ ಹೊಟ್ಟೆಯನ್ನು ಹೊರೆಯನು. ಹೀಗೆ ವರ್ತಿಸುವಾತನೇ ನಿಜಭಕ್ತನು. ಆದರೆ ಈ ಪ್ರಕಾರ ವರ್ತಿಸದೆ, ಬರೇ ಬಾಹ್ಯ, ಚಿನ್ಹಗಳನ್ನು ಯಾವನು ಧರಿಸುತ್ತಾನೋ ಅವನು

ಭಕ್ತನೆನಿಸಿಕೊಳ್ಳಲಾರನು ಕತ್ತೆಗೆ ಭಕ್ತನ ವೇಷವನ್ನು ಹಾಕಿದರೆ ಅದು ಹೊಲಸು ಮತ್ತು ಕಸವನ್ನು ತಿನ್ನದೆ ಬಿಡದು. ಹಂದಿಯು ಭಕ್ತನಾದರೆ ಕಶ್ಮಲವನ್ನು ತಿನ್ನುವದನ್ನು ಬಿಡದು. ನಾಯಿಗೆ ಪಂಚಾಮೃತವನ್ನು ಉಣ್ಣಿಸಿದರೆ ಅದು ಮಾಂಸಾಹಾರಕ್ಕೆ ಹರಿಯದೆ ಇರದು. ಭಕ್ತನು ಕೆಟ್ಟ ವೃತ್ತಿಯಿಂದ ವರ್ತಿಸಿದರೆ ಮೇಲ್ಕಂಡ ಕೀಳ ಪ್ರಾಣಿಗಳಗಿಂತಲೂ ಕಡೆಯನು. ಇವನಿಗೆ ಲಿಂಗವಿರಲಾರದು. ಈ ಶ್ರೇಷ್ಠ ಚಿನ್ಹವನ್ನು ಧಾರಣ ಮಾಡಿ ಯಾವನು ದುರ್ವರ್ತನೆಯಿಂದ ನಡೆಯುತ್ತಾನೋ ಅವನು ಬಂಗಾರದ ಬೆಟ್ಟವನ್ನೇರಿ ಅದನ್ನು ಕಾಣದ ಕುರುಡನಂತೆ ಅತ್ಯಂತ ಎತ್ತರವಾದ ಗಣೆಯನ್ನೇರಿ ಡೊಂಬನು ಅಲ್ಲಿ ಮೈಮರೆದಂತೆ, ರಣರಂಗವನ್ನು ಹೊಕ್ಕ ಸಿಪಾಯಿಯು ಅಲ್ಲಿ ತನ್ನ ಕೈಮರೆದಂತೆ ಸರಿ. ಅಂದರೆ ಇವರು ನಾಶವಾಗುವರು ಇವರು ಮಾಡುವಂಥ ಭಕ್ತಿಯು ನಡುನೀರಿನಲ್ಲಿ ಹರಿಗೋಲು ಬುಡಮೇಲು ಮಾಡಿ ಮುಳುಗಿಸಿದಂತೆ ಆಗುವದು. ಭಕ್ತಿ ಇಲ್ಲದೆ ಮಾಡುವ ಪೂಜೆಯು ವ್ಯರ್ಥವೆಂದು ವಚನಕಾರನ ಭಾವವು.

೫೮. **ವಚನ:**— ಆರಕ್ಯಾರು ಬಿತ್ತಿದ ಗಿಡದ ಹೂವನೇ ಕೊಯ್ದು, ಆಊರಲ್ಲಿ ಕಟ್ಟಿದ ನೀರನೆ ತಂದು, ನಾಡೆಲ್ಲ ನೋಡಲೆಂದು ಪೂಜಿಸುವ ಪುಣ್ಯ ಆ ಹೂವಿಗೋ ಆ ನೀರಿಗೋ ನಾಡೆಲ್ಲ ನೋಡಲೆಂದು ಪೂಜಿಸಿದಾತಗೋ? ಇದ ನಾನರಿಯೆ. ನೀವು ಬಲ್ಲಡೆ ಹೇಳೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಸಾಮಾನ್ಯ ಜನರು ಲಿಂಗಪೂಜೆಯ ಮರ್ಮವನ್ನು ಏನೂ ತಿಳಿಯದೆ, ಅದನ್ನು ಅವರು ಮಾಡುವ ರೀತಿಯನ್ನು ವಿವರಿಸಿ ಅವರ ಚೇಷ್ಟೆಯನ್ನು ಇಲ್ಲಿ ಮಾಡಿರುವನು. ಜನರು ತಾವು ಏನೂ ಶ್ರಮಪಡದೆ ಯಾರೋ ಬಿತ್ತಿದ ಗಿಡದ ಹೂವನ್ನು ತಂದು ಲಿಂಗಕ್ಕೆ ಏರಿಸುವರು. ಎಲ್ಲರೂ ಕೂಡಿ ಕಟ್ಟಿಸಿದ ಕೆರೆಯ ನೀರು ತನ್ನದೆಂದು ಅಂದುಕೊಂಡು ಅದರಿಂದ ಲಿಂಗಕ್ಕೆ ಮಜ್ಜನವೆರೆಯುವರು. ಹೀಗೆ ಅವರು ಜನರೆಲ್ಲರೂ ನೋಡಲೆಂದು ಬಾಹ್ಯ ಅಟ್ಟಹಾಸದಿಂದ ಪೂಜೆಯನ್ನು ಮಾಡುತ್ತಿದ್ದು ಇಂಥವರ ಪೂಜೆಯ ಫಲವು ಅವರಿಗೆ ಬರುತ್ತದೋ ಅಥವಾ ಆ ಹೂವಿಗೆ ಬರುತ್ತದೋ ಅಥವಾ ನೀರಿಗೆ ಬರುತ್ತದೋ ನನಗೆ ತಿಳಿಯದು. ನಿಮಗೆ ಗೊತ್ತಿದ್ದರೆ ಹೇಳಿರಿ ಎಂದು ಅಂದಿರುವನು.

೪೯. **ವಚನಃ—** ಅರ್ಚನೆಯ ಮಾಡುವಲ್ಲಿ ನೇಪವರತಿರಬೇಕು. ಪೂಜೆಯ ಮಾಡುವಲ್ಲಿ ಪುಣ್ಯಮೂರ್ತಿಯಾಗಿರಬೇಕು. ಕೊಳುಕೊಡೆಯಲ್ಲಿ ಭೂತಹಿತನಾಗಿರಬೇಕು. ಇಂತೀ ಸಡಗರಿಸಿಕೊಂಡಿಪ್ಪಾತನಡಿಗೆರಗುವೆನೆಂದಾತ ಅಂಬಿಗರಚೌಡಯ್ಯ.

**ಭಾವಃ—** ವಚನಕಾರನು ಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ಇಲ್ಲಿ ವಿವರಿಸಿರುವನು. ಪೂಜೆ ಮಾಡುವ ಕಾಲಕ್ಕೆ ಬಾಹ್ಯ ಆಡಂಬರಗಳು ಏನೂ ಇರಬಾರದು. ಅವು ಹೊರಟು ಹೋಗಿರಬೇಕು. ಹಾಗೆಯೆ ಅವನು ಪುಣ್ಯ ಮೂರ್ತಿಯಾಗಿರಬೇಕು. ಎಂದರೆ ಸತ್ಕೃತ್ಯಗಳನ್ನು ಮಾಡುತ್ತ ಅವುಗಳ ಉಚ್ಚ ವಾತಾವರಣವಲ್ಲಿ ಮುಳುಗಿರಬೇಕು. ಕೊಡಕೊಳ್ಳುವ ವ್ಯವಹಾರದಲ್ಲಿ ಜಗತ್ತಿನ ಕೂಡ ಮಮತೆಯಿಂದಿದ್ದು ಎಲ್ಲರಿಗೂ ಹಿತವನ್ನು ಮಾಡುತ್ತಿರಬೇಕು. ಈ ಪ್ರಕಾರ ವರ್ತಿಸುವಂಥವನ ಪಾದಕ್ಕೆ ನಾನು ಸಾಷ್ಟಾಂಗ ನಮಸ್ಕಾರ ಮಾಡುತ್ತೇನೆಂದು ಅಂದಿರುವನು.

೬೦. **ವಚನಃ—** ಸಂದೇಹ ಮಾಡುವಲ್ಲಿ ಮಾತೇ ಸೂತಕವಾಗಿ, ಅದೇತರಿಂದ ಒದಗಿಹ ಶಿಲೆಯ ಪ್ರತಿಷ್ಠೆಯ ಮಾಡಿ, ತನ್ನ ಒಲವರ ವಿಶ್ವಾಸದಿಂದ ಕುರುಹ ಅರಿವುದು ಶಿಲೆಯೋ ಮನವೋ ಎಂದನಂಬಿಗಚೌಡಯ್ಯ.

**ಭಾವಃ—** ಲಿಂಗಪೂಜೆಯ ಮಾಡುವಲ್ಲಿ ವಿಶ್ವಾಸವಿರಬೇಕೆಂದು ವಚನಕಾರನು ಇದರಲ್ಲಿ ಹೇಳಿರುವನು. ಈ ವಿಶ್ವಾಸದಿಂದ ಮನಸ್ಸು ದೃಢಪಡುವದು. ಮತ್ತು ಲಿಂಗವೆಂಬ ಕುರುಹಿನ ಜ್ಞಾನವಾಗುವದು. ಹೀಗೆ ಜ್ಞಾನವಾಗುವದು ಆ ಶಿಲೆಯ ಮೂಲಕವಲ್ಲ. ಆದರೆ ತನ್ನ ಮನಸ್ಸಿನ ಮೂಲಕವಾಗಿ ಎಂದು ವಚನಕಾರನು ಇಲ್ಲಿ ಹೇಳಿರುವನು. ಮನಸ್ಸಿನಲ್ಲಿ ಸಂದೇಹವಿಟ್ಟುಕೊಂಡು ಮಾತಾಡಿದಲ್ಲಿ ಆ ಮಾತು ಸೂತಕವೆನಿಸುವದು. ಎಂದರೆ ಶುದ್ಧವಾದುದಲ್ಲ. ಅದೇ ಮೇರೆಗೆ ಸರಿಯಾದ ರೀತಿಯಿಂದ ಶಿಲೆ ಪ್ರತಿಷ್ಠೆ ಮಾಡಿದ ಬಳಿಕ ಅದು ಶಿಲೆಯಲ್ಲ, ಅದು ಪರಮಾತ್ಮನ ಕುರುಹು ಎಂದು ತಿಳಿದು ಪೂಜಿಸಿದಲ್ಲಿ ಭಕ್ತನಲ್ಲಿ ಯಾವ ಪರಮಾತ್ಮನ ಜ್ಞಾನವು ಉದಯಿಸುವದೋ ಆ ಜ್ಞಾನವು ಆ ಶಿಲೆಯ ಮೂಲಕವಲ್ಲ. ಅದು ಮನಸ್ಸಿನ ಮೂಲಕವೆಂದು ವಚನಕಾರನು ಇಲ್ಲಿ ಹೇಳಿರುವನು.

೬೧. **ವಚನಃ—** ಅಯ್ಯಾ ಪಾಷಾಣಕ್ಕೆ ಗಿರಿ ಸವೆದು, ಪತ್ರೆಗೆ ಗಿಡ ಸವೆದು, ಸಪ್ತಸಾಗರಂಗಳು ಮಜ್ಜನಕ್ಕೆ ಸವೆದು, ಅಗ್ನಿ ಧೂಪಕ್ಕೆ ಸವೆದು, ವಾಯು ಕಂಪಿತಕ್ಕೆ ಸವೆದು, ಉಘೆ ಚಾಂಗು ಭಲಾ ಎಂಬ ಸದ್ದು ಸವೆದು,

ಎನಗಿನ್ನೆಂತೋ ಎನಗಿನ್ನೆಂತೋ? ಶರಣರ ಮಹಾಮನೆಯಲ್ಲಿ ಅಮರಗಣಂಗಳು ಲಿಂಗಾರ್ಚನೆಯ ಮಾಡುತ್ತ ಇದ್ದಾರೆ. ಅವರ ಪಾದುಕೆಯ ಕಾಟಿದ್ದೆನೆಂದಾತ ಅಂಬಿಗರಚೌಡಯ್ಯ.

**ಅರ್ಥ:**—ಇಲ್ಲಿ ಬಾಹ್ಯ ಆಡಂಬರ ಮಾಡುತ್ತ ಪೂಜೆ ಮಾಡುವವರನ್ನು ಉದ್ದೇಶಿಸಿ ವಚನಕಾರನು ಚೇಷ್ಟೆಯಿಂದ ಹೇಳಿರುವನು. ಏನೆಂದರೆ, ಜನರು ಅಂಗದ ಮೇಲೆ ಲಿಂಗಧಾರಣ ಮಾಡುವ ಕುರಿತು ಗುಡ್ಡ ಗುಡ್ಡಗಳನ್ನು ಅಗಿದು ಕಲ್ಲು ತಂದು ಅವುಗಳಿಂದ ಲಿಂಗಗಳನ್ನು ಮಾಡಿ ಆ ಗುಡ್ಡಗಳನ್ನೆಲ್ಲ ಸವೆಯಿಸಿ ಬಿಟ್ಟರು. ಹೀಗೆ ಲಿಂಗ ಧಾರಣವಾದ ಬಳಿಕ ಅವರು ಲಿಂಗಪೂಜೆ ಮಾಡುವಲ್ಲಿ ಪತ್ರೆಗಳನ್ನು ಹರಿಹರಿದು ತಂದದ್ದರಿಂದ ಗಿಡಗಳೆಲ್ಲವೂ ನಾಶವಾಗಿ ಹೋದವು. ಅವರು ಲಿಂಗಕ್ಕೆ ಮಜ್ಜನವನ್ನು ಎರೆದು ಎರೆದು ಏಳು ಸಮುದ್ರಗಳು ಬರಿದಾಗಿ ಹೋದವು. ಲಿಂಗಕ್ಕೆ ಧೂಪವನ್ನು ಅರ್ಪಿಸಿ ಅಗ್ನಿಯು ಸಹ ಬರಿದಾಯಿತು. ಇಂಥ ಪೂಜಾಕಾರ್ಯಗಳಲ್ಲಿ ಓಡಾಟಕ್ಕೆ ವಾಯು ಸಹ ನಿಂತು ಹೋಯಿತು. ಲಿಂಗದ ಹೊಗಳಿಕೆಯ ಶಬ್ದಗಳನ್ನು ಉಚ್ಚರಿಸಿ ಉಚ್ಚರಿಸಿ ಸಪ್ಪಳವು ಸಹ ಆಗುವದು ನಿಂತು ಹೋಯಿತು. ಜನರು ಈ ಪ್ರಕಾರ ಲಿಂಗ ಪೂಜೆಮಾಡುತ್ತಿರುವಲ್ಲಿ ನನಗೇನೂ ಲಿಂಗಪೂಜೆಯ ಸಾಮಗ್ರಿಯು ಉಳಿಯಲಿಲ್ಲೆಂದು ವಚನಕಾರನು ಇಲ್ಲಿ ದುಃಖಿಸುತ್ತಾನೆ. ಈ ಸ್ಥಿತಿಯು ಒದಗಿದ ಬಳಿಕ ನಾನು ಮಾಡುವ ಪೂಜೆ ಯಾವುದೆಂದರೆ ಶರಣರ ಮನೆಯಲ್ಲಿ ಲಿಂಗಾರ್ಚನೆಯು ನಡೆಯುವದುಂಟು. ಅಲ್ಲಿ ಅವರ ಪಾದುಕೆಗಳನ್ನು ಕಾಯುತ್ತ ಇರುವದು ಮಾತ್ರ ಎಂದು ವಚನಕಾರನು ಹೇಳಿದ್ದಾನೆ. ಎಂದರೆ ವಿನಯಭಾವದಿಂದ ಶಿವಶರಣರ ಮನೆಯಲ್ಲಿದ್ದುಕೊಂಡು ಅವರಲ್ಲಿ ವಿಶ್ವಾಸವನ್ನಿಟ್ಟು ವರ್ತಿಸುವದೇ ನಿಜವಾದ ಲಿಂಗ ಪೂಜೆಯೆಂದು ಆತನ ಭಾವವು.

---

# ಮಹೇಶ್ವರ ಸ್ಥಲ.

## ದೃಢಮನಸ್ಸಿನಿಂದ ನಿರಂತರ ಶ್ರಮಮಾಡು.

೬೨. **ವಚನ:**— ವೀರಂಗೆ ರಣಾಗ್ರಕದನ ಭೋರೆಂದು ತಟ್ಟಿದಲ್ಲಿ ದೂರಲಿಂದೆಸೆವ ಒಂದಂಬಿನಲ್ಲಿ ಸೇರಿಬಂದಲ್ಲಿ ಹೊಯ್ವ ಬಿಲ್ಲಿನಲ್ಲಿ ಅವು ಮೀರಿ ಬಂದಲ್ಲಿ ಇರಿವ ಕಠಾರಿಯಲ್ಲಿ, ಅದು ತಪ್ಪಿದ್ದಕ್ಕೆ ತೆಕ್ಕೆಯಲ್ಲಿ ಪಿಡಿವ ಯುದ್ಧದಲ್ಲಿ, ಬಿದ್ದಲ್ಲಿ ಕಡಿವ ಬಾಯಲ್ಲಿ, ಇಂತಿವು ತನ್ನ ಪ್ರಾಣಕ್ಕೆ ಬಂದಲ್ಲಿ

ತನ್ನ ಧೈರ್ಯವ ಮರೆಯಲಿಲ್ಲ. ಹೀಗಿರಲಿಲ್ಲವೇ ಭಕ್ತನ ಗುಣ? ಹೊನ್ನು, ಹೆಣ್ಣು, ಮಣ್ಣುಳ್ಳ ಕಾಲಕ್ಕೆ ಪನ್ನಂಗಧರನ ಶರಣರಿಗೆ ಅನ್ನೋದಕ ವಸ್ತ್ರಗಳ ಉಪಚಾರವ ಮಾಡುವುದು. ಅದು ತಪ್ಪಿದ್ದಕ್ಕೆ ಸೀಡಿ ಮಾಡುವ ಭಕ್ತರ ಮನೆಯನೊಡಗೊಂಡು ಹೋಗಿ ತೋರುವುದು. ಅದಾಗದಿರ್ದೊಡೆ ಹರಶರಣರ ಕಮಂಡಲವಕೊಂಡು ಹೋಗಿ ಮಡುವಿನ ಅಗ್ಗಣಿಯ ತಂದು ಪಾದಾರ್ಚನೆಯ ಮಾಡುವುದು. ಅದಾಗದಿರ್ದೊಡೆ ಹರಶರಣರಿಗೆ ಇದಿರೆದ್ದು ಹೋಗಿ ನಮಸ್ಕರಿಸುವುದು. ಇಷ್ಟರೊಳಗೊಂದು ಗುಣವಿಲ್ಲದಿರ್ದೊಡೆ ಅವ ಭಕ್ತನಲ್ಲ. ಅವ ಹೊಲೆಯನೆಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವ:—** ಭಕ್ತನು ಹೇಗೆ ಇರಬೇಕೆಂಬುದನ್ನು ವಚನಕಾರನು ಇಲ್ಲಿ ಒಂದು ಉದಾಹರಣೆಯನ್ನು ಕೊಟ್ಟು ಅತಿ ಸ್ಪಷ್ಟ ರೀತಿಯಿಂದ ವಿವರಿಸಿರುವನು. ಅವನು ಒಬ್ಬ ಶೂರ ಪುರುಷನಂತೆ ಇರಬೇಕೆಂದು ಹೇಳಿರುವನು. ಈ ಶೂರಪುರುಷನು ರಣಾಂಗಣದಲ್ಲಿ ವೈರಿಗಳು ಇದಿರಾದರೆ ಅವರು ದೂರದಲ್ಲಿರುವ ವರೆಗೆ ಬಾಣವನ್ನು ಎಸೆಯುವನು ಅವರು ಸಮೀಪಕ್ಕೆ ಬಂದರೆ ಬಿಲ್ಲಿನಿಂದ ಅವರನ್ನು ಹೊಡೆಯುವನು. ಅದಕ್ಕೂ ಮೀರಿದರೆ, ಕಠಾರಿಯಿಂದ ತಿವಿಯುವನು. ಇದಕ್ಕೂ ಮೀರಿದಲ್ಲಿ ತೆಕ್ಕೆಯಲ್ಲಿ ಹಿಡಿದು ಅವರ ಕೂಡ ಹೋರಾಡುವನು. ನೆಲಕ್ಕೆ ಬಿದ್ದಲ್ಲಿ ಹಲ್ಲಿನಿಂದ ಕಡಿಯುವನು. ಈ ಪ್ರಕಾರ ಅವನು ಧೈರ್ಯಬಿಡದೆ, ತಾನು ಸಾಯುವವರೆಗೂ ಕಾದಾಡುವನು. ಭಕ್ತನಾದವನು ಹೀಗೆಯೇ ವರ್ತಿಸಬೇಕು. ಇದಕ್ಕೆ ಮತ್ತೊಂದು ಉದಾಹರಣೆಯನ್ನು ಕೊಟ್ಟು ವಿವರಿಸಿರುವನು. ಭಕ್ತನು ತನಗೆ ಶ್ರೀಮಂತಿಕೆಯು ಇರುವ ವರೆಗೆ ದಾನ ಧರ್ಮಮಾಡಬೇಕು. ಶ್ರೀಮಂತಿಕೆಯು ತಪ್ಪಿ ಹೋದರೆ, ನೀಡಿ ಮಾಡುವ ಭಕ್ತರ ಮನೆಯನ್ನು ತೋರಿಸಬೇಕು. ಇದೂ ಆಗದಿದ್ದರೆ ಶಿವಶರಣರ ಕಮಂಡಲವನ್ನು ತೆಗೆದುಕೊಂಡು ಹೋಗಿ ಅವರ ಪಾದಾರ್ಚನೆಗೆ ನೀರು ತಂದು ಕೊಡಬೇಕು. ಇದೂ ಆಗದಿದ್ದರೆ ಅವರಿಗೆ ಎದ್ದು ನಮಸ್ಕರಿಸಬೇಕು. ಇಂಥ ಗುಣವು ಭಕ್ತನಲ್ಲಿ ಇರಬೇಕು. ಈ ಗುಣವಿಲ್ಲದಿದ್ದರೆ ಅವನು ಹೊಲೆಯನೆಂದು ವಚನಕಾರನು ಅಂದಿರುವನು.

———

**೬೩. ವಚನ:—** ದೃಷ್ಟವ ಕಂಡುದಕ್ಕೆ ಮತ್ತೆ ಮೂದಲೆ ಉಂಟೇ? ವ್ರತಗೆಟ್ಟವಂಗೆ ಆಚಾರಭ್ರಷ್ಟಂಗೆ ಪರಸತಿ ಪರಧನ ದುರ್ಭಿಕ್ಷಂಗೆ ಪರ ಅಸುರವ ನರಿಯದ ಪಾತಕಂಗೆ ಅಘೋರ ನರಕಕ್ಕೆ ಕಡೆಇಲ್ಲ ಎಂದನಂಬಿಗಚೌಡಯ್ಯ.

R. B. N. 2554

From
*Shivanubhava*
*Office*
**BIJAPUR**

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
**ಮು— ಬನ್ನಟ್ಟಿ**
ತಾ— ಜಮಖಂಡಿ

---


ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ
ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ.
೧೩೬೪ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ
ಅಲ್ಲಿಯೇ ಪ್ರಸಿದ್ಧಿಸಿದರು.

ಸಂಚಿಕೆ ೧೮ ಸಂಪುಟ ೩೩

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಅಕ್ಟೋಬರ ೧೯೫೯.

# ವಿಷಯಾನುಕ್ರಮಣಿಕೆ.





————



# ಬ ಸ ವ.

(ಲೇಖಕ:— ಈಶ್ವರ ಸಣಕಲ್ಲ ವಿಜಾಪೂರ.)

---

ಹೃತ್ಕಮಲ ಭಕ್ತಿ ಮಕರಂದರಸಪೂರದಲಿ
ಆತ್ಮ ಸಂಶೋಧನಾಶಕ್ತಿಯೊಡಮೂಡಿದಳು
ಮಾಘನದ ಮುಂದೆ ಮಾನವನಲ್ಪತೆಯ ಬಗೆದು
ಆ ಘನದಮೀರ್ವ ಘನಘನ ಮನವ ಸೂಡಿದಳು
ಅಸಮತೆಯ ವಿಷಮತೆಯ ದಾರಿದ್ರ್ಯ ಭಾರದಲಿ
ಒರಲುವರ ಈ ಮತೆಯಲಿ ಮಮತೆಯಲಿ ತೀಡಿದಳು
ನಡೆ ನಡೆಗೆ ನುಡಿಯರಳೆ ಮಧುರಸವ ಮೊಗೆ ಮೊಗೆದು
ದಿಗ್ಭಿತ್ತಿಗಳ ಬಳಿದು ಮುಗಿಲೊಳೆರಚಾಡಿದಳು
ಅನುಭಾವ-ಸ್ವಾನುಭಾವ-ಕ್ರಾಂತಿ ಕ್ಷೇತ್ರತ್ರಯದಿ
ಇಹಲೋಕದೊಳೆ ದಿವ್ಯನಾಕಸೃಷ್ಟಿಯು ಜಯದಿ
ಉಕ್ಕಾಧರೂ ಉಕ್ಕಿ, ಬೀಗಿರ್ದರೂ ಬಾಗಿ

ಲಿಂಗಾಂಗ ಸಮರಸ್ಯದೊಳಾತ್ಮವನೆ ತೂಗಿ
ಬೆಳೆದಿಹಳು ನಿತ್ಯ ವಿಶ್ವಾಕಾಶವನೆ ಮೀರಿ
"ಬಸವ ಬಸವಾ''ಎಂಬ ವಾಗ್ದೇಹದಲಿ ತೂರಿ
ಇವಳ ಬ್ರಹ್ಮಸ್ಪರ್ಶದಲಿ ಜಾತಿಭೂತಗಳು
ಕಿತ್ತೆದ್ದು ವೈಗಳೆದ ವಾಚಾರ ಪ್ರೇತಗಳು
ಇವಳ ಮೃತಸ್ಪರ್ಶದಿ ಮಿಸುಕಿ ಎಸಿದಾಡಿದವು
ಕಾಯಕಂಗಳು ಕುಸುರುಕುಸುರಾಗಿ ಮೂಡಿದವು
ಉತ್ತುಂಗ ಶೃಂಗದಲಿ ಗೀರ್ವಾಣ ವಾಣಿಯಲಿ
ಆಕಾಶ ನೀರವತೆಯನು ತಾಳ್ದ ತತ್ವಗಳು
ಇವರ ಬಾಯ್ ಕೆಚ್ಚಿನಲಿ ತಿಳಿಯ ಮೆಚ್ಚುಚ್ಚಿನಲಿ
ಪರಿಣಮಿಸಿದವು ಲೋಕ ಕೋಟಿ ಹೃತ್ ಸತ್ವಗಳು
ಓಂಕಾರ ಪ್ರಣವಮದು ನರನರಗಳಲಿ ಮಿಡಿದು
ಗುಡುಗಾಡಿ ಮೂಲೋಕಗಳ ಸೂರೆ ಗೊಂಡಿಹುದು
ರೋಮ ರೋಮಂಗಳಲಿ ನಯನ ಕೋಟಿಗೆಳೊಡೆದು
ಈರೇಳು ಲೋಕಗಳ ಕಬಳಿಸುವ ದೇದಿಪ್ಯ
ಪ್ರಭೆಯಲ್ಲಿ ಮಿಂದಿಹವು ಆನಂದವುಂಡಿಹುದು
ಆದರ್ಶಕೋ ಗೆಳೆಯ ಬಾ ಬಸವಸಾಮಿಪ್ಯ.

# ಬಸವಣ್ಣನವರ ಆರ್ಥಿಕ ನೀತಿ.

(ಲೇಖಕರುಃ— ಮ, ಮಲ್ಲಪ್ಪ ಜ್ಞಾನಮಂದಿರ ಹಲಗೂರು.)

ನಾಡಿನ ಆರ್ಥಿಕ ನೀತಿಯ ಮೇಲೆ ನಾಡಿನ ಉನ್ನತ್ಯಾವನತಿಯು ಅವಲಂಬಿತವಾಗಿರುತ್ತದೆ. ನಾಡಿನ ಉದ್ಯೋಗ ಬೇಸಾಯಗಳ ಮೇಲೆ ಆರ್ಥಿಕ ಸಮಸ್ಯೆಯು ನಿಂತಿರುತ್ತದೆ.

"ಅರ್ಥಸಂಪತ್ತು ನಮ್ಮ ಜೀವನದ ತಳಹದಿ. ಅದರ ಮೇಲೆ ನಾವು ಕಟ್ಟಬೇಕಾದದ್ದು ನಮ್ಮ ಸಂಸ್ಕೃತಿಯಭವನ. ನಮ್ಮ ಮನಸ್ಸಿನ ಮತ್ತು ಹೃದಯದ ಬೆಳವಣಿಗೆ." —ಶ್ರೀ ಜಯಚಾಮರಾಜೇಂದ್ರ ಒಡೆಯರ್.

ಯಾವ ನಾಡು ಬೇಸಾಯದಲ್ಲಿ ಅಭಿವೃದ್ಧಿ ಪಡೆದು, ಉದ್ಯೋಗದಲ್ಲಿ ಪ್ರಗತಿಪಥವನ್ನು ಹಿಡಿದು ಸಾಗುವದೋ, ಅಲ್ಲಿನ ಸಿರಿಸಂಪತ್ತುಗಳು ನೆಲೆಯಾಗಿ ನೆಲೆಸಿ, ಆರ್ಥಿಕ ನೀತಿಯು ನೆಲೆಗಟ್ಟು ಸುಭದ್ರವಾಗಿ, ಆರ್ಥಿಕನೀತಿಯು ಪರರಾಷ್ಟ್ರದವರನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತವೆ. ಇದು ಪ್ರಜಾಪ್ರಭುತ್ವಯುಗವು ಪ್ರಜಾಸರ್ಕಾರದಲ್ಲಿ ಪ್ರಜೆಗಳು ಬಲಗಟ್ಟಿನಿಂದ ಬಾಳಿಬದುಕಿದರೆ ಸರಕಾರವು ಸಡಿಲವಿಲ್ಲದೆ ಸರಾಗದಿಂದ ಸಾಗುತ್ತದೆ. ಪ್ರತಿಯೊಬ್ಬ ಪ್ರಜೆಯೂ ಶಾಂತಿಪ್ರಿಯನಾಗಿ ಜೀವಿಸಿದರೆ ಇಡೀ ರಾಷ್ಟ್ರದಲ್ಲಿ ಶಾಂತಿಕಾಂತಿಯು ಕಳೆಗಟ್ಟದೆ ಇರದು. ಈ ಶಾಂತಿಸ್ಥಿರತೆಗೆ ಉತ್ಪತ್ತಿ\ಹಾಗೂ ಹಂಚಿಕೆಗಳು ಸರಿಸಮಾನವಾಗಿ ಸಾಗಬೇಕು. ಇಂದಿನ ಸಂಯುಕ್ತ ರಾಷ್ಟ್ರಸಂಘದ ಆರ್ಥಿಕ ಮಿತಿಯು ಹದಗೆಟ್ಟಿರಬೇಕಾದರೆ ಶಾಂತಿಯು ತಣ್ಣಗಾಗಿಯೇ ಇದ್ದಿರಲೇಬೇಕು. ಸಾಧು ಟಿ. ಎಲ್. ವಾಸ್ವಾನಿಯವರು "ಪಾಶ್ಚಿಮಾತ್ಯ ಅರ್ಥ ಶಾಸ್ತ್ರವು ಅನೈತಿಕವಾದ ಕಾರಣವೇ ಬಕಾಸುರನಂತಿದೆ'' ಎಂದು ಹೇಳಿರುವುದು ಉಚಿತವೇ ಆಗಿದೆ. ಇಷ್ಟೇ ಅಲ್ಲದೆ ಗಾಂಧೀಜಿಯವರೂ ಸಹ "ಪಾಶ್ಚಿಮಾತ್ಯ ಅರ್ಥಶಾಸ್ತ್ರವು ಸರ್ವೋನ್ನತ ವಿಚಾರಬಿಂದುಗಳಿಂದ ರಚಿಸಲ್ಪಟ್ಟಿರುವುದಿಲ್ಲ ಕಾರಣ ಅದು ಅರ್ಥಶಾಸ್ತ್ರವಾಗದೆ ಅನರ್ಥಶಾಸ್ತ್ರವಾಗಿದೆ." ಎಂದು ಹೇಳಿದ್ದಾರೆ.

ಹನ್ನೆರಡನೆ ಶತಮಾನದಲ್ಲಿ ಕಲಚೂರ್ಯ ಚಕ್ರಾಧಿಪತ್ಯದ ಪ್ರಧಾನಿ ಬಸವಣ್ಣನವರು ಆರ್ಥಿಕ ನೀತಿಯ ಬಲಗಟ್ಟಿನಿಂದ ರಾಜ್ಯಸೂತ್ರವನ್ನು ದೊರೆಗಳು ಹಿಡಿಯುವಂತೆ ಮಾಡಿದರು. ಜನಜೀವನವು ಕಲ್ಯಾಣಕರವಾಗಿ, ಉಚ್ಚನೀಚ

ಹಾಗೂ ಜಾತೀಯ ಭಾವನೆಗಳನ್ನು ಬಿಟ್ಟು ಸಕಲ ಕೆಲಸಗಳು ಸಾಗುತ್ತಿದ್ದ ಕಾರಣ ಅವು ಆತ್ಮೋನ್ನತಿಯ ಸಾಧನಗಳಾದವು. ಪ್ರತಿಯೊಬ್ಬ ಪೌರನೂ ತನ್ನ ಶಕ್ತಿಯನ್ನು ಸದುಪಯೋಗ ಮಾಡಿ ನೀತಿಯಿಂದ ನಡೆಯಲು ಅವಕಾಶವಾಯಿತು. ಸರಿಸಮಾನತೆ ಬಂಧುತ್ವವು ಬೆಳೆದು ಬಂಧುರಬಗೆಯು ಬಿರಿಯಿತು. ಉದ್ಯೋಗಗಳ ವೃದ್ಧಿಗಾಗಿ ಸಮಾಜದಲ್ಲಿ ಸಂಪತ್ತು ಕೇಂದ್ರೀಕೃತವಾಗದೆ ಸರ್ವಸಮಾನವಾಗಿ ಹಂಚಲ್ಪಟ್ಟಿತು. ವೈಯುಕ್ತಿಕಹಿತ ಹಾಗೂ ಸಾಮಾಜಿಕ ಕಲ್ಯಾಣವು ಒಂದೇ ವೇಳೆಯಲ್ಲಿ ಸಾಧ್ಯವಾಯಿತು. ಕಾಯಕಮಾಡುವವರಿಗೆ ಮಾತ್ರ ಅನುಭವ ಮಂಟಪದಲ್ಲಿ ಪ್ರವೇಶವಿತ್ತು. ಬಸವಣ್ಣನವರ ಸಮಾಜ ರಚನೆಯು. ಜಾತ್ಯಾತೀತ ಸರ್ವೋದಯ ಸಮಾಜದ ಉಗಮಸ್ಥಾನ ಭಾರತದ ಬಾಪೂಜಿಯ ಗ್ರಾಮೋದ್ಯೋಗದ ತಳಹದಿಯು ಬಸವಣ್ಣನವರ ಕಾಯಕ ತತ್ವದಿಂದಕ ರಿಗೊಂಡಿದೆ-

"ಬಸವೇಶ್ವರರು ಹನ್ನೆರಡನೆಯ ಶತಮಾನದ ಆದಿಕಾಲದಲ್ಲಿ ಮುಂಬಯಿ ರಾಜ್ಯದ ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಜನಿಸಿದರು. ಬಿಜ್ಜಳ ದೊರೆಯ ಮುಖ್ಯ ಮಂತ್ರಿಯಾಗಿ ಬಸವೇಶ್ವರರು ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಮುಂದಾಳತ್ವ ವಹಿಸಿ ತಮ್ಮ ಹೊಸ ಉಪದೇಶಗಳ ಪ್ರಸಾರ ಹಾಗೂ ಜನಪ್ರೀಯತೆಗಾಗಿ ವಿಪುಲವಾಗಿ ಹಣ ಖರ್ಚು ಮಾಡಿದರು. ಬಸವೇಶ್ವರರು ದೈಹಿಕ ಶ್ರಮಕ್ಕೆ ಅಪಾರ ಮಹತ್ವ ಕೊಡುತ್ತಿದ್ದರು. ಅವರ ಪ್ರಕಾರ ದೈಹಿಕಶ್ರಮ ಅಥವಾ ಕಾಯಕವು ಕೈಲಾಸಕ್ಕೆ ಸಮವಾಗಿತ್ತು."

—ಕೇಂದ್ರ ಮಂತ್ರಿ ಬಿ, ಎನ್ ದಾತಾರ.

ಇಂದು ಸರ್ವೋದಯ ಯುಗವಾಗಿದೆ. ಸಕಲರಿಗೂ ಯೋಗ್ಯ ಉದ್ಯೋಗವೂ, ಜೀವಿಕೆಯೂ, ದೊರೆತು ಸಮಾಜದ ಅಂಗಾಂಗಗಳು ಸುಖಮಯವೂ, ಸುಪುಷ್ಟವೂ ಆಗುವದೇ ಆರ್ಥಿಕ ದೃಷ್ಟಿಯ ಸರ್ವೋದಯ. ಪ್ರತಿಯೊಬ್ಬ ಮಾನವನೂ ತನ್ನ ಬಾಳನ್ನು ತನ್ನ ಸುತ್ತಮುತ್ತಣ ಇತರರ ಬಾಳಿಗೆ ಸಹಾಯಕವಾಗುವಂತೆ ರೂಪಿಸಿಕೊಳ್ಳುವದೇ ಸರ್ವೋದಯದ ಆಚರಣೆ. ಇದು ಬಸವಣ್ಣನವರಲ್ಲಿ ಅಳವಟ್ಟಿತ್ತು.

ನಾಡಿನ ಸಿರಿಸಂಪತ್ತು ಅಭಿವೃದ್ಧಿಯಾಗಿ ಜನರು ಸುಖಶಾಂತಿಗಳಿಂದಿರಬೇಕಾದರೆ ಕಾಯಕವೇ ಶ್ರೇಷ್ಠವೆಂದು, ಅದಕ್ಕಾಗಿ ಸಮಾಜವು ಉತ್ಸಾಹ, ಹುರುಪುಗಳಿಂದ ಅದರಲ್ಲಿ ನಿರತರಾದರೆ ಸ್ವರ್ಗ ಸುಖವು ಕರತಲಾಮಲಕವಂತೆ; Work is worship ಎಂದು ಕಾಲೆಣಲನು ಹೇಳಿದರೆ ಬಸವಣ್ಣನು 'ಕಾಯಕವೇ ಕೈಲಾಸ' ಎಂದನು. ಈತನ ಅನುಯಾಯಿಗಳ ನುಡಿ ಇಂತಿದೆ.

"ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧನಾಗಿ ಕಾಯಕ
ಮಾಡುವೊಡೆ ಸದ್ಭಕ್ತಂಗೆ ಎತ್ತ ನೋಡಿದೊಡತ್ತ ಲಕ್ಷ್ಮಿ ತಾನಾಗಿಪ್ಪಳು
ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ"

ಕಾಯಕವೇ ಅಮರ ಮಾನವೀಯತೆ ಎಂಬುದನ್ನು ಅನುಷ್ಠಾನದಲ್ಲಿ ಬಸವಣ್ಣನವರು ತಂದ ಕಾರಣವೇ ವೀರಶೈವ ಸಮಾಜದಲ್ಲಿ ಸಕಲ ಕಾಯಕಗಳಿಗೂ ಒಂದೇ ಸ್ಥಾನಮಾನ ಬಂದಿತು. ಬಸವಣ್ಣನವರಿಗಿಂತ ಹಿಂದೆ ಮನುಸ್ಮೃತಿಯ ಭಯಂಕರ ಹಾವಳಿಯು ಜನತೆಯನ್ನು ತಿಂದಿತು. ಮನುಸ್ಮೃತಿಯ ಆರ್ಥಿಕ ನೀತಿಯು ಬಹಳ ವಿಷಮವಾಗಿದ್ದಿತು. ಚರ್ಮದ ಉದ್ಯೋಗ, ಅಗಸತನ, ಹಜಾಮತನ, ಗ್ರಾಮ ಶುದ್ಧತೆ, ಗಾಣಿಗತನ—ಇತ್ಯಾದಿಯು ಕೀಳೆಂದು ಅಭಿಪ್ರಾಯವನ್ನು ಉತ್ತಮ ವರ್ಗವು ಸಮಾಜಕ್ಕೆ ಕೊಟ್ಟಿತು. ಇದು ಕಾರಣ ಉದ್ಯೋಗಗಳ ಬೆಳವಣಿಗೆಯು ಕುಂಟುವಂತಾಯಿತು. ಉದ್ಯೋಗಾವಲಂಬನದಿಂದ ಮೇಲು ಕೀಳು, ಹೆಚ್ಚು ಕಡಿಮೆ ಎಂಬ ಭೇದವು ಜನಾಂಗದಲ್ಲಿ ಮೂಡುವಂತಾಯಿತು. ಇಂದಿನ ಸಮಾಜದ ಪರಸ್ಥಿತಿಯು ಇದೇ ಬಗೆಯಾಗಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ನಮ್ಮ ನಮ್ಮ ಶ್ರೇಷ್ಠ ಕನಿಷ್ಠಗಳು ತಾಂಡವವಾಡುತ್ತಾ, ಪರಕೀಯರಿಗೆ ಉದ್ಯೋಗಗಳು ದಕ್ಕಿ ಹೋಗುತ್ತಾ, ಪರರ ಗುಲಾಮರಾಗಿ ವರ್ತಕರು ಸ್ವಾರ್ಥಸಾಧಿಸುತ್ತಾ, ಸಮಾಜದ ಕ್ಷಯಕ್ಕೆ ಕಾರಣರಾಗುತ್ತಿದ್ದಾರೆ. ಆರ್ಥಿಕ ವಿಷಮತೆಯೇ ಪ್ರಪಂಚದ ಆಂದೋಲನಕ್ಕೆ ಕಾರಣವಾಗಿರುತ್ತದೆ. ಕಪ್ಪು ಪೇಟೆ—Black market ವ್ಯಾಪಾರದಿಂದ ತಮ್ಮ ಬೊಜ್ಜು ಬೆಳೆಯಿಸಿ ಎಲ್ಲೆಲ್ಲಿನ ಸಂಘ, ಸಂಸ್ಥೆ, ಮಠ, ಮಾನ್ಯಗಳಲ್ಲಿ ಕೈಹಾಕಿ, ಶಿಕ್ಷಣಗಂಧದ ಲೇಶಾಂಶವೂ ಇಲ್ಲದ ಸಿರಿವಂತ ಸ್ವಾರ್ಥಿಗಳ ಸೆಡಗರ ಸಂಭ್ರಮವನ್ನು ಹೇಳತೀರದು. ಕಾಯಕದ ಮಹತ್ವವನ್ನು ತಿಳಿಯದೆ ಪಿತ್ರಾರ್ಜಿತ ಧನದಿಂದಲೇ ತಮ್ಮ ವಹಿವಾಟನ್ನು ನಡೆಯಿಸಿಕೊಂಡು ಶ್ರೀಮಂತರು ಸಮಾಜ ಬಾಂಧವರನ್ನು ಅಡಿಗೆ ಆದು ಮುತ್ತಿದ್ದಾರೆ. ಹಣಗಾರರು ಹಾಗೂ ಇತರರ ಸಂಬಂಧವನ್ನು ಇಲಿ ಬೆಕ್ಕುಗಳಂತೆಯೂ, ಪರಸ್ಪರ ಮೋಸಗೊಳಿಸಲು ಹೆಣಗಾಡುತ್ತಿರುವ ವೈರಿಗಳಂತೆಯೂ ಇದ್ದಾರೆ ಎಂಬುದನ್ನು ಒಮ್ಮೆ ಗಾಂಧೀಜಿಯವರು ತಿಳಿಸಿರುತ್ತಾರೆ. ಮಹಾತ್ಮಾ ಗಾಂಧೀಜಿಯವರ ತತ್ವಕ್ಕೂ ಬಸವಣ್ಣನವರ ತತ್ವಕ್ಕೂ ಸರಿ ಸುಮಾರು ಏಕತೆಯು ಇರುವದು ಕಾಣುತ್ತದೆ ಬಸವಣ್ಣನವರು ತಮ್ಮ ಆರ್ಥಿಕ ನೀತಿಯಿಂದ ನೈತಿಕ, ಔದ್ಯೋಗಿಕ ಅವನತಿಗಳನ್ನು ಅಳಿಸಿದುದಲ್ಲದೆ ಉದ್ಯೋಗಗಳನ್ನು ಅವಲಂಬಿಸಿದಲ್ಲಿ ಯಾವ

ಹೆಚ್ಚು ಕಡಿಮೆಯಿಲ್ಲವೆಂಬುದನ್ನು ಪ್ರತ್ಯಕ್ಷಗೊಳಿಸಿದ್ದಾರೆ. ಉದ್ಯೋಗಗಳನ್ನು ಅವಲಂಬಿಸಿದ ಜನರೇ ಶ್ರೇಷ್ಠರು. ಸೋಮಾರಿಗಳೂ, ಪರತಂತ್ರ ಜೀವಿಗಳೂ ಕನಿಷ್ಠರು. ಸ್ವಾವಲಂಬಿಗಳೇ ಸರ್ವಶ್ರೇಷ್ಠರು. ಭಿಕಾರಿಗಳೂ, ತಿರುಕರೂ ಸರ್ವಕನಿಷ್ಠರು. ಸತ್ಯ, ದುಡಿತ, ಸಮಾನತೆ, ಪ್ರೀತಿ ಮೊದಲಾದ ಸದ್ಗುಣಗಳು ಸಮಾಜದಲ್ಲಿ ಹಣಕ್ಕಿಂತ ಉತ್ತಮವು. ಭಗವದ್ಭಕ್ತನು ಮನೆಗೆ ಬಂದರೆ ಆತನ ಉದ್ಯೋಗವನ್ನು ಕೇಳಿ ಅನಂತರ ಮರ್ಯಾದೆ ಮಾಡುವಂತಿಲ್ಲ. ಸಕಲ ಕಾರ್ಯಗಳೂ ಪವಿತ್ರ. ಬೇಸಾಯಗಾರನಾದರೇನು? ಕೂಲಿಗಾರನಾದರೇನು? ಶರೀರಶ್ರಮದಿಂದ ದುಡಿದು ಕೆಲಸ ಮಾಡಿದರೆ ಸಾಕು ಅವರೇ ಸದ್ಭಕ್ತರು. ಅವರ ಸಂದರ್ಶನಕ್ಕಾಗಿ ಬಸವಣ್ಣನವರು ಹಾತೊರೆಯುತ್ತಿದ್ದರು. ಮನುಜರಿಗೆ ಉದ್ಯೋಗ ಸ್ವಾತಂತ್ರ್ಯವನ್ನು ಬಸವಣ್ಣನವರು ಎಂದೋ ಕೊಟ್ಟರು. ಮದ್ದಯ್ಯನು ಒಕ್ಕಲುತನ ಮಾಡುತ್ತಿದ್ದನು. ರಾಮಣ್ಣನು ದನ ಕಾಯುತ್ತಿದ್ದನು. ಮೊಳಿಗೆ ಮಾರಯ್ಯನವರು ಕಟ್ಟಿಗೆ ಕಾಯಕವನ್ನು ಕೈಕೊಂಡಿದ್ದರು. ಕೇತಯ್ಯನವರು ಬುಟ್ಟಿ ಮಾಡುತ್ತಿದ್ದರು. ರಾಮಿತಂದೆಯು ಹೊಲೆಯುತ್ತಿದ್ದರು. ಹರಳಯ್ಯ ಪಾದರಕ್ಷೆಯನ್ನು ಮಾಡುತ್ತಿದ್ದರು. ನುಲಿಯ ಚಂದಯ್ಯನು ಹಗ್ಗಗಳನ್ನು ತಯಾರಿಸುತ್ತಿದ್ದನು. ಸಂಗಣ್ಣನವರು ವೈದ್ಯವೃತ್ತಿಯನ್ನು ಅವಲಂಬಿಸಿದ್ದರು ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆಯುತ್ತಿದ್ದರು. ಹಡಪದ ಅಪ್ಪಣ್ಣನವರು ಕ್ಷವರ ಮಾಡುತ್ತಿದ್ದರು. ಕಕ್ಕಯ್ಯನವರು ಡೋಹರ ಕೆಲಸ ಮಾಡುತ್ತಿದ್ದರು, ರೆಮ್ಮವ್ವೆಯು ಕದಿರು ಮಾಡುತ್ತಿದ್ದಳು. ವೀರಮ್ಮನು ಧರ್ಮ ಪ್ರಚಾರ ಮಾಡುತ್ತಿದ್ದಳು. ಹೆಂಗಸು ಗಂಡಸು ಎನ್ನದೆ ಇನ್ನೂ ಹಲವು ಮಂದಿಯು ಉದ್ಯೋಗಗಳನ್ನು ಕೈಕೊಂಡಿದ್ದು ಅವರೆಲ್ಲರೂ ಏಕತೆರನ ಗೌರವವನ್ನು ಪಡೆದಿದ್ದರು. ಎಲ್ಲಿ ಉದ್ಯೋಗ ಸಂಪತ್ತು ನೆಲೆಯಾಗಿರುವದೋ ಅಲ್ಲಿನ ಆರ್ಥಿಕನೀತಿ ಆಧಿಕ್ಯವನ್ನು ಪಡೆಯದೇ ಇರದು.

ಬಸವಣ್ಣನವರು ಹಲವು ಉದ್ಯೋಗಗಳ, ಅನೇಕ ಮತಗಳ, ಮಹದ್ವಿಚಾರಗಳ ಮಂದಿಯನ್ನು ಸೇರಿಸಿ ಸ್ವಾವಲಂಬನ ಸಮಾಜವನ್ನು ರಚಿಸಿದರು. ಗೋತ್ರವರ್ಣದ ಬಣಬೆಯು ಬೆಳೆಯಿಂದ ಏನುಪ್ರಯೋಜನ?

"ವರ್ಣಾಶ್ರಮ ವ್ಯವಸ್ಥೆ ಎಂದರೆ ಮನಸ್ಸುಬಂದಂತೆ ಮಾಡಿದ ಸಮಾಜ ರಚನೆಯಲ್ಲ. ಇವರ ತಳಹದಿಯಲ್ಲಿ ಸಿದ್ಧಾಂತಗಳ ಜ್ಞಾನವುಂಟು, ಮನುಜ ಸಮಾಜದ ಉದ್ಧಾರಕ್ಕೆ ಅಗತ್ಯವಿದ್ದ ನಿಯಮಗಳ ಅರಿವು ಉಂಟು."
ಮಹಾತ್ಮ ಗಾಂಧೀಜಿ.

ಜಾತ್ಯಾತೀತ ಸರ್ವೋದಯ ಸಮಾಜದ ಉಗಮವನ್ನು ಬಸವಣ್ಣನವರಲ್ಲಿ ಕಾಣುವವೇ! ಅವರಿವರ ಕುಲಜಾತಿಗಳನ್ನು ಹುಡುಕುವುದರಲ್ಲಿ ಯಾವ ಪ್ರಯೋಜನವು ತಾನೇ ಇರುತ್ತದೆ? ಮಾನವ ಕಲ್ಯಾಣಕ್ಕೆ ಸಂಕುಚಿತ ಭಾವನೆಯು ಒಳ್ಳೆಯದಲ್ಲ.

" ಕೊಲ್ಲುವನೇ ಮಾದಿಗ, ಹೊಲಸುತಿಂಬುವನೇ ಹೊಲೆಯ
ಕುಲವೇನೋ? ಅವಂದಿರ ಕುಲವೇನೋ?
ಸಕಲ ಜೀವಾಳಿಗಳಿಗೆ ಲೇಸನೇ ಬಯಸುವ
ಕೂಡಲಸಂಗನ ಶರಣರೇ ಕುಲಜರು"

ಸಮಾಜದ ಅಭ್ಯುದಯಕ್ಕೆ ಜಾತಿಯು ಮೇಲು ಕೀಳು ಸರಿ ಹೋಗುವದಿಲ್ಲವಂತೆ! ಮಧುವರಸಯ್ಯನೆಂಬ ಬ್ರಾಹ್ಮರ ಮಗಳನ್ನು ಹರಳಯ್ಯನವರೆಂಬ ಮಾದಿಗರ ಮಗನಿಗೆ ಮದುವೆ ಮಾಡಿಸಿದರು ಬಸವಣ್ಣನವರು. ಅನೇಕ ಕುಲಗಳ ಜನರು ಪರಿಶುದ್ಧರಾಗಿ, ಪವಿತ್ರರಾಗಿ ಸಮಾಜವೊಂದಕ್ಕೆ ಸೇರಿ ಸೌಹಾರ್ದತೆಯಿಂದ ಸಾಗುತ್ತಿರುವಾಗ ಏಕೈಕವಾಗಿರುವ ಆ ಮಂದಿಯನ್ನು ಸಮಾಜದಲ್ಲಿ ಉಚ್ಚನೀಚರಾಗಿ ಗಣಿಸುವುದು ಯೋಗ್ಯವೇ? ಎಲ್ಲಿಯಾದರೂ ಸರಿ, ರಟ್ಟೆ ಮುರಿದು ದುಡಿಮೆಯಿಂದ ಕೂಲಿಮಾಡಿ ಭಗವಂತನ ನಿಲುವನ್ನು ತಿಳಿಯಲಿಕ್ಕೆ ಹಾತೊರೆಯುತ್ತಿದ್ದರೇ ಹೊರತು ಪರಧನಕಾಗಲಿ, ಸ್ವಂತ ಸಂಪಾದನೆಗಾಗಲೀ ಬಸವಣ್ಣನವರು ಕಾಯುತ್ತಿರಲಿಲ್ಲ.

" ಹೊತ್ತಾರೆ ಎದ್ದು ಕಣ್ಣಹೊಸೆಯುತ್ತ
ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿಮಕ್ಕಳಿಗೆಂದು
ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ!
' ಆಸನೇಶಯನೇ ಯಾನೇ | ಸಂಪರ್ಕೇ ಸಹ ಭೋಜನೇ |
ಸಂಚರಂತಿ ಮಹಾಘೋರೆ | ನರಕೇಕಾಲ ಮಕ್ಷಯಂ |
ಎಂಬಶ್ರುತಿಯು ಬಸವಣ್ಣನೋದುವನು ' ಎಂಬರು,
' ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
ಓಲೈಸಿಹನೆಂ' ದು ನುಡಿವರಯ್ಯಾ ಪ್ರಮಥರು
ಕೊಡುವೆನುತ್ತರವನವರಿಗೆ ಕೊಡಲಮ್ಮುವೆ
ಹೊಲೆಯ ಹೊಲೆಯರ ಮನೆಯಹೊಕ್ಕು,
ಸಲೆ ಕೈಕೂಲಿಯ ಮಾಡಿಯಾದರೆಯೂ

ನಿಮ್ಮ ನಿಲುವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕೆ ಕುದಿದೆನಾದರೆ
ತಲೆದಂಡ ! ಕೂಡಲಸಂಗಮದೇವಾ "

ಬಸವಣ್ಣನವರು ಸಕಲ ಉದ್ಯೋಗಗಳಿಗೆ ಬೆಲೆಯನ್ನು ಕೊಟ್ಟಕಾರಣ, ಸಮಾಜ ವಿಧಾಯಕ ಸತ್ವವು ಬೆಳೆಯಿತು. ಹೆಚ್ಚಿಗೆ ಹಣಕ್ಕೆ ಹದ್ದುಮೀರಿದ ಮಹತ್ವವನ್ನು ಸಮಾಜದಲ್ಲಿ ಕೊಡದೇ ಇದ್ದ ಕಾರಣವೇ ಹಣಗಾರರ ಹಮು ಅಳಿಯುವಂತಾಯಿತು. ಹಿಂದೂಸಮಾಜವನ್ನು ದುರ್ದೆಶೆಗೀಡುಮಾಡಿದ ಮನು ವಿನ ವರ್ಣಾಶ್ರಮದಂತೆಯೇ ವೀರಶೈವ ಸಮಾಜದ ದುರ್ದೆಶೆಯನ್ನು ಸ್ವಾಮಿ ಗಳೂ, ಸಿರಿವಂತರೂ ಇಂದು ನೋಡುತ್ತಾ ಕುಳಿತಿದ್ದಾರೆ; ಆದರೆ ಬಸವ ಣ್ಣನವರು ಸಮಾಜದಲ್ಲಿಯ ಪ್ರತಿಯೊಬ್ಬ ವ್ಯಕ್ತಿಯ ಹೊಟ್ಟೆಬಟ್ಟೆಗಾಗಿ, ಸುಖ ಶಾಂತಿಗಾಗಿ ಅನುಕೂಲ ಆರ್ಥಿಕ ಯೋಜನೆಗಳನ್ನು ಕಲ್ಪಿಸದೆ ಇದ್ದಿಲ್ಲ. ಸಕಲ ಉದ್ಯೋಗಾವಲಂಬಿಗಳಿಗೂ ಮಂಗಲವಾಗಬೇಕೆಂಬುದೇ ಬಸವಣ್ಣನ ವರ ಆರ್ಥಿಕನೀತಿಯು ಪ್ರಗತಿಕರ ವಿಶಾಲತತ್ವಗಳಿಂದ ಬಸವಣ್ಣನವರು ಸಮಾಜವನ್ನು ಕಟ್ಟಿದಕಾರಣವೇ ಉದ್ಯೋಗಗಳ ಸಂಬಂಧದ ಉಚ್ಚನೀಚ ವನ್ನು ಮೂಲೋತ್ಪಾಟನೆಮಾಡಿದರು. ಈ ಸುಧಾರಣೆಯು ಸಲೀಸಾಗಿಸಾಗಲು ಸುಲಭಸಾಧನೆಯು ಅಹಿಂಸಾತತ್ವವಾಗಿತ್ತು.

" ದಯವಿಲ್ಲದ ಧರ್ಮವದೇವುದಯ್ಯಾ !
ದಯವೇಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ "

ಧರ್ಮವೃಕ್ಷದ ತಾಯಿಬೇರು ದಯೆ ಅಹಿಂಸಾ ಧರ್ಮಿಗಳಲ್ಲದವರು ಧರ್ಮ ಶೀಲರಲ್ಲದ ಪ್ರಯುಕ್ತ ಪರಮಾತ್ಮನಿಗೆ ಅವರುಸಲ್ಲರು. ವಿಶ್ವಶಾಂತಿ ಸ್ಥಾಪನೆಯ ನೀತಿಯೇ ಬಸವಣ್ಣನವರ ನೀತಿಯು. ರಾಜ್ಯದಲ್ಲಿನ ಪ್ರತಿಯೊಬ್ಬ ಪ್ರಜೆಯೂ ತನ್ನ ಯಥಾಶಕ್ತಿಗನುಸಾರವಾಗಿಯೇ ಕಂದಾಯವನ್ನು ಕೊಡುವಂತೆ ಮಾಡಿ ದರು. ತಮ್ಮ ಸಹಜವಾದ ನಿಷ್ಪಕ್ಷಪಾತ ಆರ್ಥಿಕ ನೀತಿಯನ್ನು ಅನುಷ್ಠಾ ನಕ್ಕೆ ಇವರು ತಪ್ಪದೆತಂದರು. ಸಮಾಜಕ್ಕೆ ಭಿಕ್ಷುಕತನವು ಕಾಗೆಮಾರಿಬೀಜ ವೆಂದರಿತು ಅದರ ಪರಿಹಾರಕ್ಕೆ ' ಬಂಕದೆರೆ ' ತೆರಿಗೆಯನ್ನು ಹಾಕಿದರು. ವೃದ್ಧರೂ, ಸಣ್ಣಮಕ್ಕಳೂ, ನಿರಾಶ್ರಿತರೂ, ಅಂಗವಿಹೀನರೂ ಸರಕಾರದಿಂದ

ಪೋಷಿತವಾಗಲು ಅನ್ನಸತ್ರಾಲಯಗಳನ್ನು ಇವರು ಏರ್ಪಡಿಸಿದ್ದರು. 'ಸಿದ್ಧ ರಾಮು' ಕಾಣಿಕೆಯನ್ನು ರಾಜ್ಯದ ಮಾಂಡಲೀಕರು ಭಂಡಾರಕ್ಕೆ ತಂದಿರಿಸು ತ್ತಿದ್ದರು. ದೀನದರಿದ್ರರ ಕಷ್ಟದುಃಖಗಳಲ್ಲಿ ಶ್ರೀಮಂತರು ಭಾಗಿಯಾಗುವಂತೆ ಇವರು ಏರ್ಪಡಿಸಿದ್ದರು. ಸರ್ಕಾರದಲ್ಲಿ ವ್ಯಯವನ್ನು ಕಮ್ಮಿಹಾಕಿ, ಆದಾಯ ವನ್ನು ಹೆಚ್ಚಿಸುವ ಸುಧಾರಣೆಗಳನ್ನು ತಯಾರಿಸಿ ದೇಶದ ಆಪತ್ತು ವಿಪತ್ತನ್ನು ಪರಿಹರಿಸಲು ನಿಷ್ಕಾಮಕರ್ಮ ಯೋಗದಿಂದ ಪ್ರಜೆಗಳು ತಾವಾಗಿಯೇ ಬರು ತ್ತಿದ್ದರು. ಭೋಗಪದಾರ್ಥಗಳ ಸುಂಕವನ್ನು ಹೆಚ್ಚಿಸಿದ ಕಾರಣ ಭೋಗ ಜೀವನದ ದುಷ್ಪರಿಣಾಮವು ನಿಂತಿತು.

— | —

# ಗುರು ದರ್ಶನ

(ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಜಮಖಂಡಿಯಲ್ಲಿ ೬ ತಿಂಗಳ ಪ್ರವಚನ ಮಾಡಿದಾಗ ಅವರ ಅಮೃತವಾಣಿ ಕೇಳಿ ಅಲ್ಲಿಂದ ತೆರಳುವಾಗ ಬಂದ ಉದ್ಗಾರದ ವಾಣಿ)

ಅಗಲುವೆ ಯಾಕಯ್ಯಾ । ತಂದೆ ಅಗಲುವೆ ಯಾಕಯ್ಯಾ ।
ಅಗಲಿ ಪೋದರೀಪರಿ ಭವದಿ । ಬಾಳಲಿ ಎಂತಯ್ಯಾ ನಾನು ॥ಪಲ್ಲ॥
ಬಾಲಕಳಿದ್ದಾಗ ಮಲ್ಲಿಯನಾಥನೆ ಪಿತನೆಂದೆ ।
ತತ್ವವ ಅರಿಯಲು ಗುಟ್ಟನು ತಿಳಿಯಲು ।
ಎಲ್ಲಿಗೆ ಹೊಗಿದ್ದೆ ಇಲ್ಲಿ ಕಲ್ಲು ಮಾಡಿ ಇಟ್ಟೆ ॥೧॥
ಕಲ್ಲಿನ ಶಿಲೆಯಲ್ಲಿ ಮಲ್ಲಿಯನಾಥನಿರುವನೆಂದು ।
ನಂಬಿ ಕರೆದು ಸಿರಾಶೆಗೊಂಡು ।
ಸುಮ್ಮನೆಕುಳಿತಿದ್ದೆ ನನಗೆ ನೆಮ್ಮದಿಇಲ್ಲದಲೆ ॥೨॥
ಮಾಯು ತುಂಬಿದ ಜಗವೂ ।
ಇದರೊಳು ವಿಷಯ ತುಂಬಿದ ಗಾಳಿ ।
ಭೀಕರ ಬಿರುಗಾಳಿಯಲಿ ಸಿಲುಕಿ ನಾ ।
ತತ್ತರಿಸುತಲಿದ್ದೆ ತಂದೆ ಬಂದುಎತ್ತಿಕೊಂಡೆ ॥೩॥

ಹಸಿವು ತೃಷೆಯು ಎಂದೂ ।
ಕನಲಿ ಕಂಗಾಲಾಗಿದ್ದೆ ।
ವೆಸನದಿಂದಲಿ ಉಸುರನು ಗರೆಯುತ ।
ನಿರಾಶೆ ಗೊಂಡಿದ್ದೆ ತಂದೆ ಧಾವಿಸಿ ನೀಬಂದೆ ॥೪॥

ಜ್ಞಾನವ ಬೋಧಿಸುತ ಅಲ್ಲಿಯ ಹಸಿವೆಯ ಹಿಂಗಿಸುತ ।
ಮಹಾಮಹ ಮಂತ್ರವ ಬೋಧಿಸಿ ।
ಅಲ್ಲಿಯ ತೃಷೆಯನು ಅಡಗಿಸುತ ।
ಸಂತೋಷದಿ ಹರಿಸುತಾ ॥೫॥

ಯಾವ ಜನ್ಮದಲ್ಲೋ ।
ನಿಮ್ಮನು ಕಳೆದು ಕೊಂಡುಬಿಟ್ಟೆ ।
ಚಿಕ್ಕವಳೆಂದು ಅಕ್ಕರೆಯಿಂದ ಸಿಕ್ಕಿಯಲ್ಲ ಪ್ರಭುವೇ ।
ಮರೆತಾ ಸೊಕ್ಕಮುರಿಯೊ ತಂದೆ ॥೬॥

ಆಶ್ರಯವಿಲ್ಲೆಂದೂ ।
ನಮಗಾಧಾರವು ಯಾರೆಂದೂ ।
ದೂರದಿಂದಲಿ ನಿಮ್ಮನು ಆಶಿಸಿ ಕಣ್ಣೀರಿಡುತಿದ್ದೆ ।
ಅರಿತು ಕರೆದೂ ಕರುಣಿಸಿದೆ ॥೭॥

ಹೊಲಸು ಗಡಿಗೆ ತೊಳೆಸೀ ।
ಅದರೊಳು ಹಾಲನು ಸಂಗ್ರಹಿಸಿ ।
ಹೆಪ್ಪನು ಹಾಕಿ ಮೊಸರನು ಕಡೆಯದೇ ।
ಎಲ್ಲಿಗೆ ಹೊರಟಿರುವೆ ತಂದೆ ಎಲ್ಲಿಗೆ ಹೊರಟಿರುವೆ ॥೮॥

ಬಹಳ ದಿವಸದಿಂದಾ । ಪ್ರಭುವೇ ದೊರೆತಿರುವಿ ಈಗ ।
ಹಾಲನು ಕುಡಿಸಿ ಬೆಣ್ಣೆಯ ಬಿಟ್ಟು ಹೋಗಬೇಡಿ ।
ತಂದೆ ಅಗಲಿ ಹೋಗಬೇಡಿ ॥೯॥

ಪರಿಪರಿ ಈ ಜಗದಿ । ಪರದೇಶಿಯುನಾನಿದ್ದೆ ।
ಪರಮಪರತರಾ ಪಾವನ ಮೂರ್ತಿ ।
ಬಂದು ಎತ್ತಿಕೊಂಡೆ ಇನ್ನು ಬಗೆದು ಹೋಗಬೇಡಿ ॥೧೦॥

ಗೊಡ್ಡ ಹೈನವೆಂದು । ಇವು ಧಡ್ಡಮಕ್ಕಳೆಂದು ।
ಅಡ್ಡಿ ಇಲ್ಲದೆ ಅರಿತಕೊಂಡು ನೀವು ಮುಂದೆಹೋಗಬೇಡಿ ।
ಕಂದನ ಆಗಲಿ ಹೋಗಬೇಡಿ ॥೧೧॥

ಪಾರಮಾರ್ಥಗುಟ್ಟು । ತೋರಿಪಾರಾಗಲಿ ಬೇಡಿ ।
ದಾರಿಯು ತೋರಸಿ ಕತ್ತಲೆ ಹರಿಸಿ । ಪಾರುಮಾಡು ಇನ್ನು
ತಂದೆ ಪಾರು ಮಾಡು ಇನ್ನು ॥೧೨॥

ತಪ್ಪು ಹೆಜ್ಜೆಯು ಬಿಡಿಸಿ । ನಮಗೆ ಒಪ್ಪು ಹೆಜ್ಜೆಯು ಕಲಿಸಿ ।
ತುಪ್ಪವಕುಡಿಸಿ ತುರಿಯಾ ತೀತಕೆ ಕರೆದೊಯ್ಯೋ ತಂದೆ ।
ಇನ್ನು ಕರೆದೊಯ್ಯೋ ತಂದೆ ॥೧೩॥

ಸತ್ತು ಚಿತ್ತಾನಂದಾ ನಿತ್ಯ ಪರಿಪೂರ್ಣರಿರುವಿರಿ ।
ಸತ್ತನು ತೋರಿ ಚಿತ್ತನು ಸೆಳೆದು । ಆನಂದವನಿಯ್ಯೋ ತಂದೆ
ಆನಂದವನೀಯೋ ತಂದೆ ॥೧೪॥

ಹೊತ್ತು ಹೋಯಿತು ಬೇಗ। ಮತ್ತೆ ಬಾರದು ಅದು ಈಗ ।
ಮುತ್ತಿನಂಥ ಮಾತು ಹೇಳಿ ಕಳಿಸಬೇಡಿ ।
ಗುಟ್ಟನು ನಿಷ್ಠೇಳಿ ತಂದೆ ಗೊತ್ತನು ನಿಷ್ಠೇಳಿ ॥೧೫॥

**ಕು. ಸೌ. ಸೋನುಬಾಯಿ ಸುಬ್ರಾವ ಪಾಟೀಲ,**
**ವಿಜಾಪುರ.**

# ಮಾನವ

[ ಲೇಖಕರು:— ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]

ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೇ ? ಕಾನನದೊಳಿಹ ಕಾಗೆ ವನವಾಸಿಯೇ ? ಗಾಣ ತಿರುಗಲು ಎತ್ತು ದೇಶಾತ್ರಿ ಎನಬಹುದೆ ? ಧ್ಯಾನ ಮಾಡಲು ಬಕಕೆ ಮೋಕ್ಷವೆ ? ಹೀಗೆ ಚಿತ್ತಶುದ್ಧಿಯಿಲ್ಲದ ಪ್ರತಿಯೊಂದು ಕಾರ್ಯವೂ ವ್ಯರ್ಥ. ಚಿತ್ತಶುದ್ಧಿಯೇ ಮಾನವನಿಗೆ ಮುಖ್ಯವಾದದ್ದು. ಚಿತ್ತ ಶುದ್ಧಿಯಿಲ್ಲದ ಮಾನವನನ್ನು "ಮಾನವರೂಪಿ" ಎಂದು ಸಂಬೋಧಿಸಿದರೆ ತಪ್ಪೇನಲ್ಲ.

ಮಾನವನು ಮೊದಲು ತನ್ನ ನಿಜವಾದ ವಸ್ತುವಾವುದೆಂಬುದನ್ನು ಅರಿ ಯಬೇಕು. ಮಿಥ್ಯವಸ್ತುವಿವಾಗಿ ವ್ಯರ್ಥ ತೊಳಲಾಡುವದು ಮೃಗಜಲದ ಬೆನ್ನುಹತ್ತಿದ ಹರಿಣದಂತೆ ವ್ಯರ್ಥವೇ ಸರಿ. ಹೀಗೆ ನಾನು, ನನ್ನದು, ನಮ್ಮ ವರೆಂಬ ನುಡಿಯು ಮಧ್ಯದಲ್ಲಿ ಜನ್ಮಿಸಿದ ನಾವು ಅದನ್ನು ದೂರೀಕರಿಸುವದು ಕಷ್ಟಮಯವಾಗಬಹುದು. ಇದು ಎಲ್ಲರಿಗೂ ಸಾಧ್ಯವಿಲ್ಲ. ಹೀಗಾಗಿ, ನಾನು ನನ್ನದೆಂಬುವವರಿಂದ ವಿಶ್ವವೇ ಬಂಧನಕ್ಕೊಳಗಾಗಿ ತೊಳಲಾಡುತ್ತಿದೆ. ವಿಶ್ವದ ಇನ್ನೆಷ್ಟೋ ಭಾಗ ಮರುಭೂಮಿಯಾಗಿದೆ. ಆ ಮರುಭೂಮಿಯಾಗಲೂ ಮಾನ ವನೇ ಕಾರಣ. ಮಾನವನು ತನ್ನ ಸಮೂಹವನ್ನೇ ಅವಲಂಬಿಸಿ, ತನ್ನ ಸಮೂಹದಲ್ಲಿ ಎಷ್ಟೇ ಕಷ್ಟಬಂದರೂ ಸಹಿಸಿಕೊಂಡು ಜೀವಿಸುವನು. ಹೀಗಾಗಿ ನನ್ನದೆಂಬ ಭೂಮಿಯು ಇಕ್ಕಟ್ಟಿನ ಜನಸಮುದಾಯದಲ್ಲಿ ಎಷ್ಟೆಂದು ಸರ್ವ ರಿಗೂ ಲಭಿಸಬಲ್ಲದು? ಹೀಗಾಗಿ ಮರಣಕ್ಕೆ ತುತ್ತಾದರೂ ಸರಿ. ನಮ್ಮವ ರೆಂಬಲ್ಲಿಯೇ ಜೀವನವನ್ನು ಕಳೆಯುವನು. ಇನ್ನು ಅರಣ್ಯಗಳಲ್ಲಿ ತಮ್ಮ ಆಸ್ಥೆಯನ್ನು ವನ್ಯ ಕ್ರೂರ ಪಶುಗಳು ಸೇರಿ ತಮ್ಮ ರಕ್ಷಣೆಯನ್ನು ಪಡೆಯು ವವು. ಹೀಗಾಗಿ ಅಂಥ ಸ್ಥಳಗಳನ್ನೂ ತನ್ನದೆಂದು ಬಗೆದ ಮಾನವನು ಅಲ್ಲಿ ವಾಸಿಸಲು ಸಾಧ್ಯವೇ ಇಲ್ಲ. ಹೀಗಾಗಿ ಅಂಥವುಗಳನ್ನು ಮಾತ್ರ ತನ್ನದೆಂದು ಬಗೆಯಲಾರ. ಒಂದು ವೇಳೆ ಬಗೆದರೂ ಕೂಡ ಅಂಥ ಸ್ಥಳಕ್ಕಾಗಿ ವ್ಯಾಜ್ಯ ಹೂಡನು. ಯಾವದೇ ವಸ್ತುವಿನಿಂದಾಗಲಿ, ಯಾವದೇ ಭೂಮಿಯಿಂದಾಗಲಿ, ಇಲ್ಲವೇ ಮಾನವನಿಂದಾಗಲಿ, ಉತ್ಪನ್ನವು ಪ್ರಾಪ್ತವಾಗುತ್ತಿದ್ದಲ್ಲಿ ಮಾತ್ರ ನನ್ನದು

ನನ್ನವರೆಂಬ ಅಭಿಮಾನವು ಹೆಚ್ಚಿ, ಅಂಥ ವಸ್ತುವಿಗಾಗಿ ಮಾತ್ರ ಬಡಿದಾ ಡುವನೇ ಹೊರತು ಮಾನವನೊಬ್ಬನನ್ನು ಸಾಕಿ ಸಲುಹಲು ವಿಶ್ವದಲ್ಲಿ ಯಾರೂ ಸಿದ್ಧರಿಲ್ಲ.

ವಿಶ್ವದ ಪ್ರತಿಯೊಂದು ಜೀವಿಗಳ ವಿಶಿಷ್ಟವಾದ ಗುಣಗಳು ಮಾನವನಲ್ಲಿ ಲೀನವಾಗಿವೆ. ಆತನು ಪ್ರಸಂಗಾವಸಾನವಾಗಿ ತನ್ನ ಗುಣವನ್ನು ಬದಲಿ ಸುವನು. ಹೀಗೆ ಬದಲಿಸಲು ಕೂಡ ವಿಶ್ವದ ಸಂಪತ್ತು ಸಾಲದುದಕ್ಕಾಗಿಯೆ. ಬೇಕೆನ್ನುವದಕ್ಕೆ ಬ್ರಹ್ಮಾಂಡ ಸಾಲದು ಮಾನವನಿಗೆ. ಅಂದಮೇಲೆ ಪರಮಾ ತ್ಮನು ಎನಿತು ವಿಶ್ವಗಳನ್ನು ನಿರ್ಮಿಸಿದೊಡೇನು ? ಎನಿತು ಸಂಪತ್ತಿ ಕೊಟ್ಟರೇನು? ಅವೆಲ್ಲವೂ ಈ ನರರಕ್ಕಸನಿಗೆ ಅಲ್ಪವೇ.

ಹಣಕ್ಕಾಗಿ ದೇವತಾರ್ಚನೆ, ಹಣಕ್ಕಾಗಿ ಮೌನವ್ರತ, ಹಣಕ್ಕಾಗಿ ಭಸ್ಮ ಧಾರಿಯಾಗಿ ಅನಂತ ಜನರು ಕಾಲ್ಗಳೆಯುವರು. ಇಂಥ ಭಕ್ತರ ಭಕ್ತಿ, ಇಂಥ ವೇಷಗಳು ನಿಜವಾಗಿ ಬಕಧ್ಯಾನವೇ ಸರಿ. ರೂಪು ಮಾನವನಂತಾದರೇನು ಆಚ ರಣೆ ಮಾನವನದೇ? ಇದೇ ರೀತಿಯಾಗಿ ಜಾತಿಯ ನೀತಿಯನ್ನರಿಯದೆ, ಬ್ರಾಹ್ಮಣ ರಲ್ಲಿ ಜನಿಸಿದವ ಬ್ರಾಹ್ಮಣ, ವೈಶ್ಯರಲ್ಲಿ ಜನಿಸಿದವ ವೈಶ್ಯ ಕ್ಷತ್ರಿಯರಲ್ಲಿ ಜನಿಸಿ ದವ ಕ್ಷತ್ರಿಯ, ಶೂದ್ರರಲ್ಲಿ ಜನಿಸಿದವ ಶೂದ್ರನೆಂದೆನ್ನುವದೂ ತಪ್ಪು. ಆಯಾ ಆಚರಣೆಗಳಿಂದ ಆಯಾ ವರ್ಣಗಳನ್ನು ಪಡೆಯಬಲ್ಲನು. ಆದರೆ ಅದಕ್ಕೆ ತದ್ವಿ ರುದ್ಧವಾಗಿಯೇ ನಡೆದಂತೆ ಮಾನವರೂಪಿನಲ್ಲಿ ಜನಿಸಿದುದಕ್ಕಾಗಿ ಮಾನವ ನೆಂದನ್ನಬೇಕಾಗಿದೆ. ಇದು ನಿಜವಾಗಿಯೂ ಮಾನವಜೀವಿಯ ದೌರ್ಬಲ್ಯವೇ ಎನ್ನಬೇಕು.

ಮಾನವನಲ್ಲಿ ಒಡಮೂಡಿಸಿದ ಈ ಭೇದಗಳು ನಾಶವಾಗುವಕಾಲ ಸಮೀಪಿ ಸಿದೆ. ಆಯಾ ಧರ್ಮಗುರುಗಳ ಬಂಧನದಲ್ಲಿ ಜೀವಿಸಿದ ಧರ್ಮಗಳು ಇಂದಿನ ಸುಶಿಕ್ಷಿತತೆಯಿಂದ ಸ್ವಾತಂತ್ರ್ಯತೆಯನ್ನು ಪಡೆಯುತ್ತಲಿವೆ. ಒಂದುಗೂಡಿ ವರ್ತಿ ಸುತ್ತಲಿವೆ. ಮೊಳಕೆಯಿರುವಾಗ ಚಿವುಟಿದರೆ ನಾಶವಾಗಬಲ್ಲ ಮೊಳಕೆಯೇ ಮರವಾಗಿ ನಿಂತಮೇಲೆ ಬೇಗ ನಾಶಮಾಡಲು ಹೇಗೆ ಸಾಧ್ಯವಿಲ್ಲವೋ ಹಾಗಾಗಿವೆ ಈ ಧರ್ಮಗಳ ಪಾಡು. ಮೊಳಕೆಯಿರುವ ಕಾಲಕ್ಕೆ ಅದರ ಫಲವನ್ನು ಉಪ ಭೋಗಿಸಬೇಕೆನ್ನುವದು ಸುಶಿಕ್ಷಿತರ ಆಶೆ. ಆದರೆ ಇದು ಅನ್ಯಾಯವೆಂಬ ಬೀಜ ವೆಂಬುದನ್ನರಿಯದೆ ಅದಕ್ಕೆ ಆಶ್ರಯವಿತ್ತವರು ಅಶಿಕ್ಷಿತರು. ಹೀಗಾಗಿ ಇಂಥ ಮರ ಬೆಳೆದು ನಿಂತಿದೆ. ಅನೇಕ ಮಹಾಪುರುಷರ ನುಡಿಯೆಂಬ ಕೊಡಲಿಯಿಂದ ನಾಶವಾಗುತ್ತ ಸಾಗಿದೆ.

ಒಂದಾನೊಂದು ಕಾಲಕ್ಕೆ ಧರ್ಮಾಭಿಮಾನಿಗಳೆಂದೆನ್ನಿಸಿಕೊಳ್ಳಲು ತಮ್ಮ ಅನೀತಿಯ ಕಟ್ಟಳೆಯೇ ನೀತಿಯೆಂದು ಬಗೆದು ಸತ್ಯನೀತಿವಂತರನ್ನು ಧರ್ಮ ಬಾಹಿರರನ್ನಾಗಿ ಮಾಡಿಸಲು ತಮ್ಮ ತಮ್ಮ ಮಠಾಧೀಶರರಿಗೆ ತಿಳಿಸುವ ಬೆದರಿಕೆ ಹಾಕುತ್ತಿದ್ದರು. ಹೀಗಾಗಿ ಆಯಾ ಗ್ರಾಮಗಳಿಗೆ ಬರುವ ಮಠಾಧೀಶರಿಗೆ ಈ ಸುದ್ದಿ ತಿಳಿದು ಅವರಲ್ಲಿ ಅತಿಥಿಗಳಾಗದೆ ಉಚ್ಚ ಧರ್ಮಸ್ಥರಲ್ಲಿ ಅತಿಥಿಗಳಾಗುತ್ತಿದ್ದರು. ಹೀಗಾಗಿಯೂ ಮತ್ತೂ ನಮ್ಮ ಧರ್ಮವು ನಾಶವಾದರೆ ನಮ್ಮಂಥವರ ಪಾಡೇನು ಎಂಬಂತೆ ತಕ್ಕ ಶೀಕ್ಷೆ ಕೊಡುವಂತೆ ಧರ್ಮದಿಂದ ತಳ್ಳುತ್ತಿದ್ದರು. ಹೀಗಾಗಿ ಧರ್ಮಕ್ಕೆ ಹೆದರಿ ಧರ್ಮವನ್ನು ಕಾಯ್ದುಕೊಂಡು ಬಂದರು. ಇದು ನಿಜವಾಗಿಯೂ ಅಧರ್ಮವೇ ಸರಿ ಇಂಥ ಅಧರ್ಮವು ಒಂದಾನೊಂದು ಕಾಲದಲ್ಲಿ ಧರ್ಮವಾಗಿದ್ದುತೆನ್ನುವದು ಈ ಕಾಲಕ್ಕೆ ಹೊಳೆಯದೆ ಇರಲಾರದು. ಇಂದು ಎಲ್ಲೆಲ್ಲಿಯೂ ಐಕ್ಯತೆಯು ಒಡಮೂಡತ್ತಲಿದೆ; ಮಾನವತೆಯು ಪ್ರಕಟವಾಗಲಿದೆ.

ಒಂದಾನೊಂದು ಕಾಲದಲ್ಲಿ ಮಾನವನು ಮಾನವನನ್ನೇಕೆ ಹೀನ ಕುಲದವನೆಂದೆನ್ನಿಸಿಕೊಳ್ಳುವವನ ನೆರಳನ್ನು ಕೂಡ ಮುಟ್ಟದಷ್ಟು ಹೀನನಾಗಿ ಕಾಲ್ಕಳೆದಿದ್ದ. ಅಂದಿನಿಂದ ಇಂದಿನ ವರೆಗೆ ಅನಂತ ಜನ ಶರಣರ, ದಾಸರ, ಮಹಾತ್ಮರ ನುಡಿಗಳ ಶಕ್ತಿಯಿಂದ ಇಂದು ಒಂದುಗೂಡಿ ಬಾಳು ಸಾಗಿಸುವ ಮಟ್ಟಕ್ಕೆ ಮುಟ್ಟಿದ್ದು ಆ ಮಹಾಪುರುಷರ ಕಾರ್ಯಕೃತ್ಯವೇ ಸರಿ.

ಮಾನವನು ಮಾನವನ ಮೇಲೆ ಒಡೆತನವನ್ನು ತೋರಿಸುವಂತೆ ವಿಶ್ವದ ಪ್ರತಿಯೊಂದು ಹುಲ್ಲು ಕಡ್ಡಿಯ ಮೇಲೂ ತನ್ನ ಒಡೆತನವನ್ನು ತೋರಿಸುವ. ಕರುವಿಗಾಗಿರುವ ಹಾಲನ್ನು ಗೋವಿನಿಂದ ಹಿಂಡಿ ಭಕ್ಷಿಸುವ ಭಕ್ಷಕನಾಗಿರುವ. ಮಾನವನು ಮಾನವನ ರಕ್ತವನ್ನು ಕುದಿಸಿ ಉಕ್ಕೇರಿಸಿ ಮೈಮೇಲೆ ಹೊರಸೂಸಿ ಬರುತ್ತಿರುವ ಬೆವರನ್ನು ಕುಡಿಯುವ ನರರಕ್ಕಸನಾಗಿಹ. ಹೀಗೆ ಪ್ರತಿಯೊಂದು ತೆರನಾಗಿ ವಿಚಾರಮಾಡುತ್ತಿರುವಲ್ಲಿ ಮಾನವನ ನಡೆಯು ಹೀನವೆಂದೇ ನಾವು ಊಹಿಸಬಹುದು. ನಿಜ. ಇದೆಲ್ಲಕ್ಕೂ ಮಾನವನು ಮೂಲದಲ್ಲಿ ಕಲ್ಪಿಸಿಕೊಂಡ ಸ್ವಾರ್ಥತನವೇ ಸರಿ.

ಮಾನವನು ಮಿತಭಾಷಿಯಾಗಿರುವದೇ ಲೇಸು. ಒಂದು ಸಲ ಯಾರಿಗಾದರೂ ಸಂತೋಷದಲ್ಲಿ ಅತಿಯಾಗಿ ಮಾತನಾಡಿಸಿ ಒಂದಾನೊಂದು ಕಾಲಕ್ಕೆ ಯಾವದೇ ಒಂದು ಚಿಂತೆಗೀಡಾಗಿ ಮಾತನಾಡಿಸದಿದ್ದಲ್ಲಿ ಸಂದೇಹಕ್ಕೆ ಗುರಿಯಾಗಬಹುದು.

ಮಾನವನು ತನ್ನ ಜೀವನದಲ್ಲಿ ಯಾರಿಂದಲೂ ಹೀಯಾಳಿಸಿಕೊಳ್ಳದೇ ಸರ್ವರಿಗೂ ಪ್ರಿಯನಾಗಿ ಸಾಗಬೇಕಾದಲ್ಲಿ ಪ್ರತಿಯೊಬ್ಬರ ಗುಣಪರೀಕ್ಷಕನಾಗಿ ಅವರ ಗುಣಕ್ಕನುಸಾರವಾಗಿ ಸಾಗಿದಲ್ಲಿ ಮಾತ್ರ ಸಾಧ್ಯ.

ಮಾನವನು ತನಗಿಂತಲೂ ಶ್ರೇಷ್ಠರೊಡನೆ ಸಹವಾಸ ಮಾಡಬೇಕು. ಇಲ್ಲವಾದರೆ ಸಮಾನಸ್ಕರ ಜೊತೆಗಾರನಾಗಬೇಕು. ಇವರಿಬ್ಬರ ಜೊತೆ ಸಿಕ್ಕದಿದ್ದಲ್ಲಿ ಏಕಾಕಿಯಾಗಿರುವದೇ ಶ್ರೇಯಸ್ಕರವು.

ಮಾನವನಿಗೆ ಶ್ರೀಮಂತಿಕೆ ಎಂಬುದೊಂದು ಸ್ವರ್ಗದಂತೆ ಕಾಣುವದು. ಆದರೆ ಅದರಲ್ಲಿಹ ಚಿಂತಾಗ್ನಿಯು ಆತನಿಗೆ ಕಾಣದು. ಸಿರಿತನವೆಂಬ ಸುರೆಯನ್ನು ಸೇವಿಸಿದ ಮಾನವನಿಗೆ ವಿಶ್ವದ ನೀತಿಗಳೆಲ್ಲವೂ ಅನೀತಿಗಳಾಗಿಯೂ, ತನ್ನ ನೀತಿಯು ನೀತಿಯಾಗಿಯೂ ಕಂಡುಬರುವದು. ಬಡತನವೆಂಬ ಉದಕವು ಆತನ ಮೇಲೆ ಹಾದು ಹೋದರೆ ಮಾತ್ರ ತಾನು ಮೊದಲು ಕಂಡ ದೃಷ್ಯವೆಲ್ಲವೂ ಸ್ವಪ್ನವೆಂದು ಬಗೆಯುವನು.

ಮಾನವನು ವಿಶ್ವದಲ್ಲಿ ಜನ್ಮ ಸಿದುದು ಸ್ವಾರ್ಥ ಸಾಧನೆಗಾಗಿ ಅಲ್ಲ. ಪರೋಪಕಾರ್ಯಾರ್ಥವಾಗಿ ಎಂಬುದನ್ನು ಮನಗಾಣಬೇಕು. ವಿಶ್ವದ ಪ್ರತಿಯೊಂದು ವಸ್ತುವಿನ ರಕ್ಷಕನಾಗಬೇಕು. ಪ್ರತಿಯೊಂದು ಪ್ರಾಣಿಗಳ ಮೇಲೂ ಮಾನವನ ಮಮತೆಬೇಕು.

ಒಂದು ಗೋವು ಹೊಳೆಯ ಈ ದಂಡೆಯಲ್ಲಿ ಮೇಯುತ್ತಿರುವಂತೆ ಹೊಳೆಯ ಆಚೆಯ ದಂಡೆಯಲ್ಲಿಯ ಹಸಿರು ಕಂಡು ಆಚೆಯ ದಂಡೆಗೆ ತಲುಪಿದ ಕಾಲಕ್ಕೆ ಈಚೆಯ ದಂಡೆಯಲ್ಲಿಯೂ ಅದೇ ಪ್ರಕಾರ ಕಂಡು ಅತ್ತಿಂದಿತ್ತ ಇತ್ತಿಂದತ್ತ ಅಲೆಯುವದರಲ್ಲಿಯೇ ವ್ಯರ್ಥದಿನಗಳೆದು ಹೊಟ್ಟೆಗಿಲ್ಲದೆ ಮರುಗುವಂತೆ ಬಡತನದಲ್ಲಿದ್ದ ಮಾನವನಿಗೆ ಸಿರಿತನವು ಅಂದವಾಗಿ ಕಾಣಬಹುದು. ಆದರೆ ಅದು ಹುರುಳಿಲ್ಲದ ಜೀವನವೆಂಬುದು ಆ ಅಂತಸ್ಥಿಯನ್ನು ತಲುಪಿದಾಗ ಅರಿವಾಗದೇ ಇರದು.

ಸಿರಿತನ ಬಡತನಗಳೆಂಬವು ಬಿಸಿಲು ನೆರಳುಗಳಿದ್ದಂತೆ. ಬಿಸಿನಲ್ಲಿ ಬೆಂದ ಮಾನವನು ನೆರಳಿನಾಶ್ರಯಪಟ್ಟು ಆನಂದಿತನಾಗುವನು. ಆದರೆ ಅರಗಳಿಗೆಯಲ್ಲಿದ್ದ ಆನಂದವು ಕೊನೆಯ ವರೆಗೂ ಆತನಲ್ಲಿರದು. ಹಾಗೆಯೇ ನೆರಳಿನಲ್ಲಿದ್ದವನಿಗೆ ಬಿಸಿಲಿನ ತಾಪು ಗೊತ್ತಾಗದು. ಹೀಗೆಯೇ ಬಡತನ ಸಿರಿತನದ ಪಾಡಾಗಿದೆ. ಇಂಥ ಅಲ್ಪ ಸುಖಕ್ಕಾಗಿ ವ್ಯರ್ಥ ಕಷ್ಟಪಡದೇ ನಿತ್ಯ ಸುಖವನ್ನು ಪಡೆಯುವದಕ್ಕೋಸ್ಕರ ಹೆಣಗುವವನೇ ಮಾನವ.

ಜನತೆಯು ಇನ್ನಿತರರಿಗೆ ಬೋಧೆಯ ಹೊರತಾಗಿ ಮತ್ತೇನನ್ನೂ ಕೊಡರು. ಕುಡಿಯಲು ನೀರಿಲ್ಲದ ನಿರ್ಜಲ ಪ್ರದೇಶದ ಪ್ರವಾಸಿಕನಿಗೆ ಮೇಲೆ ಸುರಿಯುತ್ತಿರುವ ಮಳೆಯಿಂದ ತೃಷೆ ತೃಪ್ತಿಯಾಗಬಹುದೆ? ಅದರಂತೆಯೇ ಸಾವು ನೋವಿನಿಂದ ಬಳಲುವವನಿಗೆ ಹೇಳುವ ಮೇಲಣ ಮಾತಿನಲ್ಲಿಯೂ ಅರ್ಥವಿಲ್ಲ. ಮಾನವನು ಹೀಗೆ ಬರುತ್ತಿರುವ ದುಃಖದ ತೆರೆಗಳಿಗೆ ಎದುರಾಳಿಯಾಗಿ ಎದುರಿಸಬೇಕೇ ವಿನಃ ವ್ಯರ್ಥಾಲಾಪನೆಯು ಮಾನವ ಜೀವಿಗೆ ಸರಿಯಾದುದಲ್ಲ.

ಪ್ರವಾಹವು ತನ್ನ ಸಮಪಾತಳಿಯನ್ನು ಹೊಂದಿಕೊಂಡು ಹೋಗುವಂತೆ ಮಾನವನ ಜ್ಞಾನವೂ ವಿಶ್ವವನ್ನು ಹೊಂದಿಕೊಂಡು ಹೋಗಲು ಪ್ರಯತ್ನಪಡುವದು. ಕಾರಂಜಿಯಿಂದ ಪುಟಿಯುತ್ತಿರುವ ನೀರು ತನ್ನ ಸಮಪಾತಳಿಯನ್ನು ಕೂಡುತ್ತಿರುವಾಗ್ಗೆ ಮಾನವನು ಅದರ ಪುಟಿತಕ್ಕೆ ಆತಂಕವನ್ನು ಮಾಡಿ ಅಲ್ಪಮಟ್ಟಿನ ಪುಟಿತಕ್ಕೆ ಆಸ್ಪದ ಮಾಡಿದಂತೆ ಮಾನವನ ಜ್ಞಾನವೂ ಕೂಡ ತನ್ನ ಸಮಪಾತಳಿಯನ್ನು ಮುಟ್ಟುತ್ತಿರುವಾಗ್ಗೆ ವಿಶ್ವದಲ್ಲಿ ಮಾನವನಿಂದಲೇ ನಿರ್ಮಿತವಾದ ಸ್ವಾರ್ಥತೆ ಮುಂತಾದ ಆತಂಕಗಳ ಬಾಧೆಯಿಂದ ಅಲ್ಪಜ್ಞಾನಿಯಾಗುವನೇ ಹೊರತು ಮಾನವನು ವಿಶ್ವದ ಅತ್ಯುಚ್ಚವ್ಯಕ್ತಿಯಾಗುತ್ತಿರುವಲ್ಲಿ ಸಂದೇಹವಿರುತ್ತಿರಲಿಲ್ಲ.

ಮಾನವನು ಮಾನವನಾಗಿ ಜೀವಿಸಬೇಕಾದರೆ ಮನೋಭೂಮಿಯಲ್ಲಿ ಬೆಳೆದ ವಿವಿಧ ತೆರನಾದ ಕಸಕಡ್ಡಿಗಳಂತಹ ಸ್ವಾರ್ಥತೆ, ಕಾಮ, ಕ್ರೋಧ, ಮದ, ಮಾತ್ಸರ್ಯಗಳನ್ನು ಕಿತ್ತೊಗೆದು ಆತ್ಮಶುದ್ಧಿಯನ್ನು ಮಾಡಿಕೊಂಡು ಭಕ್ತಿ, ವೈರಾಗ್ಯಗಳ ಬಿತ್ತನ್ನು ಬಿತ್ತಿದಲ್ಲಿ ಮಾತ್ರ ಅಂಥ ಬಿತ್ತುಗೆಯ ಫಲಪ್ರಾಪ್ತಿಯಾಗುವದೇ ವಿನಃ ವ್ಯರ್ಥವಾಗಿಹ ಆಚರಣೆಯು ಶ್ವಾನವು ಬೂದಿಯಲ್ಲಿ ಹೊರಳಿದಾಕ್ಷಣ ಶಿವಭಕ್ತನಾಗಲು ಹೇಗೆ ಸಾಧ್ಯವಿಲ್ಲವೋ ಹಾಗೆ ಎಲ್ಲವೂ ವ್ಯರ್ಥ. ಮಾನವನ ಸ್ಥಿರವಾದ ನಿಲವು ಆತ್ಮೋನ್ನತಿಯು. ಆ ಆತ್ಮೋನ್ನತಿಯನ್ನು ಪಡೆಯಲು ಆತ್ಮಶುದ್ಧಿ ಅತ್ಯವಶ್ಯವು. ಆತ್ಮಶುದ್ಧಿ ಮಾನವನೇ ನಿಜವಾದ ಮಾನವ.

# ಆತ್ಮಾನುಸಂಧಾನ.

(ಲೇಖಕರು:— ಶ್ರೀ. ಸದಾಶಿವ ಎಮ್. ತೆನಿಹಳ್ಳಿ, ವಿಜಾಪುರ.)

ಪರಮಾತ್ಮನು ಸಕಲಾರ್ಥಸಾಧಕನು. ಎಲ್ಲ ಘಟಗಳಿಗೂ ಮೃತ್ತಿಕೆಯೇ ಸಾಧಕವಾಗಿರುವಂತೆ ಚರಾಚರ ವಿಶ್ವಪ್ರಪಂಚಕ್ಕೆ ಪರಮಾತ್ಮನೇ ಸಾಧಕನಿರುವನು. ಆದರೆ ನಾಮ, ರೂಪ, ಕ್ರಿಯಾದಿಗಳಿಂದ ಮಾತ್ರ ಜಗತ್ತನ್ನು ಪರಮಾತ್ಮನಿಂದ ದೂರಿರಬೇಕಾಗಿರುವದು. ಚತುರ್ವಿಧ ಪುರುಷಾರ್ಥಗಳಿಗೂ ಕೂಡ ಪರಮಾತ್ಮನು ಸಾಧಕವಾಗಿರುವನು. ಇವುಗಳ ಪೈಕಿ ಧರ್ಮ ಅರ್ಥಗಳು ಭೋಗಗಳಿಗಾಗಿ ಕಾಮ, ಮೋಕ್ಷಗಳು ತ್ಯಾಗಕ್ಕಾಗಿರುವವು. ಆದರೆ ಪವಿತ್ರವಾದ ಧರ್ಮದ ಬೆಂಬಲವಿದ್ದರೆ, ಮಾತ್ರ ಎಲ್ಲವುಗಳೂ ಮೋಕ್ಷಮಾರ್ಗದತ್ತ ಸಾಧಕನನ್ನು ಒಯ್ಯುವವು. ಅನಾಸಕ್ತ ಬುದ್ಧಿಯಿಂದ ಸತ್ಕರ್ಮಗಳನ್ನು ಮಾಡಿ ಅದರಿಂದ ಬಂದ ಅರ್ಥವು ಧರ್ಮಕ್ಕೆ ಸಹಾಯಕವಾಗುವದು. ಆದ್ದರಿಂದ ಸಕಲಪ್ರಪಂಚಕ್ಕೂ ಆತ್ಮನಿಗೂ ಎಂದಿಗೂ ಅಗಲದಂಥ ಸಮ್ಮಂಧವಿರುವದು. ಕರಣಾದಿಗಳಲ್ಲಿ ನಡೆಯುವ ಸೂಕ್ಷ್ಮವ್ಯಾಪಾರಗಳಿಗೆ ಪ್ರತ್ಯಗಾತ್ಮನು ಸಾಧಕರೂಪದಿಂದಿರುವನು. ಆದರೆ ನಾಮರೂಪಾದಿಗಳ ಅರ್ಥಹಚ್ಚಿ ಕರಣಗಳನ್ನೂ ನೋಡುವಾಗ ಪ್ರತ್ಯಗಾತ್ಮನು ದೂರಿರುವನು.

ನಮ್ಮ ಕಣ್ಣಿಗೆ ಕಾಣುವದೆಲ್ಲವೂ ಪರಮಾತ್ಮನ ವಿಲಾಸವೆಂದು ತಿಳಿಯಬೇಕು. ಆದರೆ ದೇಹಾದಿಗಳ ಉಪಾದಿಯಿಂದ ಶರೀರದಲ್ಲಿ ಆತ್ಮನಿಗೆ ಸಂಕೋಚತ್ವ ಬಂದಿರುವದು. ಶುದ್ಧಬುದ್ಧಿಯಿಂದ ನೋಡಿದರೆ ಆ ಸಂಕೋಚತ್ವವು ನಾಶವಾಗಿ ಈ ಪ್ರಪಂಚವೇ ಶಿವಾಕಾರವಾಗಿ ಕಾಣುವದು, ಶರೀರದಲ್ಲಿಯು ಜ್ಞಾನವಾಹಕ ನಾಡಿಗಳು ಶರೀರದ ತುಂಬಾ ವ್ಯಾಪಿಸಿಬಿಟ್ಟಿರುವವು. ಈ ಜ್ಞಾನವಾಹಕ ನಾಡಿಗಳಲ್ಲಿ ಪರಮಾತ್ಮನ ಜ್ಞಾನವನ್ನು ಹೀರಿಕೊಳ್ಳುವ ಶಕ್ತಿಯಿರುವದು. ಆದ್ದರಿಂದ ನಿರ್ವಿಕಲ್ಪ ಸಮಾಧಿಯಲ್ಲಿ ಸಂಪೂರ್ಣ ಅರುವಿನ ಸ್ಥಿತಿಯನ್ನು ಮುಟ್ಟಿದಾಗ ಅದರಿಂದ ನಮಗೆ ಸಮಾಧಾನವಾಗುವದು.

ಮಣಿಯನೆಣಿಸಿ ದಿನವ ಕಳೆಯಲು ಬೇಡ ।
ಖಣಿಯ ಪೂಜಿಸಿ ದಿನವ ಕಳೆಯಲು ಬೇಡ ॥
ಕ್ಷಣದಲ್ಲಿಯು ಅರ್ಧಕ್ಷಣವನ್ನಾದರು ।
ನಿರ್ವಿಕಲ್ಪ ಸಮಾಧಿಯಲಿ ನಿಜದ ನೆನಹನ್ನು ಕಾಣು ।
ಬೆಂಕಿಯೊಳಗಿನ ಬಿಸಿಯು ನಿರೊಳಗುಂಟೇ ?
ಕೂಡಲ ಸಂಗಮದೇವ. ॥

ಇದು ಬಸವಣ್ಣನವರ ಆತ್ಮಾನುಭವದ ವಿಚಾರಸರಣಿಯು. ನಿರ್ವಿಕಲ್ಪ ಸಮಾಧಿಗೆ ಅವರು ಕೊಟ್ಟಿರುವ ಮಹತ್ವವನ್ನು ಇದರಿಂದ ತಿಳಿಯಬೇಕಾಗಿರುವದು. ವಿದ್ಯುತ್ ಶಕ್ತಿಯಿಂದಲೇ ಇಲೆಕ್ಟ್ರಿಕ್ ಬಲ್ಬಿನಲ್ಲಿ ಬೆಳಕು ಕಾಣುವಂತೆ, ಪರಮಾತ್ಮನ ಒಂದಂಶವೇ ಶರೀರದಲ್ಲಿ ಪ್ರತ್ಯಗಾತ್ಮನೆಂದು ಪ್ರಕಾಶಿಸುವನು. "ಕೊಕ್ಕಾಬತ್ತಿ ಕೋಡಬತ್ತಿ ನಾಡಿಗೆಲ್ಲ ಒಂದೇ ಬತ್ತಿ" ಎಂಬ ಜನಪದ ನಾಣ್ಣುಡಿಯೂ ಕೂಡ ಆತ್ಮನ ಅನಂತತ್ವವನ್ನು ಸೂಚಿಸುತ್ತದೆ. ಅದರಂತೆ ಅಲ್ಲಮಪ್ರಭು ಮಾಯಾಂಗನೆಯರ ಸಂವಾದದಲ್ಲಿ "ನಾನು ದೇಶವಾಸಿಗನಲ್ಲ ಪರದೇಶಿ" ಅಂತಾ ಅಲ್ಲಮನಿಂದ ಹೊರಬಿದ್ದ ನುಡಿಯು ದೇಶದ ಮರ್ಯಾದೆಯನ್ನು ಮಿಕ್ಕಿನಿಂತು ಮಾತನಾಡಿದ್ದು ಅದೆ. ಅವಿದ್ಯೆಯಿಂದ ಕೂಡಿದ ಈ ಲೋಕದವನೂ ನಾನಲ್ಲ. 'ವಿದ್ಯಾಶಕ್ತಿಯಿಂದೊಡಗೂಡಿದ ಬ್ರಹ್ಮಪುರವೇ ನನ್ನ ವಾಸಸ್ಥಳ. ಎಂಬ ಅರ್ಥಗರ್ಭಿತ ನುಡಿಯು ಅಲ್ಲಮನಿಂದ ಹೊರಬಿದ್ದಿರುವದು. ನಿನ್ನ ಸ್ವರೂಪದಲ್ಲಿ ಇಲ್ಲದ್ದನ್ನು ನೀನು ಕಲ್ಪನೆ ಮಾಡಿಕೊಂಡದ್ದರಿಂದ ಜಗತ್ತು ಸುಳ್ಳು ಮತ್ತು ಆತ್ಮನು ಬಹುದೂರನು. ಅಂತಾ ಹೇಳಬೇಕಾಯಿತು.

ಕಾಲವೂ ಕೂಡ ಪರಿಚ್ಛಿನ್ನವಿರುವದರಿಂದ ಪರಮಾತ್ಮನು ಕಾಲಾತೀತನಿರುವನು. ಭವಿಷತ್ತು ವರ್ತಮಾನ ಕಾಲವಾಗಬಹುದು. ವರ್ತಮಾನ ಕಾಲವು ಭೂತಕಾಲವಾಗುವದು. ಹೀಗೆ ಕ್ಷಣಕ್ಷಣಕ್ಕೂ ಕಾಲವು ಗತಿಸುತ್ತಾಹೋಗುವದು. ಕಾಲನ ಪ್ರವಾಹವು ಎಡೆಬಿಡದೇ ಸಾಗಿರುವದು. ಆದ್ದರಿಂದ ಕಾಲವೂ ಶಾಶ್ವತವಲ್ಲ. ಅದು ಅಮೂರ್ತವಿದ್ದರೂ ಮೂರ್ತ ವಸ್ತುಗಳನ್ನು ಭಕ್ಷಣಮಾಡುವದು. ಆದರೆ ಈ ಕಾಲಚಕ್ರವನ್ನು ಅರುವು ನಷ್ಟಮಾಡುವದು. ಅಂದು ಇಂದು ಮುಂದುಗಳಿಗೆ ಅರುವೇ ಆಶ್ರಯುವಾಗಿರುವದು. ಆದ್ದರಿಂದ ಆತ್ಮನಿಗೆ ಅಜಹೆ, ನಿತ್ಯ ಎಂಬ ಸೂಚಕಾರ್ಥವು ಜೋಡಿಸಲ್ಪಟ್ಟಿರುವದು.

ಭೂಲೋಕವು ಸ್ವರ್ಗಲೋಕದಿಲ್ಲಿರುವದಿಲ್ಲ, ಸ್ವರ್ಗಲೋಕವು. ಭೂಲೋಕದಲ್ಲಿರುವದಿಲ್ಲ, ಎರಡೂ ಲೋಕಗಳು ಪಾತಾಳಲೋಕದಿಲ್ಲಿರುವದಿಲ್ಲ. ಆದರೆ ಆತ್ಮನು ಮಾತ್ರ ಎಲ್ಲ ಲೋಕಗಳಲ್ಲಿಯೂ ಇರುವನು. ಪಂಚಭೂತಗಳಲ್ಲಿರುವ ಆಕಾಶಕ್ಕೆ ನಾವು ಅನಂತವೆಂದು ಕರೆಯುವೆವು. ಇಂಥಮಹಾಕಾಶವೂ ಕೂಡ ಅರುವಿನ ದೃಷ್ಟಿಯಿಂದ ಅಣುವೆನಿಸಿಕೊಳ್ಳುವದು. ಅನಂತಾಕಾಶವು ಸ್ವರೂಪದಲ್ಲಿ ಒಂದು ಕೂದಲಿನ ಅಳತೆಯಷ್ಟಿರುವದರಿಂದ, ಪರಮಾತ್ಮನಿಗೆ ವ್ಯೋಮ

ಕೇಶ ಅಂತಾ ಹೆಸರು ಬಂದಿರುವದು. ಆದ್ದರಿಂದ ಆತ್ಮನು ದೇಶ, ಕಾಲ, ವಸ್ತುಗಳಿಗತೀತನಿದ್ದು, ಸ್ವಯಂ ಪೂರ್ಣನಿರುವನು. ಅಂಥ ಆತ್ಮನ ಸ್ವರೂಪವೇ ನೀನಾಗಿರುವಿ. ಈ ರೀತಿ ಶಿವಸ್ವರೂಪ ಅನುಭವ ಬಂದಾಗ ಸ್ಥೂಲ, ಸೂಕ್ಷ್ಮ, ಕಾರಣ-ಮಹಾಕಾರಣ ಶರೀರಗಳ ಭಯವೂ ಆತನಿಗಿರುವದಿಲ್ಲ. ಅದುವೇ ನಿಜಾನಂದವು. ಅದು ಮತ್ತು ಸಾಂಪ್ರದಾಯಗಳನ್ನು ಮಿಕ್ಕಿನಿಂತಿರುವದು. ಅದು ಪ್ರತಿಬಿಂಬ ಸ್ಥಾನದಲ್ಲಿರುವದರಿಂದ ಅದಕ್ಕೆ ಸೀಮೆಯಿದೆ. ಈ ಸೀಮೋಲ್ಲಂಘನೆಯ ನಂತರ ಕಳೆದುಳಿದುದೇ ಉಳುಮೆಯು, ಅದುವೇ ಪೂರ್ಣವು.

ಪ್ರಕೃತಿಯು ವಿಸ್ತಾರವೇ ಜಗತ್ತು ಎಂದು ತಿಳಿಯುಬೇಕು. ಆಕುಂಚನವೇ ಪ್ರಳಯುವು. ಪ್ರಕೃತಿಯು ಗರ್ಭದಿಂದಲೇ ಪಂಚಭೂತಾದಿಗಳು ಹೊರ ಬಂದಿರುವವು. ಈ ಪ್ರಕೃತಿಗೆ ಆಶ್ರಯುವಾಗಿರುವದೇ ಉಳಿಮೆಯ ಅರುವು. ಪ್ರಕೃತಿ ಸೌಂದರ್ಯದಾಚೆಗೆ ಪುರುಷೋತ್ತಮನ ದಿವ್ಯಶಕ್ತಿಯಿದೆ, ಅದು ಗಂಭೀರವು, ಅದ್ವಯುವು, ಏಕಮೇವಾದ್ವಿತಿಯುವು ಇಂಥ ವಸ್ತುವನ್ನು ಆರು ಬಲ್ಲರು?

ಪೂಜೆ ಪುರಸ್ಕಾರಗಳಿಂದ ಆರ್ತನೆನಿಸಿಕೊಳ್ಳುವನು. ಸಂಪತ್ತನ್ನು ಬೇಡಿಕೊಳ್ಳುವವನು. ಆರ್ಥಾರ್ಥಿಯುನಿಸುವನು. ಆದರೆ ಪ್ರಕೃತಿಯು ಶೋಧಕನು ಮಾತ್ರ ಜಿಜ್ಞಾಸುವೆನಿಸಿಕೊಳ್ಳುವನು. ಮುಕ್ತಿಯೋ, ಜ್ಞಾನಿಯ ಕೊನೆಯಿರುವದರಿಂದ ಪರಮಾತ್ಮನಿಗೆ ಈ ಜ್ಞಾನಿಯು ಔರಸ ಪುತ್ರನು.

ಅನುಭವವು ಪರಿಚ್ಛಿನ್ನವಿದ್ದರೆ ಪೂರ್ಣವೆನಿಸಲಾರದು. ಪೂರ್ಣ ಅನುಭವದಲ್ಲಿಯೇ ವೃತ್ತಿಯು ಪರಮಾತ್ಮನ ಆಕಾರವಾಗುವದು. ಪೂರ್ಣ ಅನುಭವವು ಎಷ್ಟೇ ಶುದ್ಧವಿದ್ದರೂ ಆದರಲ್ಲಿ ಒಂದು ಕೊರತೆಯಿರುವದು. ಯಾಕಂದರೆ ನಿರ್ವಿಕಲ್ಪ ಸಮಾಧಿಯಿಂದ ಉತ್ಥಾನವಾದನಂತರ ಸುಖದ ಅನುಭವಾಗುವದರಿಂದ, ಆ ಸುಖಾನುಭವದಲ್ಲಿ ಸಾತ್ವಿಕ ಗುಣವಿರುವದು. ಎಲ್ಲಿಯು ವರೆಗೆ ವೃತ್ತಿ ಇರುವರೋ ಅಲ್ಲಿಯ ವರೆಗೆ ಅನುಭವಕ್ಕೆ ಸೀಮೆಯಿರುವದು. ಅದುವೇ ನಿಜಾನಂದ ಬೋಧೆಯೆನಿಸುವದು. ಇದನ್ನು ಕಳೆದುಳಿದದ್ದು ಯಾವ ತತ್ವವಿರುವದೋ ಅದುವೇ ಗಂಭೀರ ಅಧ್ವಯ ತತ್ವವೆನಿಸುವದು. ಆಕಾಶವು ವಾಯುವಿನನ್ನು ಗರ್ಭೀಕರಿಸಿಕೊಂಡಿದ್ದರೂ ವಾಯುವಿನ ಗುಣ ಮಾತ್ರ ಆಕಾ

ಶದಲ್ಲಿರುವದಿಲ್ಲ. ಅದರಂತೆ ಆತ್ಮನು ಮಾಯೆಯ ಸ್ವರೂಪವನ್ನು ಗರ್ಭೀಕರಿಸಿಕೊಂಡಿದ್ದರೂ, ಮಾಯೆಯ ಗುಣಗಳು ಮಾತ್ರ ಆತ್ಮನಲ್ಲಿರುವದಿಲ್ಲ. ಇದನಾರುಬಲ್ಲರು?

ಸರ್ವಪ್ರಮಾಣಗಳಿಗೂ ಆಶ್ರಯವಾಗಿರುವ ಆತ್ಮನನ್ನರಿಯಲು ಯಾವ ಪ್ರಮಾಣಗಳಿಗೂ ಶಕ್ತಿಯಿರುವದಿಲ್ಲ. ಆದರೆ ಶಬ್ದ ಪ್ರಮಾಣವು ಮಾತ್ರ ಗುರು-ಶಿಷ್ಯರಲ್ಲಿ ನಡೆಯುವದು. ಗುರುವು ಎರಡು ಮುಖ್ಯ ಮಾತುಗಳನ್ನು ಬೋಧಿಸುವನು. (೧) ನಾನು ಹೇಳುವದೆಲ್ಲವೂ ಸತ್ಯವೆಂದು ತಿಳಿಯಬೇಡ. (೨) ನನ್ನ ಮಾತನ್ನು ಮಾತ್ರ ಮೀರಬೇಡ. ಆತ್ಮನ ವಿಷಯವನ್ನು ಪ್ರತಿಪಾದನೆ ಮಾಡುವಾಗ ಎದುರಾಗಿ ಬಂದ ವಿಷಯಗಳನ್ನು ಅಲ್ಲಗಳೆಯುತ್ತಾ ಹೋಗುವನು. ಹೀಗೆ ಅಲ್ಲಗಳೆಯಬೇಕಾದರೆ ಆ ವಸ್ತುಗಳು ಶಬ್ದಕ್ಕೆ ಗೋಚರವಾಗಲೇಬೇಕು. ಇದುವೇ "ನಾನು ಹೇಳುವದೆಲ್ಲವೂ ಸತ್ಯವೆಂದು ತಿಳಿಯಬೇಡ'' ಎಂಬ ವಾಕ್ಯದ ಅರ್ಥವಿರುವದು. ಪರಮಾತ್ಮನಲ್ಲಿ ಒಂದಾದಾಗ ಅಲ್ಲಿ ಶಬ್ದಮುಗ್ಧವಾಗುವದು. ಅಲ್ಲಿ ಹೇಳುವ ಗುರುವೂ ಇಲ್ಲ, ಕೇಳುವ ಶಿಷ್ಯನೂ ಇಲ್ಲ. ಅನ್ಯದರ ಭಾವವಿಲ್ಲದ ಸ್ಥಿತಿಗೆ "ನನ್ನ ಮಾತನ್ನು ಮೀರಬೇಡ" ಎಂಬ ಉಪದೇಶದ ಅರ್ಥವಿರುವದು. ಯಾವಾತನು ತನಗೆ ಆತ್ಮದರ್ಶನವಾಗಿದೆಯೆಂದು ಹೇಳುವನೋ ಅದು ಅವನಿಗೆ ತಿಳಿದಿಲ್ಲ. ಯಾವಾತನು ತನಗೆ ತಿಳಿದಿಲ್ಲವೆಂದು ಹೇಳುವನೋ ಅದು ಅವನಿಗೆ ತಿಳಿದಿರುವದು. ಈ ರೀತಿ ಆತ್ಮನ ತಿಳುವಳಿಕೆಯು ತಿರುವುಮುರುವಾಗಿರುವದು. ಆತ್ಮನು ಬದಲಾವಣೆಯಾಗತಕ್ಕವನಲ್ಲ ಆದಿಭೌತಿಕ ಆದಿದೈವಿಕ ಆಧ್ಯಾತ್ಮಿಕ ತಾಪಗಳು ಶರೀರಕ್ಕಲ್ಲದೆ ಆತ್ಮನಿಗಿರುವದಿಲ್ಲ. ಆದ್ದರಿಂದ ಜ್ಞಾನಿಗಳಾದವರು ತಾಪತ್ರಯಗಳನ್ನು ಆತ್ಮನ ಕಡೆಗೆ ಒಯ್ಯುವದಿಲ್ಲ.

ಬದ್ಧಜೀವಿ, ಮುಕ್ತಜೀವಿ, ನಿತ್ಯಮುಕ್ತ ಇವರುಗಳ ವ್ಯಾಖ್ಯೆಯನ್ನು ಸ್ವಲ್ಪದರಲ್ಲಿ ಮಾಡುವಾ, ತ್ರಿಗುಣಗಳಿಂದ ಕೂಡಿಕೊಂಡವನು ಬದ್ಧಜೀವಿಯು ತಮ ರಜೋಗುಣಗಳಲ್ಲಿ ಮುಕ್ತತೆಯ ಆಶೆಯಿರುವದಿಲ್ಲವಾದ್ದರಿಂದ ಅದು ಬದ್ಧ ಜೀವಿಯನಿಸುವದು. ತಮ ಮತ್ತು ರಜೋಗುಣಗಳಿಂದ ಬಿಡುಗಡೆಯಾದವನೇ ಮುಕ್ತ ಜೀವಿಯು. ಯಾಕಂದರೆ ಕೇವಲ ಸತ್ವಗುಣದಲ್ಲಿ ಮಾತ್ರ ಮುಕ್ತತೆಯ ಹಂಬಲವಿರುವದು. ಗುಣರಹಿತನಾದ ಆತ್ಮನಿಗೆ ತ್ರಿಗುಣ

ಗಳ ಹೆಂಗವೇ ಇರುವದಿಲ್ಲ. ಇಂಥವನು ನಿತ್ಯಮುಕ್ತನು. ಆತ್ಮನಿಗೆ ಹಲವು ತನವಿರುವದಿಲ್ಲ. ಅಂತಃಕರಣದ ದೋಷದಿಂದ ಜೀವಿಗಳಿಗೆ ಮಾತ್ರ ಹಲವು ತನ ಬಂದಿರುವದು. ಸರ್ವಜೀವಿಗಳಿಗೆ ಪ್ರಕಾಶಕೊಡುವ ಆತ್ಮನು ಒಬ್ಬನೇ ಇರುವದರಿಂದ ಆತನಿಗೆ ಹಲವು ತನವಿರುವದಿಲ್ಲ. ಆತನು ಏಕಮೇವಾಧ್ವಿತಿಯನು. ಆತನಿಗೆ ಮರುವು ಇಲ್ಲ. ಸೂರ್ಯನಿಗೆ ಮೋಘವಡ್ಡ ಬಂದರೆ ಆತನು ಎರಡನೇಯು ಕಡೆಗೆ ಕಾಣಬಾರದಾಗಿತ್ತು. ಈ ದೋಷವು ಮೋಘದಲ್ಲಿರುವದು. ಸೂರ್ಯನಲ್ಲಿರುವದಿಲ್ಲ, ಅದರಂತೆ ಮರೆವು ಗುಣಗಳಲ್ಲಿರುವದೇ ಹೊರ್ತು ಗುಣಾತೀತ ಆತ್ಮನಲ್ಲಿರುವದಿಲ್ಲ. ಮರೆತದ್ದನ್ನು ಅರಿಯುವ ಗುಣವೂ ಇರುವದಿಲ್ಲ ಇಂಥ ಏಕರಸರೂಪ ಆತ್ಮನ ನಿಜತತ್ವವನು ಆರು ಬಲ್ಲರು?

ನಿಜತತ್ವವನು ತಿಳಿದ ಯೋಗಿಗೆ ಕರ್ಮದ ಕಾಟವಿರುವದಿಲ್ಲ. ಅಹಂ ದ ಅಭಿಮಾನಿಗಳಿಗೆ ಮಾತ್ರ ಕರ್ಮದ ಕಾಟವಿರುವದು. ಯಾಕಂದರೆ ಮಂದ ಬುದ್ಧಿಯವರಿಗೆ ಕರ್ಮದ ಚೌಕಟ್ಟಿನಲ್ಲಿಯೇ ಧರ್ಮದ ಬೆಳಕನ್ನು ತೋರಿಸ ಬೇಕಾಗಿರುವದು.

ಈ ಲೋಕದ ಚಿಂತೆ, ಪರಲೋಕದ ಚಿಂತೆ, ಪಾಪಗಳನ್ನು ಕಳೆಯುವ ಚಿಂತೆ ಇವುಗಳೆಲ್ಲವೂ ಬಾಧಿಸದಂತೆ ಕರ್ಮಮಾಡುವದು. ಜೀವಭಾವದ ಸ್ವಭಾವ ವಾಗಿರುವದು. ನಿಜವನ್ನರಿತ ಪುಣ್ಯ ಪುರುಷನಿಗೆ ಈ ಕರ್ಮ ಬಂಧನಗಳಿರುವ ದಿಲ್ಲ. ಆಭಾಗ್ಯ ಪುರುಷನು ಜೀವಿಗಳಿಗೆ ಆಪ್ತಕಾಮನಾಗಿ ತನ್ನ ಸ್ವರೂಪ ದಲ್ಲಿಯೇ ತಾನಿರುವನು. ಸ್ವರೂಪವೇ ತಾನಾಗಿರುವಾಗ ಅನ್ಯವಸ್ತುಗಳ ಬಯಕೆಯು ಎಲ್ಲಿಂದ ಬರಬೇಕು? ಕಾರಣ ನಿಜತತ್ವವನ್ನರಿತ ಯೋಗಿಗೆ ಕರ್ಮದ ಕಾಟವಿಲ್ಲ.

ಒಬ್ಬ ಅರಸನಿಗೆ ಸ್ವಪ್ನ ಕಾಲದಲ್ಲಿ ಕಡು ಬಡತನ ಬಂದಂತೆ ಕಂಡರೂ ಎಚ್ಚರಿಕೆಯಲ್ಲಿ ಅದು ಸುಳ್ಳೆಂದು ತೋರುವದು. ಎಲ್ಲಿಯವರಿಗೆ ಕನಸು ಇರು ವದೋ ಅಲ್ಲಿಯವರೆಗೆ ಅದು ಸತ್ಯವೆಂದು ತೋರುವದು. ಎಚ್ಚರಿಕೆಯಲ್ಲಿ ಅದೇ ಕನಸಿನ ವ್ಯವಹಾರವು, ಮಿಥ್ಯವೆಂದು ತೋರುವದು. ಅದರಂತೆ ಎಲ್ಲಿಯವರೆಗೆ ಮಾಯಾಶಕ್ತಿಯು ಪ್ರಪಂಚವನ್ನು ಆವರಿಸಿರುವದೋ ಅಲ್ಲಿಯವರೆಗೆ ಈ ಜಗತ್ತು

ಮೋಹಕವಾಗಿ ಸತ್ಯವೆಂದು ತೋರುವದು. ಮಾಯಾಶಕ್ತಿಯು ಕಳಚಿಬಿದ್ದ ನಂತರ ಈ ಪ್ರಪಂಚವು ಶಿವಾಕಾರವಾಗಿ ಕಾಣುವದು. ಮಾಯಯು ಅವರಣವು ಭೂಲೋಕ ಸ್ವರ್ಗಲೋಕಗಳನ್ನು ಮುಕ್ತಿ ಎರಡನ್ನೂ ಒಂದೇ ವರ್ಗದಲ್ಲಿ ಸೇರಿಸಿಬಿಟ್ಟಿರುವದು. "ಮನವು ಮಾಧವನಲ್ಲಿ ಹೋಗುವತನಕ ಅನುಗಾಲ ಚಿಂತೆ" ಎಂದು ಹೇಳಿದ್ದು ಮಾಯಯು ಕಾಟವನ್ನು ಕಳೆಯುವ ಅನುಭವದ ನುಡಿಯಾಗಿರುವದು. ಅವಿವೇಕವೇ ಸಂಸಾರ ಶಬ್ದದ ವ್ಯಾಖ್ಯೆಯಿರುವದು ಆದರೆ ಈಶ್ವರ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಶಿವಸ್ವರೂಪವೇ ಕಾಣುವದು.

ಜೀವಬೇರೆ ಪರಮಾತ್ಮ ಬೇರೆ ಎಂದು ಅಸ್ತಿಕರ ಮತವು. ಶರೀರದಲ್ಲಿ ಜ್ಞಾನಶಕ್ತಿ ಪ್ರಧಾನನಾದ ಜೀವನೊಬ್ಬನು ಇರುವನು. ಪ್ರತಿಯೊಂದು ಶರೀರದಲ್ಲಿ ಜೀವಾತ್ಮನೊಬ್ಬನಿರುವನು. ಎಂಬ ತಿಳುವಳಿಕೆಯಿಂದ ಜೀವಾತ್ಮನನ್ನು ಪರಮಾತ್ಮನಿಂದ ಪ್ರತ್ಯೇಕಿಸಲ್ಪಟ್ಟಿರುವರು- ಇಂಥ ಅಸ್ತಿಕ ಮತದವರಿಗೆ ಜೀವ ಪರಮಾತ್ಮರ ಅರ್ಥವೇ ತಿಳಿದಿಲ್ಲವೆನ್ನಬೇಕು. ವಿದ್ಯ ಮತ್ತು ಅವಿದ್ಯಗಳು ಒಂದೇ ವಸ್ತುವಿನ ಎರಡು ಮಗ್ಗಲುಗಳಿದ್ದಂತೆ ಇದ್ದು ವಿದ್ಯಾಶಕ್ತಿಯಲ್ಲಿ ಪರಮಾತ್ಮ ಅವಿದ್ಯಯಲ್ಲಿ ಜೀವಾತ್ಮರಿರುವರು. ಸಮುಷ್ಟಿಯಲ್ಲಿ ಪರಮಾತ್ಮಭಾವ ವ್ಯಷ್ಟಿಯಲ್ಲಿ ಜೀವಾತ್ಮ ಭಾವವಿರುವದು. ಪೃಥ್ವಿ, ಅಪ್ಪು, ತೇಜ, ವಾಯು ಆಕಾಶ ಮಹತ್ತು, ಅಹಂಕಾರಗಳೆಂಬ ಏಳು ಅವರಣಗಳು ಪರಮಾತ್ಮನಿಗಿರುವವು. ಈ ಸಪ್ತ ಆವರಣಳು ಆವರಿಸಿದಾಗ ಜೀವನಿಗೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ತೋರುವವು. ಅವಿದ್ಯೆಯಲ್ಲಿ ಶಿವ, ಜೀವರಭಾವ ತೋರುವದು. ವಿದ್ಯೆಯಲ್ಲಿ ಪ್ರತ್ಯಗಾತ್ಮ ಪರಮಾತ್ಮರ ಭಾವವಿರುವದು. ಅವಿದ್ಯೆಯಿಂದ ಬಂದ ಆವರಣವು ಶಾಶ್ವತವಲ್ಲ. ಸೂರ್ಯನಿಗೆ ಮಂಜು ಮುಸುಕಿದಂತೆ ಆವರಣಗಳ ಸ್ಥಿತಿ ಇರುವದು. ವೇಶ್ಯಾಪುತ್ರನಿಗೆ ತನ್ನ ತಂದೆಯನ್ನು ತೋರಿಸಲಿಕ್ಕೆ ನಾಚಿಕೆ ಬರುವಂತೆ ಜ್ಞಾನಿಗೆ ಈ ಪ್ರಪಂಚವನ್ನು ತೋರಿಸಲಿಕ್ಕೆ ನಾಚಿಕೆ ಬರುವದು. ಮಲಿನತ್ವದಲ್ಲಿ ಜೀವಭಾವವಿರುವದು. ಶುದ್ಧತತ್ವದಲ್ಲಿ ಪರಮಾತ್ಮಭಾವವಿರುವದು. ಈ ವಿದ್ಯಾವಿದ್ಯಗಳಲ್ಲಿ ಬಂದ ಭಾವಗಳನ್ನು ಕಳೆದರೆ ಎರಡೂ ಭಾವಗಳು ನಷ್ಟವಾಗಿ ಹೋಗುವವು. ಜೀವಕ್ಕೆ ಅನ್ಯವಾಗಿ ಪ್ರತ್ಯಗಾತ್ಮನಿರುವನು. ಸಪ್ತಾವರಣಕ್ಕೆ ಅನ್ಯವಾಗಿ ಪರಮಾತ್ಮನಿರುವನು. ಎರಡೂ ಉಪಾದಿಗಳು ನಷ್ಟವಾದನಂತರ ಉಳಿದದ್ದು ಅಖಂಡ ಅಧ್ವಯ ಏಕರಸರೂಪವಿರುವದು.

ಸೂರ್ಯನ ಬೆಳಕಿನಲ್ಲಿ ಅನಂತ ಪುಣ್ಯಪಾಪಗಳು ನಡೆದರೂ ಸೂರ್ಯ ಮಾತ್ರ ಕರ್ಮಸಾಕ್ಷಿಯಾಗಿರುವಂತೆ ಯೋಗಿಯೂ ಕೂಡ ಪ್ರಪಂಚದ ಆಗು ಹೋಗುಗಳಿಗೆ ಕರ್ಮಸಾಕ್ಷಿಯಾಗಿರುವನು. ಕೆಲವರು ಜ್ಞಾನಿಗಳೆಂದು ತಿಳಿದು ಕರ್ಮಬಿಟ್ಟು ವಿಕರ್ಮದ ಕಡೆಗೆ ಹೋಗುವರು. ಇಂಥ ಜ್ಞಾನಿಗಳ ವಿಷಯಕ್ಕೆ ಜಾಗ್ರತೆಯಿಂದಿರಬೇಕು.

ಜ್ಞಾನಿಗಳೆಂದರೆ ಯಾರು? ಪೂರ್ಣಸ್ಥಿತಿಯನ್ನು ಮುಟ್ಟುವ ವರೆಗೆ ಯಾವ ಯಾವ ಸ್ಥಿತಿಗಳನ್ನು ದಾಟಬಂದಿರುವನೋ ಆ ಸ್ಥಿತಿಯೇ ಜ್ಞಾನಿಯ ಅಂಗಗಳೆಂದು ತಿಳಿಯಬೇಕು. ಈ ವ್ಯವಹಾರವು ಬಾಹ್ಯ ಮತ್ತು ಅಂತರಿಕ ಅವಯವಗಳಿಂದ ನಡೆಯುವದು. ಬಾಹ್ಯವು ಕಾಣುವದು. ಅಂತರಿಕವು ಕಾಣಲಾರದು. ಜ್ಞಾನಿಯ ಅಂಗಗಳನ್ನು ಅನುಕರಣ ಮಾಡುವದೇ ಮುಮುಕ್ಷುವಿಗೆ ಸಾಧನೆಯಾಗಿರುವದು. ಜ್ಞಾನಿಯ ಅಂಗವೇ ಜ್ಞಾನಿಯ ಆಚರಣೆಯೆಂದು ತಿಳಿಯಬೇಕು. ನಿತ್ಯಾನಿತ್ಯಗಳ ವಿವೇಚನೆಯೇ ವಿವೇಕವೆನಿಸುವದು. ಪರಮಾತ್ಮನು ಅಪರೋಕ್ಷನಿದ್ದು ಪ್ರಪಂಚವು ಪ್ರತ್ಯಕ್ಷವಿರುವದು. ಪೂರ್ವಜನ್ಮದ ಪುಣ್ಯದಿಂದಾಗಲಿ ಮಹಾತ್ಮರ ದರ್ಶನದಿಂದಾಗಲಿ ವಿವೇಕವು ಬರುವದು. ಗಿಳಿಯಂತೆ ಮಾತಿನ ವಿವೇಕವು ಜ್ಞಾನಿಗಳಿಗಿರುವದಿಲ್ಲ. ವಿಷಯದ ಮೇಲಿನ ವಿರತಿಯೇ ಜ್ಞಾನಿಯ ವಿವೇಕಕ್ಕೆ ಗುರ್ತು ಇರುವದು. ಇಂಥ ವಿರತಿಯಿಂದ ಕೂಡಿದ ವಿವೇಕವೇ ಜ್ಞಾನಿಯ ಪೂರ್ವಾಂಗ ಸ್ಥಿತಿಯನಿಸುವದು. ವಿರಕ್ತನಾದವನು ಯಾವಾಗಲೂ ನಿಸರ್ಗದ ವಿರುದ್ಧವಾಗಿರುವನು. ಈ ವಿರಕ್ತಿಗೆ ಶಮ, ಗುಣವೇ ಗುರ್ತು. ಅರೇನಂದರೂ, ಆರು ಜರಿದರೂ, ಓದಂತಿರ್ಪುದೇ ಸಮತೆ. ನೊಂದು ಸೈರಸದವನು ಅಧಮನು. ಸೈರಿಸುವವನು ಮಧ್ಯಮನು. ನೊಂದೆನೆಂಬುದು ತಿಳಿವಳಿಕೆಯೂ ಕೂಡ ಇಲ್ಲದವನು ಉತ್ತಮನು. ಜ್ಞಾನಿಯ ವಿವೇಕಕ್ಕೆ ವಿರತಿಯೇ ಗುರ್ತು. ವಿರತಿಗೆ ಶಮೆಯೇ ಗುರ್ತು ಇರುವದು. ಶಮೆಗೆ ಮುಕ್ತನಾಗಬೇಕೆಂಬುದೇ ಸೂಚನೆಯನಿಸುವದು ಈ ಶಮೆಯಲ್ಲಿ ದಮೆ, ಶಾಂತಿ, ದಯಾ, ಶ್ರದ್ಧೆ, ಮಳೆಗಾಳಿಗಳನ್ನು ಸಹಿಸುವದು, ಸಮಾಧಾನ ಮೊದಲಾದವುಗಳಿರುವವು. ಮುಕ್ತಿಗೆ ಗುರುಸೇವೆಯೇ ಸೂಚನೆಯು. ಗುರುಸೇವೆಯಿಂದ ಬಂದ ಜ್ಞಾನವು ಫಲಕಾರಿಯಾಗುವದು. ಗುರುಸೇವೆಗೆ ವೇದಾರ್ಥವೇ ಸೂಚನೆಯು. ವೇದಾರ್ಥಕ್ಕೆ ಶರೀರದ ಮೇಲಿನ ಅಭಿಮಾನ ಬಿಟ್ಟದ್ದೇ

ಸೂಚನೆಯು ಈ ಅಭಿಮಾನ ಕಳೆದದ್ದಕ್ಕೆ ತಾನು ಯಾರು ಎಂಬ ತಿಳುವಳಿಕೆಯೇ ಸೂಚನಯು ತಾನಾರೆಂಬುದಕ್ಕೆ ಸೋಹಂ ಭಾವವೇ ಸೂಚನೆಯು, ಸೋಹಂ ಭಾವಕ್ಕೆ ಸಾರಸುಖವೇ ಸೂಚನೆಯು. ಸಾರಸುಖಕ್ಕೆ ಗುರು ಶಂಭು ಲಿಂಗವಾದದ್ದೇ ಸೂಚನೆಯು. ಈ ಎಲ್ಲ ಸಾಧನೆಗಳನ್ನು ಕಟ್ಟಿಕೊಂಡವನು ಜ್ಞಾನಿಯನಿಸುವನು.

## "ತತ್ವಮಸಿ ಮಹಾವಾಕ್ಯದ ಸಂದೇಶವೇನು?"

ಅನುಭವಕ್ಕೆ ಬಂದ ವಿಷಯವೇ ಉಪದೇಶಕ್ಕೆ ಹಿತಕಾರಿಯಾಗುವದು. ಅದು ಹೃದಯದಿಂದ ಹೃದಯಕ್ಕೆ ತಟ್ಟುವದು. ಈ ಶ್ರವಣಕ್ಕೆ ತತ್ವಮಸಿಯೇ ಮುಖ್ಯವು. ಗುರುವನ್ನಾಶ್ರಯಿಕೊಂಡು ಗುರುಮುಖದಿಂದ ತತ್ವಮಸಿಯನ್ನು ತಿಳಿಯತಕ್ಕದ್ದು. ತತ್ ತ್ವಂ ಅಸಿ ಎಂಬ ಮೂರು ಪದಗಳನ್ನು ಕೂಡಿಕೊಂಡಿರುವದು. ಪ್ರತಿಯೊಂದು ಪದದಲ್ಲಿ ಶಕ್ತ್ಯಾರ್ಥ ಲಕ್ಷಣಾರ್ಥವೆಂದು ಎರಡು ಅರ್ಥಗಳು ಹೊರಡುವವು ಸುವರ್ಣದ ಆಭರಣವು ಸುಂದರವಾಗಿ ನಾವು ರೂಪಾದಿಗಳನ್ನು ಕೂಡಿಕೊಂಡಿರುವದು. ಅಭರಣವು ಬೆಲೆಯುಳ್ಳದ್ದು ಎಂದು ಹೇಳಬೇಕಾದರೆ ಅದು ಸುವರ್ಣವನ್ನು ಕೂಡಿಕೊಂಡಿರುವುದರಿಂದಲೇ ಬೆಲೆಯುಳ್ಳದ್ದು ಅಂತಾ ಶಬ್ದದ ಪ್ರಯೋಗವಾಗಿರುವದು. ಆದ್ದರಿಂದ ಇದು ವಸ್ತುವಿನ ಲಕ್ಷಣವೆನಿಸುವದು. ಆಭರಣವು ಸುಂದರವೆಂದು ಹೇಳಬೇಕಾದರೆ ಅದು ಶಕ್ತಿಯಿಂದ ಕೂಡಿಕೊಂಡಿರುವದು. ಆದ್ದರಿಂದ ಇದು ವಸ್ತುವಿನ ಶಕ್ತಿಯನಿಸುವದು ಅದರಂತೆ ತತ್ ತ್ವಂ ಅಸಿ ಎಂಬ ಮೂರು ಪದಗಳಲ್ಲಿಯೂ ಪ್ರತ್ಯೇಕವಾಗಿ ಒಂದು ವಾಚ್ಯಾರ್ಥ (ಶಕ್ತಿ) ಮತ್ತೊಂದು ಲಕ್ಷಣಾರ್ಥ ಅಂತಾ ಎರಡು ಅರ್ಥಗಳು ಹೊರಡುವವು. ಪ್ರತಿಯೊಂದು ಶಬ್ದವು ಸಂಕೇತದಿಂದ ಕೂಡಿಕೊಂಡಿರುವದು. ಸಂಕೇತವು ಶಬ್ದವನ್ನಾಶ್ರಯಿಸಿ ಅರ್ಥವನ್ನು ಕೊಡುವದು. ಪ್ರಸ್ತುತಪ್ರಸಂಗದಲ್ಲಿ ತತ್ವಮಸಿಯು ಆತ್ಮನನ್ನು ಕುರಿತು ಸಂಕೇತವಾಗಿರುವದು.

ತ್ವಂ:— ತತ್ವಮಸಿ ವಾಕ್ಯವು ಪರಮಾತ್ಮನೇ ನೀನಿರುವಿಯೆಂದು ಅರ್ಥವನ್ನು ಕೊಡುವದು. ಈಗ ತ್ವಂ ಪದದ ವಾಚ್ಯಾರ್ಥದ ವಿವರಣೆಯನ್ನು ಮಾಡಬೇಕಾಗಿರುವದು. ಈ ಶರೀರವು ಪಂಚಿಕರಣಗಳ ಉಪಕರಣೆಗಳಿಂದ ತಯಾರಾಗಿರುವದು. ಶರೀರವೆಂದರೆ ಮೂರುತನು, ಮೂರುಗುಣ, ಮೂರು ವೃತ್ತಿ, ಮೂರು ಅಹಂಕಾರಗಳೆಂದು ತಿಳಿಯಬೇಕು. ಅಹಂಕಾರಕ್ಕೆ ಜನನ

ಮರಣಗಳಿದ್ದು ಶರೀರದ ಆರೋಪವನ್ನು ತನ್ನಲ್ಲಿ ಹುಟ್ಟಿಸಿಕೊಂಡು ವ್ಯವಹರಿಸುವದು. ಈ ಅಹಂಕಾರದಿಂದ ಕೂಡಿದ ಜೀವನೇ ಸ್ಥೂಲ ಶರೀರದಲ್ಲಿ ವಿಶ್ವಜೀವನೆಂದೂ ಸೂಕ್ಷ್ಮ ಶರೀರದಲ್ಲಿ ತೈಜಸಜೀವನೆಂದೂ ಕಾರಣ ಶರೀರದಲ್ಲಿ ಪ್ರಾಜ್ಞಜೀವನೆಂದು ಕರೆಯಲ್ಪಡುವನು. ಪಂಚೀಕರಣದಲ್ಲಿ ಆತ್ಮನೂ ಕೂಡಿಕೊಂಡಿರುವನು ಆದರೆ ವಿಂಗಡಿಸುವ ಶಕ್ತಿಮಾತ್ರ ಅದಕ್ಕಿರುವದಿಲ್ಲ. ಶರೀರವೇ ನಾನೆಂದು ತಿಳಿದು ಬುದ್ಧಿಜೀವಿಯಾಗಿರುವನು. ಆ ಸಾಧಕನಿಗೆ ಗುರು ಶ್ರುತಿಗಳ ಉಪದೇಶ ಇನ್ನೂ ಆಗಿರುವದಿಲ್ಲ. ಇದು ಸತ್ಯ ಅಸತ್ಯಗಳ ಮಿಶ್ರಣವಿರುವದು. ಆದ್ದರಿಂದ ಇದು ತ್ವಂ ಪದದ ವಾಚಾರ್ಥವೆನಿಸುವದು.

## "ತ್ವಂ ಪದದ ಲಕ್ಷಣಾರ್ಥ."

ಕರಣಾದಿಗಳಲ್ಲಿಯ ಗುಣಗಳನ್ನು ತನ್ನಲ್ಲಿ ಆರೋಪಿಸಿಕೊಂಡು ಶ್ರುದ್ಧಾಶುದ್ಧಗಳ ಮಿಶ್ರಣದಿಂದ ಕೂಡಿಕೊಂಡಿದ್ದು ತ್ವಂ ಪದದ ಶಕ್ತಿಯ ಅರ್ಥವೆಂದು ಮೇಲೆ ಹೇಳಲಾಗಿರುವದು. ಈ ವಾಚ್ಯಾರ್ಥವನ್ನು ಶುದ್ಧೀಕರಣ ಮಾಡುವದರಿಂದ ತ್ವಂ ಪದದ ಲಕ್ಷಣಾರ್ಥವಿರುವದು. ಈ ಲಕ್ಷಣಾರ್ಥವು ಮೂರು ತೆರನಾಗಿರುವದು. (೧) ಹೇಳಿದ್ದನ್ನು ಬಿಟ್ಟು ಮತ್ತೊಂದನ್ನರಿಯುವದು ಜಹದ ಲಕ್ಷಣವಿರುವದು. (೨) ಹೇಳಿದ್ದನ್ನು ಕಾಯಮ್ಮವಾಗಿಟ್ಟುಗೊಂಡು ಹೆಚ್ಚಿನದನ್ನು ಗ್ರಹಣಮಾಡುವದು. ಅಜಹದ ಲಕ್ಷಣವಿರುವದು. (೩) ಬಿಡತಕ್ಕದ್ದನ್ನು ಬಿಟ್ಟು ಗ್ರಹಣಮಾಡತಕ್ಕದ್ದನ್ನು ಮಾಡುವದು ಜಹಜಹ ಲಕ್ಷಣವೆನಿಸುವದು. ಪಂಚವಿಂಶತಿ ತತ್ವದಿಂದ ಕೂಡಿದ ಶರೀರದಲ್ಲಿ ಸ್ವಯಂಜ್ಯೋತಿಯ ಪುರುಷನೊಬ್ಬನು ಇರುವನೆಂದು ಪ್ರಥಕ್ಕರಣಮಾಡಿ ಕಂಡು ಹಿಡಿಯುವದೇ ಈ ಲಕ್ಷಣಾರ್ಥದ ಉದ್ದೇಶವಿರುವದು. "ನಾಮದಲಿ ಹೆಂಣಾದರೂ ಭಾವಿಸಲು ಗಂಡು ರೂಪು" ಅಂತಾ ಅಕ್ಕ ಮಹದೇವಿಯು ಅಂದದ್ದು ಜ್ಯೋತಿರ್ಮಯ ಪುರುಷನ ಕಡೆಗೆ ದೃಷ್ಟಿ ಇಟ್ಟು ಮಾತಾಡಿರುವಳು. ಆ ಪುರುಷನೇ ನಾನೆಂದು ತಿಳಿಯುವ ಪುಣ್ಯ ಪುರುಷನು ಪ್ರಪಂಚವನ್ನು ಗೆದ್ದವನು ಅಂತಾ ತಿಳಿಯಬೇಕು. ಗುರು ಶ್ರುತಿಗಳು ನೀನು ಯಾರು ? ಎಲ್ಲಿಂದ ಬಂದಿರುವಿ ? ಅಂತಾ ಉಪದೇಶಮಾಡುವರು. ಇದು ಬಾಹ್ಯದ ಉಪದೇಶವು ಆದರೆ ಆಂತರಿಕ ವಿಷಯಗಳ ಬಂಧನದಿಂದ ಬಿಡುಗಡೆಯಾಗಿ ಕೂಟಸ್ಥ ಚೈತನ್ಯನೇ ನಾನೆಂದು ತಿಳಿಯಬೇಕು. ಶರೀರಾದಿ ಸಕಲ

ತತ್ವಗಳ ಮಧ್ಯದಲ್ಲಿದ್ದರೂ ಎಲ್ಲದಕ್ಕೂ ಸಾಕ್ಷೀಯಾಗಿರುವದರಿಂದ ಕೂಟಸ್ಥ ನೆಂದು ಹೆಸರು ಬಂದಿರುವದು. (ನಿರಪೇಕ್ಷಿತಸಾಕ್ಷಿಯಾಗಿ) ಇದುವೇ ತ್ವಂ ಪದ ಶೋಧಿತ ಲಕ್ಷ್ಯಾರ್ಥವು. ಶೋಧನಮಾಡದೇ ಇದ್ದದ್ದು ತ್ವಂ ಪದದ ವಾಚ್ಯಾರ್ಥ ವೆನಿಸುವದು. ಕಾಯವು ಕರ್ರನೇ ಕಂದಿದರೇನು, ಮಿರ್ರನೇ ಮಿರುಗಿದರೇನು, ಅಂತರಂಗ ಶುದ್ಧಿಯಾಗಿ ಚನ್ನಮಲ್ಲಿಕಾರ್ಜುನನ ಶರೀರವು ಹೇಗಿದ್ದರೇನು? ಎಂದು ಅಕ್ಕನು ಶಿವಾನುಭವ ಮಂಟಪದಲ್ಲಿ ನುಡಿದದ್ದು ಕೂಟಸ್ಥಚೈತನ್ಯ ನನ್ನು ಆಶ್ರಯಿಸಿ ಮಾತನಾಡಿರುವಳು ನೀರೊಳಗಿನ ಕಮಲದಂತೆ ಸಾಕ್ಷೀ ಯಾಗಿರುವದೇ ಕೂಟಸ್ಥನ ಲಕ್ಷಣವಿರುವದು. ಇದುವೇ ತುರೀಯವು ಇದುವೇ ತ್ವಂ ಪದದ ಲಕ್ಷ್ಯಾರ್ಥವು.

ವಸ್ತುವಿನಲ್ಲಿ ಸಮರಸವಾಗುವದು ವಿಶೇಷಣವೆನಿಸುವದು. ವಸ್ತುವಿನನು ಬೇರ್ಪಡಿಸುವದು ಉಪಾಧಿಯೆನಿಸುವದು. ಆದ್ದರಿಂದ ಅಹಂಕಾರ ವಿಶೇಷಣ ದಿಂದ ಚೈತನ್ಯವು ಜೀವಸ್ವರೂಪವಾಗುವದು ಕಾರಣ ವಿಶೇಷಣದ ದೃಷ್ಟಿ ಯಿಂದ ಜೀವದ ಅರ್ಥ ಮಾಡಿಕೊಳ್ಳಬೇಕು. ಗುರು ಶ್ರುತಿಗಳ ಉಪದೇಶ ದಿಂದ ಅಹಂಕಾರ ವಿಶೇಷಣವು ಕತ್ತರಿಸಿದಾಗ ಆತ್ಮನ ಅರುವಾಗುವದು. ಮೂರು ಶರೀರಗಳಲ್ಲಿ ಮೂರು ಗುಣಗಳು ಮತ್ತು ವಿಶೇಷಣವಾದ ಮೂವರು ಜೀವಗಳು ಇರುವರು. ಜೀವಭಾವದಲ್ಲಿ ಒಬ್ಬನು ಕೀಳು ಸ್ಥಿತಿಯಲ್ಲಿರಬಹುದು ಮತ್ತೊಬ್ಬನು ಉತ್ತಮ ಸ್ಥಿತಿಯಲ್ಲಿರಬಹುದು ಉತ್ತಮ ಸ್ಥಿತಿಯಲ್ಲಿರುವ ಜೀವನು ಬಿಂಬದ ಕಡೆಗೆ ಲಕ್ಷಗೊಟ್ಟಾಗ ಪ್ರತಿಬಿಂಬದ ಜೀವಭಾವ ಹೋಗು ವದು. ಇದು ತ್ವಂ ಪದದ ಲಕ್ಷ್ಯಾರ್ಥವೆನಿಸುವದು. ಪ್ರತಿಬಿಂಬವೇ ತಾನೆಂದು ತಿಳಿದಾಗ ಕೆಳಮಟ್ಟದ ಜೀವಭಾವಬರುವದು, ಇದು ಉಪಾದಿಯಿಂದ ಕೂಡಿ ಕೊಂಡಿರುವದರಿಂದ ತ್ವಂ ಪದದ ವಾಚಾರ್ಥವೆನಿಸುವದು. "ಅಂಗದಾಚಾ ರವೇ ಅನಾಚಾರ ಲಿಂಗದಾಚಾರವೇ ಸದಾಚಾರ" ವೆಂದು ಬಸವಣ್ಣನವರು ಅಂದದ್ದು ತ್ವಂ ಪದದ ಲಕ್ಷ್ಯಾರ್ಥ ವಾಚ್ಯಾರ್ಥಗಳನ್ನು ಸೂಚಿಸುತ್ತದೆ. ಕಾಯ ಮನ ಭಾವದೊಳಗಿದ್ದು ಅವುಗಳ ವ್ಯಾಮೋಹವಿಲ್ಲದಂತಾಗಬೇಕು. ಬಿಂಬದ ಕಡೆಗೆ ಲಕ್ಷಗೊಟ್ಟಾಗ ಈ ಭಾವಬರುವದು. ಯೋಗಿಗಳು ಈ ಬಿಂಬದ ದರ್ಶನದಿಂದಲೇ ಆನಂದ ಹೊಂದುವರು. ಜೀವತ್ವದೊಳಗಿನ ಅವಿ

ದ್ಯೆಯ ಮಲಿನತ್ವವನ್ನು ಕಳೆಯುವದರಿಂದ ಪ್ರತ್ಯಗಾತ್ಮನ ತಿಳುವಳಿಕೆಯಾಗು ವದು ಆಗ ಸಾಕ್ಷೀಭೂತನಾಗಿ ಮಾತ್ರ ಉಳಿಯುವನು. ತ್ವಂ ಪದದ ವಾಚ್ಯಾರ್ಥ ಲಕ್ಷ್ಯಾರ್ಥಗಳು ಅವಾಂತರ ವಾಕ್ಯಗಳೆಸುವವು. ಇವುಗಳಿಂದ ಪಿಂಡ ಶರೀರದ ಶುದ್ಧಿಕರಣವಾಗುವದು.

## " ತತ್ ಪದದ ವಾಚಾರ್ಥವು "

ತತ್ ಪದವು ಕೇವಲ ಪರಮಾತ್ಮನ ವಿಷಯಕವಾಗಿರುವದು. ಇದುವೂ ಕೂಡ ಅವಾಂತರ ವಾಕ್ಯವೆನಿಸುವದು. ಯಾಕಂದರೆ ಶಬ್ದವು ಹೊರಗೆ ಬರ ಬೇಕಾದರೆ ಸಂಕೇತವನ್ನು ಕಟ್ಟಿಕೊಂಡೇ ಹೊರಗೆ ಬಂದಿರುವದು. ಪುರಷ ನಿಗೆ ಪ್ರಕೃತಿಯು ಸಂಕರ್ಷವಾದಾಗ ಜಗತ್ತಿನ ಉತ್ಪತ್ತಿಯಾಯಿತು. ಆದ್ದ ರಿಂದ ಶರೀರದಲ್ಲಿಯ ಜೀವನು ಪುರುಷನ ಅಂಶವೆಂದೇ ತಿಳಿಯಬೇಕು. ಸ್ವಾಂ ಪ್ರಕೃತಿಯಲ್ಲಿ ಆತ್ಮನ ಬಿಂಬ ಮೂಡುವದು. ಶರೀರದಲ್ಲ ಶಕ್ತಿಯು ಎಲ್ಲ ಅಂಗಗಳಲ್ಲಿರುವಂತೆ ಪ್ರಕೃತಿಯು ಕೂಡ ಪುರಷನಷ್ಟೇ ವ್ಯಾಪಕವಿರುವದು. ಶಕ್ತಿಯು ತನ್ನಿಂದ ತಾನೇ ಸೃಷ್ಟಿ, ಸ್ಥಿತಿ, ಲಯುಗಳನ್ನು ಮಾಡಲಾರದು. ಆದಕ್ಕೆ ಆಧಾರಭೂತವಾದ ಚೈತನ್ಯವೇ ಕಾರಣವಿರುವದು. ಆದ್ದರಿಂದ ಪ್ರಕೃತಿಯಲ್ಲಿ ಕಾಣುವ ಮಂಗಳಕಾರ್ಯಗಳು ಶಕ್ತಿಯದೇ ಇರುವದು. ಪರ ಮಾತ್ಮನನ್ನು ಸರ್ವಲೋಕಕ್ಕೆ ಮಹೇಶ್ವರನನ್ನಾಗಿ ಮಾಡಿದ್ದು ಈ ಪ್ರಕೃತಿ ಮಾತೆಯೇ ಇರುವಳು. ಪ್ರಕೃತಿ ಇಲ್ಲದಿದ್ದರೆ ಪರಮಾತ್ಮನನ್ನು ಯಾರೂ ಕೇಳುತ್ತಿರಲಿಲ್ಲ. ಇಲ್ಲಿ ಲಕ್ಷ್ಯದಲ್ಲಿಡತಕ್ಕ ಸಂಗತಿಯೆಂದರೆ, ವಿದ್ಯಾಪ್ರಕೃತಿಯೇ ಪರಮಾತ್ಮನನ್ನು ತೋರಿಸಬಲ್ಲದು. ಅವಿದ್ಯೆಯಿಂದ ಕೂಡಿದ ಪ್ರಕೃತಿಯಿಂದ ಜೀವಭಾವ ಬರುವದು. ಸ್ವಾಂ ಪ್ರಕೃತಿಯಲ್ಲಿ ಮರವೆಯು ಇರುವದಿಲ್ಲ. ಅರು ವಿನ ಬೆಳಕಿನಲ್ಲಿಯೇ ಆ ಪುಣ್ಯ ಪುರುಷನ ವ್ಯವಹಾರ ನಡೆಯುವದು. "ಯೋಗಿಗೆ ವರವಿದ್ಯೆಯುಂಬ ಕುಲವನಿತೆಯುಂಟು" ಎಂದು ವಿದ್ಯಾ ಪ್ರಕೃತಿ ಯನ್ನು ಕುರಿತು ಹೇಳಿದ್ದಾಗಿರುವದು. ಶುದ್ಧ ಪ್ರಕೃತಿಯಲ್ಲಿ ವಿಕಾರಗಳಿರು ವದಿಲ್ಲ. ಇಲೆಕ್ಟ್ರಿಕ್ ಬಲ್ಬವು ಒಳಗಿನ ಪ್ರಕಾಶವನ್ನು ಮರೆಮಾದೆ ತೋರಿ ಸುವಂತೆ ಶುದ್ಧ ಪ್ರಕೃತಿಯು ಚೈತನ್ಯ ಪ್ರಕಾಶವನ್ನು ಮರೆಮಾಡದೇ ಇದ್ದ ಕ್ಕಿದ್ದಂತೆ ತೋರಿಸುವದು. ಅಹಂಕಾರ ನಷ್ಟಮಾಡುವ ದಸೆಯಿಂದ ವಿದ್ಯಾ ಭಗವತಿ ಗೆ ಶರಣಾಗತರಾಗಲೇಬೇಕೆಂದು ಕೇನೋಪನಿಷತ್ತಿನ ಋಷಿಯು

ಹೇಳಿದ್ದು ಯತಾರ್ಥವಿರುವದು. ನಿರ್ವಿಕಲ್ಪ ಸಮಾಧಿಯಲ್ಲಿ ನಿಂತಾಗ ಶುದ್ಧ ಪ್ರಕೃತಿಯಿಂದ ಕೂಡಿಕೊಂಡಿರುವದರಿಂದ ತತ್‌ಪದದ ವಾಚಾರ್ಥ ವೆನಿಸುವದು.

## "ತತ್ ಪದದ ಲಕ್ಷ್ಯಾರ್ಥವು"

ಚೈತನ್ಯದ ಒಂದು ಭಾಗವು ತಮವಿರುವದು. ಮತ್ತೊಂದು ಭಾಗವು ಸತ್ವವಿರುವದು. ತಮದ ಭಾಗವು ಅವಿದ್ಯಾಶಕ್ತಿ ಪ್ರಧಾನವಾಗಿ ಜೀವಭಾವ ವೆನಿಸುವದು. ಸತ್ವದ ಭಾಗವು ವಿದ್ಯಾಶಕ್ತಿ ಪ್ರಧಾನವಾಗಿ ಶಿವಭಾವವೆನಿಸು ವದು. ಎರಡನ್ನೂ ಪ್ರಕಾಶಿಸುವ ಚೈತನ್ಯವು ಒಂದೇ ಇರುವದರಿಂದ ಏಕ ಮೇವಾದ್ವಿತಿಯವೆನಿಸುವದು. ಆದಕ್ಕೆ ಹುಟ್ಟು, ಸ್ಥಿತಿ, ಲಯುಗಳಿರುವದಿಲ್ಲ. ಪ್ರಕೃತಿ ವಿಶಿಷ್ಠನಾದಾಗ ಸೃಷ್ಟಿ, ಸ್ಥಿತಿ, ಲಯುಗಳು ಉತ್ಪನ್ನವಾಗುವವು. ಚೈತನ್ಯಕ್ಕೆ ಪ್ರಕೃತಿಯ ಹೊಡೆತದಿಂದ ಅನೇಕ ಜೀವಗಳುತ್ಪನ್ನವಾದವು. ಶುದ್ಧ ತತ್ವದಲ್ಲಿ ಜೀವನಿಗೆ ಸದಾ "ಸೋಹಂ" ಭಾವದ ಸ್ಫೂರ್ತಿಯಿರುವದು. ಜಾಗ್ರತ, ಸ್ವಪ್ನ, ಸುಪ್ತಿಗಳಲ್ಲಿ ಯಾವಾಗಲೂ ಸ್ವರೂಪದ ಜ್ಞಾನವಿರುವದು. ಅಂಥ ಭಾಗ್ಯಪುರುಷನು ಶರೀರಾದಿಗಳನ್ನು ಕಟ್ಟಿಕೊಂಡು ನಮ್ಮಕೂಡ ವ್ಯವ ಹರಿಸುತ್ತಿದ್ದರೂ, ಪಶುಪತಿಯಾಗುವನೇ ಹೊರ್ತು ಪಶುಗಳಂತೆ ಜೀವಭಾವಿ ಯಾಗಲಾರನು. ಹೀಗಿರುವದರಿಂದ ಆತನ ಸ್ವರೂಪಕ್ಕೆ ಚ್ಯುತಿಬರಲಾರದು. ಹಿಂದಿನ, ಇಂದಿನ, ಮುಂದಿನ ಧೇಯುಗಳ ಮಮತ್ವವಿರುವದಿಲ್ಲ. ಆ ಯೋಗಿಯು ತ್ರಿಕಾಲ ಜ್ಞಾನಿಯು, ತತ್ವದರ್ಶಿಯು ಅಂತಾ ಕರೆಯಲ್ಪಡುವನು.

ಯಾವುದನ್ನು ಹೆಚ್ಚಿಗೆ ಗ್ರಹಣಮಾಡಿಕೊಂಡಿರುವದೋ ಅದನ್ನು ಬಿಡ ಬೇಕು. ಅದು ಉಪಮಾರಹಿತವು. ಅದು ನಿರಾಲಂಬವು, ಎಲ್ಲಿ ಸೃಷ್ಟಿ ,ಸ್ಥಿತಿ, ಲಯುಗಳು ಇರುವದಿಲ್ಲವೋ ಆದುವೇ ನಿತ್ಯವು. ಚೈತನ್ಯದ ಕಡೆಗೆ ದೃಷ್ಟಿ ಇರುವಾಗ ಪ್ರಕೃತಿಯು ಮಲವಾಗಿ ಕಾಣುವದು. ಚೈತನ್ಯವು ಮಾತ್ರ ನಿರ್ಮ ಳವು. ಶುದ್ಧ ಪ್ರಕೃತಿಯೂ ಕೂಡ ಉಪಾದಿಯನಿಸುವದು. ಅದರಾಚೆಗೆ ನಿರು ಸಾದಿಕವು ಪ್ರಕೃತಿಗೆ ರೂಪವದೆ. ಚೈತನ್ಯವು ನಿರೂಪ, ಪ್ರಕೃತಿ ವಿಶಿಷ್ಠತೆಯಿಂದ ಪಾತಿಶಯವೆನಿಸುವದು ಆದರೆ ಶುದ್ಧ ಚೈತನ್ಯವು ನಿರತಿಶಯವು. ಸ್ವರೂಪ ದಿಂದ ಚ್ಯುತನಾಗಿ ಅನ್ಯಭಾವ ಬಂದಲ್ಲಿ ಪಾಪವೆನಿಸುವದು. ಆದರೆ ಸ್ವರೂ ಪಕ್ಕೆ ಮಾತ್ರ ಪಾಪಪುಣ್ಯಗಳ ಭಯವಿರುವದಿಲ್ಲ. ಆದ್ದರಿಂದ ಅದು ನಿರ್ಭಯವು.

ಪ್ರಕೃತಿಯಿಂದ ಕೂಡಿದ್ದು ಸತ್ವವೆನಿಸುವದು. ಪ್ರಕೃತಿಯಿಂದಲೇ ಅನೇಕ ಸತ್ವಗಳು ಹೊರಗೆ ಬಂದಿರುವವು. ಇಲ್ಲದ ವಸ್ತುಗಳಲ್ಲಿ ಇದ್ದದ್ದನ್ನು ಕೂಡಿಸಲಿಕ್ಕೆ ಬರಲಾರದು. ಆದ್ದರಿಂದ ಚೈತನ್ಯದಲ್ಲಿ ಈ ಸತ್ವವಿರುವದಿಲ್ಲ. ಎರಡನೇಯವರು ಇದ್ದರೆ ಮಾತ್ರ ಸರ್ವಾಧಿಕಾರವು ಎಲ್ಲವೂ ಒಂದೇ ಇರುಇರುವಾಗ ಅಂದರೆ ಏಕಮೇವಾಧ್ವಿತಿಯುವಿರುವಾಗ ಸರ್ವಜ್ಞ ಸರ್ವೇಶ ಸರ್ವಲೋಕ ಮಹೇಶ ಅಂತಾ ಯಾರಿಗೆ ಅನ್ನಬೇಕು. ಶಕ್ತಿಯಿಂದ ಕೂಡಿದಾಗ ಮಾತ್ರ ಈ ಶಬ್ದಗಳ ಉಪಯೋಗವಾಗುವದು. ಮಾನವನು ಅಹಂಭಾವವನ್ನು ಕಟ್ಟಿಕೊಂಡಾಗ ವೈರತ್ವವನ್ನು ತನ್ನಲ್ಲಿಯೇ ಕಟ್ಟಿಕೊಂಡಿರುವನು. ಅಹಂಸ್ಫುರಣದಲ್ಲಿಯೇ ಹಿಂಸೆಯ ಉಗಮವಾಗಿರುವದು. ಅಹಂಕಾರ ನಾಶವಾದ ನಂತರವೇ ಶುದ್ಧ ಅಹಿಂಸೆಯುನಿಸುವದು. ಇದುವೇ ತತ್ ಪದದ ಲಕ್ಷ್ಯಾರ್ಥವೆನಿಸುವದು.

## "ಅಸಿಪದದ ವಾಚಾರ್ಥವು."

ತ್ವಂ ಮತ್ತು ತತ್‌ಪದದ ಎರಡು ಲಕ್ಷ್ಯಾರ್ಥಗಳಿಗೆ ಒಂದೇಎಂದು ತಿಳಿಯುವದೇ ಅಸಿಪದದ ವಾಚಾರ್ಥವೆನಿಸುದದು. ಸಣ್ಣವನಿದ್ದಾಗ ನೋಡಿದ ಮನುಷ್ಯನು ದೊಡ್ಡವನಾದಾಗಲೂ ಆತನೇ ಇರುವನು. ಘಟದೊಳಗಿನ ಆಕಾಶ ಮತ್ತು ಮಠದೊಳಗಿನ ಆಕಾಶ ಎರಡೂ ಒಂದೇ ಎಂದು ಹೇಳುವಾಗ ಮೂಲ ಆಕಾಶದ ಕಡೆಗೆ ದೃಷ್ಟಿಯಿಟ್ಟು ಹೇಳಬೇಕಾಗಿರುವದು ಘಟ ಮತ್ತು ಮಠಗಳನ್ನು ತ್ಯಾಗಮಾಡಿದಾಗ ಉಳಿದದ್ದು ಒಂದೇ ಆಕಾಶವು ಉಳಿಯುವದು. ಅದರಂತೆ ತ್ವಂ ಪದದ ಲಕ್ಷ್ಯಾರ್ಥವು ಅಂತರಾತ್ಮ (ಕೂಟಸ್ಥ ಚೈತನ್ಯವು)ವೆನಿಸಿಕೊಳ್ಳುವದು. ತತ್ ಪದದ ಲಕ್ಷ್ಯಾರ್ಥವು ಪರಮಾತ್ಮನೆನಿಸುವದು. ಎರಡನ್ನೂ ತ್ಯಾಗಮಾಡಿದಾಗ ಉಳಿಯುವದು ಪೂರ್ಣಸ್ವರೂಪವು. ಒಂದು ಭಂಗಾರದ ಇಲ್ಲಿ ಮತ್ತೊಂದು ಭಂಗಾರದ ಗಣಪತಿ ಇರುವದೆಂದು ತಿಳಿಯುವಾ. ಅವುಗಳಲ್ಲಿ ಒಂದು ಪೂಜ್ಯವಿರುವದು (ಗಣಪತಿ) ಮತ್ತೊಂದು ಅಪೂಜ್ಯ (ಇಲಿ) ವಿರುವದು. ಎರಡನ್ನೂ ಕರಗಿಸಿದರೆ ಸಮತೂಕದ ಭಂಗಾರದ ಗುಂಡುಗಳಾಗುವವು. ಅವುಗಳ ಬೆಲೆಯೂ ಸಮಪ್ರಮಾಣದಲ್ಲಿ ಬರುವದು. ಅದರಂತೆ ಅಂತರಾತ್ಮ ಮತ್ತು ಪರಮಾತ್ಮನ ಸ್ಥಿತಿ ಇರುವದು. ಅವಿದ್ಯೆಯಲ್ಲಿ ಅಂತರಾತ್ಮನ ಆಳಿಕೆಯಿರುವದು. ವಿದ್ಯೆಯಲ್ಲಿ ಪರಮಾತ್ಮನ ಆಳಿಕೆಯಿರುವದು. ವಿದ್ಯಾ

ವಿದ್ಯಗಳು ಎರಡೂ ಕಳೆದು ಹೋದ ಮೇಲೆ ಅಂತರಾತ್ಮ ಪರಮಾತ್ಮರುಗಳು ಒಂದಾಗಿ ಪೂರ್ಣಸ್ವರೂಪವೇ ಆಗುವದು. ಆ ಸ್ಥಿತಿಯಲ್ಲಿ ಅವನೇ ನಾನು ನಾನೇ ಅವನು ಎಂಬ ಧೃಡವಾದ ತಿಳುವಳಿಕೆಯು ಬಂದುಬಿಡುವದು. ಅದುವೇ ಅಸಿಪದದ ವಾಚ್ಯಾರ್ಥವೆನಿಸುವದು.

## "ಅಸಿ ಪದದ ಲಕ್ಷ್ಯಾರ್ಥ."

ಈ ಎಲ್ಲ ಭಾವಗಳು ಅಡಗಿದರೆ ಮಾತ್ರ ಅಸಿ ಪದದ ಲಕ್ಷ್ಯಾರ್ಥವೆನಿಸು ವದು. ಅದಕ್ಕೆ ಪ್ರಯತ್ನ ಬೇಕಾಗಿರುವದಿಲ್ಲ. ಹಣ್ಣು ಪಕ್ವವಾದ ಬಳಿಕ ತನ್ನಿಂದ ತಾನೇ ಕಳಚಿ ಬೀಳುವಂತೆ ಎಲ್ಲ ಭಾವಗಳು ಕಳಚಿ ಬೀಳುವವು. ಊದಬತ್ತಿಯ ವಾಸನೆಗಳಂತೆ ಅಸಿ ಪದದ ಭಾವಗಳಿರುವವು.

## "ಜ್ಞಾನಿಗೂ ಪ್ರತಿಬಂಧಕಗಳಿರುವವೇ ?"

ಎಷ್ಟೇ ಪಂಡಿತನಾದರೂ ಗುರಿಯನ್ನು ಮುಟ್ಟಬೇಕಾದರೆ ಪ್ರತಿಬಂಧಕ ಗಳನ್ನು ಎದುರಿಸಲೇಬೇಕಾಗುವದು. ಭೂತ ವರ್ತಮಾನ ಭವಿಷತ್ತುಗಳೆಂಬ ಕಾಲ್ಪನಿಕ ನೆನಸುಗಳೇ ತ್ರಿವಿಧ ಪ್ರತಿಬಂಧಕಗಳೆನಿಸುವವು. ಯೋಗೀ ಪುರು ಷನಿಗೂ ಕೂಡ ಈ ಪ್ರತಿಬಂಧಕಗಳು ಅಡ್ಡ ಬಂದರೆ ಮೋಕ್ಷವಾಗಲಾರದು. ಇವುಗಳನ್ನು ಗೆದೆಯಬೇಕಾದರೆ ವಿರತಿಯಿಂದ ಸಕಲ ಸಂಪತ್ತನ್ನು ತ್ಯಾಗಮಾಡಿ ಗುರುಗಳ ಬಳಿಗೆ ಹೋಗಬೇಕು. ಗುರುವೂ ಕೂಡ ಸ್ವರೂಪದಲ್ಲಿ ಸಮರಸ ನಾದ ಸಮರ್ಥ ಸನ್ಯಾಸಿಯಾಗಿರಬೇಕು. ಹೀಗಿರುವಲ್ಲಿ ಮಾತ್ರ ಉಪದೇಶವು ಫಲಕಾರಿಯಾಗುವದು. ಇದರ ಹೊರತು ಆಂತರಿಕ ಅಭ್ಯಾಸಬಲದಿಂದ ಈ ಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಳ್ಳುತ್ತಾ ಹೋಗಬೇಕು.

## ಭೂತ ಪ್ರತಿಬಂಧಕ.

ಶ್ರೀಗುರುವಿನಿಂದ ಉಪದೇಶ ತಕ್ಕೊಳ್ಳುವಾಗ ಗತಾಯುಷ್ಯದ ಕರ್ಮ ಗಳ ಸ್ಮರಣೆಯು ನಮ್ಮ ಮುಂದೆ ಬಂದು ನಿಲ್ಲುವದು. ಇದುವೇ ಭೂತ ಕಾಲದ ಪ್ರತಿಬಂಧಕವು. ಯಾವ ಜಾತಿಯ ಪ್ರಾಣಿಗಳೇ ಆಗಲಿ ತಾವು ಬಿಟ್ಟ ಮಲವನ್ನು ಮುಟ್ಟಲಾರವು. ಇದು ಪ್ರಾಣಿಗಳಲ್ಲಿಯ ನಿಸರ್ಗದತ್ತ ಸ್ವಾಭಾವಿಕ ಸ್ವಭಾವವಾಗಿರುವದು. ಆದರಂತೆ ಗುರುಭಕ್ತನಾಗಿ ಹಿಂದಿನ ದನ್ನು ನೆನೆದರೆ ಪ್ರಾಣಿವರ್ಗಕ್ಕಿಂತಲೂ ಹೀನ ಸ್ಥಿತಿಯವನೆನ್ನಬೇಕಾದೀತು; ಇಂಥವರಿಗೆ ಪರವು ಅಪರೋಕ್ಷವಾಗುವದು.

## "ವರ್ತಮಾನ ಪ್ರತಿಬಂಧಕ"

ಜ್ಞಾನಿಯಾದವನು ವಿಷಯಾದಿಗಳಿಂದ ಕೂಡಿದ ಜಡ ಜನರ ಸಂಗ ಮಾಡಿದರೆ, ರತಿವಿಲಾಸದಲ್ಲಿ ಮುಳುಗಿದರೆ, ಮಾಡತಕ್ಕ ಕೆಲಸಗಳಲ್ಲಿ ಅಭಿಮಾನನ್ನು ತಾಳಿದರೆ, ಕಡುಚಪಲತೆಯಿಂದ ಅನವಶ್ಯಕ ಮಾತುಗಳನ್ನು ಬೆಳೆಯಿಸುತ್ತಾ ಹೋದರೆ ತತ್ವಜ್ಞಾನದ ಸಾಕ್ಷಾತ್ಕಾರವಾಗಲಾರದು. ಇದು ವರ್ತಮಾನ ಪ್ರತಿಬಂಧಕವು.

## "ಭವಿಷ್ಯ ಪ್ರತಿಬಂಧಕ"

ಸ್ವರ್ಗಾದಿ ಸುಖಗಳಿಗಾಗಿ ಅಥವಾ ಮತ್ತಾವುದಾದರೊಂದು ಫಲದಾಶೆಯನ್ನಿಟ್ಟುಕೊಂಡು ಯಾವಾಗಲೂ ಭವಿಷತ್ವ ಸುಖದಲ್ಲಿ ಆಶೆಯನ್ನಿಡುವದು ಭಾವಿ ಪ್ರತಿಬಂಧಕವೆನಿಸುವದು. ಇದು ಸ್ವರೂಪ ಸಾಕ್ಷಾತ್ಕಾರದ ಬದಲು ವಿಪರೀತ ಕಲ್ಪನೆಯನ್ನು ಹುಟ್ಟಿಸುವದು. ಇದರಿಂದ ತತ್ವಜ್ಞಾನದ ರುಚಿ ಮತ್ತು ಅಧ್ಯಾತ್ಮಿಕದ ಲಾಭವು ಸಿಗಲಾರದು.

ಜ್ಞಾನಿಗೂ ಕೂಡ ಈ ತ್ರಿವಿಧದ ಪ್ರತಿಬಂಧಕಗಳು ಸ್ವರೂಪ ಸಾಕ್ಷಾತ್ಕಾರದಲ್ಲಿ ಅಡ್ಡ ಬರುವವು. ಜ್ಞಾನಿಯಾದ ಜನಕರಾಜನು ಅಖಂಡ ಹನ್ನೆರಡು ವರ್ಷಗಳಿಂದ ಉಪದೇಶದ ಲಾಭ ತಕ್ಕೊಂಡು ಗುರು ಯಾಜ್ಞವಲ್ಕ್ಯ ಋಷಿಗಳನ್ನು ಮರೆಯಲಿಲ್ಲವೇ? ಈ ಪ್ರತಿಬಂಧಕಗಳ ಕಾಟತಪ್ಪಿಸುವದಕ್ಕಾಗಿ ಅಲ್ಲಮಪ್ರಭುಗಳು "ಶಾಂತಿ ಸೈರಣೆ ಸಮತೆಯಂಬ-ಬೇಲಿಯನ್ನಿಕ್ಕಿ ಈ ತೋಟವನ್ನು (ಶರೀರವನ್ನು) ಯಾವಾಗಲೂ ಕಾಯುತಿರ್ದೆನು," ಎಂದು ಅನ್ನಬೇಕಾದರೆ ಈ ಪ್ರತಿಬಂಧಕಗಳು ಎಂತೆಂಥ ಜ್ಞಾನಿಗಳನ್ನಾದರೂ ಕಾಡದೇ ಬಿಟ್ಟಿರುವದಿಲ್ಲ.

## " ಪ್ರತಿಬಂಧಕಗಳನ್ನು ತಡೆಯುವ ಬಗೆ ಹೇಗೆ? "

ಯಾವ ಚಿತ್ತವೃತ್ತಿಯು ಮುಖಾಂತರ ಆತ್ಮನನ್ನು ಕಾಣಬೇಕಾಗಿದೆಯೋ ಅದರಲ್ಲಿಯೇ ವಿಪರೀತ ಕಲ್ಪನೆಗಳು ಬಂದರೆ ಪರಮಾತ್ಮನನ್ನು ಕಾಣಲಿಕ್ಕೆ ಬರಲಾರದು. ಚಿತ್ತವೃತ್ತಿಯು ಯಾವಾಗಲೂ ದೀಪದಂತಿರಬೇಕು. ದೀವಿಗೆಯಲ್ಲಿ ಒಂದು ಪ್ರಕಾಶಗುಣವಿರುವದು, ಮತ್ತೊಂದು ಚಂಚಲಗುಣವಿರುವದು. ಗಾಳಿಯು ಬಿಟ್ಟಾಗ ದೀಪವು ಹೊಯ್ದಾಡುವಂತೆ, ರಜೋ, ತಮೋ ಗುಣ

ಗಳ ಸ್ಪರ್ಶದಿಂದ ಚಿತ್ತದಲ್ಲಿ ಚಂಚಲತೆಯುತ್ಪನ್ನವಾಗುವದು. ಗುರು ಶ್ರುತಿಗಳು ಬಹಿರಸಾಧನೆಯಾದರೆ ಚಿತ್ತಶುದ್ಧಿ ಮಾಡಿಕೊಳ್ಳುವದು ಆಂತರಿಕ ಸಾಧನೆಯಾಗಿರುವದು. ಹೇ ದೇವಾ ನಿನ್ನನ್ನು ಬಿಟ್ಟು ಅನ್ಯವನು ಬಯುಸಿದರೆ ಮಾತ್ರ ನನ್ನನ್ನು ಕಾಡಬೇಕಾಗಿರುವದು. ನೀನೇ ನನಗೆ ಬೇಕಾಗಿರುವದರಿಂದ ನನಗೆ ಆಶೀರ್ವಾದಮಾಡಿ ಮನ್ನಿಸು, ಅಂತಃಕರಣದ ಪ್ರತಿಬಂಧಕಗಳನ್ನು ಸಮಾಪ್ತಿಗೊಳಿಸು ಎಂದು ಬೇಡಿಕೊಳ್ಳುವದೇ ಮನ್ನಿಸು ಈ ಶಬ್ದಕ್ಕೆ ಅರ್ಥ ಬಂದಿರುವದು. ಸ್ಥೂಲ ಶರೀರದಲ್ಲಿ ಭೂತಗಳ ವಿಕಾರದಿಂದ ಕಾರಣಶರೀರದಲ್ಲಿ ಮಾನಸಿಕ ರೋಗಗಳು ಕಾರಣಶರೀರದಲ್ಲಿ ಯಾರಿಗೂ ತಿಳಿಯದಂತೆ ರೋಗಗಳು ಬರುವವು. ಮೂರು ತರವ ರೋಗಗಳು ಮೂರು ತನುವಿನಲ್ಲಿ ಸೇರಿಕೊಂಡು ನಮಗೆ ವಿಶ್ರಾಂತಿ ಮತ್ತು ಶಾಂತಿ ಇಲ್ಲದಂತೆ ಮಾಡಿರುವವು. ಸ್ಥೂಲ ಶರೀರದಲ್ಲಿಯ ರೋಗಗಳನ್ನು ಒಂದು ವೇಳೆ ಡಾಕ್ಟರರು ಕಳೆಯಬಹುದು. ಸೂಕ್ಷ್ಮ ಶರೀರದಲ್ಲಿಯ ಮಾನಸಿಕ ರೋಗಗಳನ್ನು ಕಳೆಯಲು ದೇವತೆಗಳಿಗೂ ಕೂಡ ಸಾಧ್ಯವಿರುವದಿಲ್ಲ. ಆದರೆ ಶುದ್ಧ ಚೈತನ್ಯದ ಕಡೆಗೆ ನಮ್ಮ ದೃಷ್ಟಿಯನ್ನು ಧೃಡಗೊಳಿಸಿದರೆ ಮಾತ್ರ ಮೂರೂ ಶರೀರದ ತಾಪಗಳು ಒಮ್ಮೆಲೇ ಕಡಿಮೆಯಾಗುವವು. ಚಿತ್ತವೃತ್ತಿಯನ್ನು ಸ್ವರೂಪದಲ್ಲಿ ಧೃಡವಾಗಿ ನಿಲ್ಲಿಸುವದೇ ತ್ರಿವಿಧ ಶರೀರ ರೋಗಗಳಿಗೆ ಗುಳಿಗೆಯೆನಿಸುವದು. ಹೀಗಾದಲ್ಲಿ ಮಾತ್ರ ಪ್ರತಿಬಂಧಕ ರೋಗಗಳನ್ನು ಕಳೆಯಲು ಸಾಧ್ಯವಿರುವದು. "ಪರಚಿಂತೆ ನಮಗೇಕಯ್ಯಾ ನಮ್ಮ ಚಿಂತೆ ನಮಗೆ ಸಾಲದೇನಯ್ಯಾ" ಅಂತಾ ಬಸವಣ್ಣನವರ ವಚನವು ಈ ರೋಗಗಳ ಕಾಟತಪ್ಪಿಸುದಕ್ಕಾಗಿಯೇ ಇರುವದು.

ಆಸ್ತಿಕವಾದಿಗಳು ಸ್ವರ್ಗ ಸುಖದ ಭೋಗದಾಸೆಗಾಗಿ ಅನಂತ ಯಜ್ಞಯಾಗಾದಿ ಕರ್ಮಗಳನ್ನು ಮಾಡುವರು. ದೇವಲೋಕದ ಸ್ವರ್ಗ ಸುಖ ಬಯುಸುವವರಿಗೆ ಭೂಲೋಕದಲ್ಲಿ ಪರಮಾತ್ಮನಿಲ್ಲವೆಂದೇ ಹೇಳಬೇಕಾದೀತು ? ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲವೆಂಬ ಅಶಾಸ್ತ್ರೀಯ ಅಸಂಬದ್ಧ ಮಾತುಗಳಿಂದ ಅನ್ಯರನ್ನು ಕೂಡ ಭವಿಷ್ಯದ ಪ್ರತಿಬಂಧಕಗಳಲ್ಲಿ ನೂಕುವದು. ಇಂಥವರು ಬುದ್ಧಿಗೇಡಿಗಳು ದೈವಘಾತಕಿಗಳು ಅಂತಾ ಅನಿವಾರ್ಯವಾಗಿ ಹೇಳಬೇಕಾದೀತು? ಮಹಾಶಿವಶರಣೆ ನೀಲಗಂಗಮ್ಮನ ವಚನವನ್ನು ಇಲ್ಲಿ ಉಪಯೋಗಿಸಿಕೊಂಡರೆ ಅಪ್ರಸಂಗವಾಗಲಾರದು. "ಅಲ್ಲಿಗೆ ನನ್ನನ್ನು ಬರಹೇಳಿದರಂತೆ ಇಲ್ಲಿ ಸಂಗಮನಾಥನು ಇಲ್ಲವಂತೆ ಅಲ್ಲಿರುವ ಸಂಗಮನು ಇಲ್ಲಿಲ್ಲವೇ? ಎಂದು

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್, ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ನವ್ಹೆಂಬರ, ಡಿಸೆಂಬರ ೧೯೫೯.

# ವಿಷಯಾನುಕ್ರಮಣಿಕೆ.




# ಲೇಖಕರಿಗೆ ಸೂಚನೆಗಳು.

(ಬರೆದವರು:— ಸಂಪಾದಕರು, ಶಿವಾನುಭವ-ವಿಜಾಪುರ.)



ಲೇಖಗಳಲ್ಲಿ ವೈಯಕ್ತಿಕ ಟೀಕೆ, ನಿಂದೆ, ಬೈಗಳುಗಳು ಇರಬಾರದು. ಲೇಖಗಳು ಸಾಮೂಹಿಕವಾದವುಗಳಿರಬೇಕು. ಸಮಾಜದಲ್ಲಿಯ ದೋಷಗಳನ್ನು ತೋರಿಸಿ ಅವುಗಳನ್ನು ಸುಧಾರಿಸುವಂತೆ ಬರೆಯಬೇಕು. ಅಂದರೆ ಸಮಾಜಕ್ಕೆ ಮಾರ್ಗದರ್ಶನ ಮಾಡಿದಂತೆಯಾಗುವದು. ಒಬ್ಬ ವ್ಯಕ್ತಿಗೆ ಒಬ್ಬರು ಬಯ್ಯಹತ್ತಿದರೆ ಅವಾಚ್ಯ ಅಶ್ಲೀಲ ಶಬ್ದಗಳನ್ನು ಉಪಯೋಗಿಸಿದರೆ ತಿರುಗಿ ಅವನೂ ಬಯ್ಯುವನು ಅವಾಚ್ಯ ಅಶ್ಲೀಲ ದುಷ್ಟ ಶಬ್ದಗಳನ್ನು ಉಪಯೋಗಿಸಿ ಲೇಖಗಳನ್ನೇ ಬರೆಯುವನು. ಹೀಗಾಗಿ ಮಾಸಿಕದಲ್ಲಿ ನಿಂದೆ ಬೈಗಳುಗಳೇ ತುಂಬಿಬಿಡುವವು. ಅದರಿಂದ ಏನೂ ಪ್ರಯೋಜನವಾಗುವದಿಲ್ಲ. ಯಾರೂ ಹಾಗೆ ಮಾಡಬಾರದು ತಾತ್ವಿಕವಾಗಿ ಬೇಕಾದವರು ಬೇಕಾದಷ್ಟು ಬರೆಯಬಹುದು. ಒಬ್ಬನ ವಿಚಾರಗಳನ್ನು ಒಬ್ಬರು ತತ್ವ ಆಧಾರ ಅನುಭವ ಸಹಿತ ಖಂಡಿಸಬಹುದು. ಆದರೆ ಅದರಲ್ಲಿ ಲೇಖಕರ ಬಗ್ಗೆ ದುಷ್ಟಭಾವ ತಾಳಿಸಿಕ್ಕಂತೆ ಅವಾಚ್ಯ ಅಶ್ಲೀಲ ಶಬ್ದಗಳಿಂದ ಎಂದೂ ಬಯ್ಯಬಾರದು. ಇದರಿಂದ ವೈಯಕ್ತಿಕ ದ್ವೇಷ ಬೆಳೆದು ಬಾಯಿತಂಡಿ ತೀರಿಸಿಕೊಳ್ಳಲು ಹೀಗೆ ಮಾಡುತ್ತಿರುವರೆಂದು ತೋರುವದು.

ಬೇರೆ ಬೇರೆಯವರ ವಿಚಾರಗಳು ಬೇರೆ ಬೇರೆ ಇರುವದು ಸ್ವಾಭಾವಿಕವಿರುವದೆ;; ಅವರವರ ವಿಚಾರಗಳನ್ನು ಪ್ರಕಟಿಪಡಿಸಲು ಅವರಿಗೆ ಅಧಿಕಾರವಿರುವದು. ಹೀಗೆ ಇವನ ವಿಚಾರಗಳು ಪ್ರಕಟವಾದವೆಂದು ದುಷ್ಟ ಶಬ್ದಗಳನ್ನು ಎಂದೂ ಉಪಯೋಗಿಸಬಾರದು. ಈಗ ಲೇಖಕರು ಒಬ್ಬರನ್ನೊಬ್ಬರು ಕೆಳಗೆ ಕಾಣಿಸಿದ ದುಷ್ಟ ಶಬ್ದಗಳನ್ನು ಉಪಯೋಗಿಸುವರು. ಆಡಂಬರ ಬಿರುದಾಂಕಿತ ಉಳ್ಳ, ತಮ್ಮಂಥ ಮಹಾಪುರುಷರು, ದುಡಕದಿರಲಿ ಮಂದಬುದ್ಧಿಯನ್ನು ತಮ್ಮಂಥ ಮಹಾಪಂಡಿತರು, ಅಡ್ಡಸೋಗು, ಪ್ರಲಾಪಿಸು, ಅಸಂಬದ್ಧ ವಿಚಾರ, ಆತ್ಮನಿರೀಕ್ಷಣೆ ಮಾಡಿನೋಡು, ದಬಾಯಿಸು, ಕೆಂಗಣ್ಣತೆರೆದು ನೋಡು, ಕಿಳಿಗಣ್ಣಿಗೆ ಹೊಳೆಯುವದು, ಛಂದಾನುವೃತ್ತಿಯ ಪೌರಷಹೀನ ನಡೆನುಡಿ, ನಿಮ್ಮ ಮಹಿಮಾಶಾಲಿ ಗುರುದೇವರೇ ಬಲ್ಲರು. ಅಧಿಕಪ್ರಸಂಗತನ ಬೇಡ, ನಿಜವಾದ ವಿಚಾರವುಳ್ಳ ಮನುಷ್ಯ, ದುರಭಿಮಾನ ದುರಭಿಪ್ರಾಯದವನು, ನಿಮ್ಮ ಪಾಂಡಿತ್ಯವ್ಯಕ್ತವಾಗುವದು, ನಿಮ್ಮ ಪಾಂಡಿತ್ಯದ ಬೆಲೆ ಎಷ್ಟು? ದುರಹಂಕಾರ, ದುರಾಲೋಚನೆ, ದುರ್ಬುದ್ಧಿ, ಮನುಷ್ಯವರ್ಗದ ಲಕ್ಷಣವೇ ಅಲ್ಲ, ಸ್ವಾರ್ಥದಾಸೆಯುವ, ಬಾಯತೆರೆದು, ಕಣ್ಣದೆರೆದು ಲಕ್ಷಕೊಡಬೇಕು. ಕಿವಿಯಲ್ಲಿ ಬಿದ್ದಂತೆ ಕಾಣುವದಿಲ್ಲ. ಸ್ವಾರ್ಥಿ ಲೇಖಕನು, ದೋಷದೃಷ್ಟಿಯಲ್ಲಿ ಅದೆಂತುಕಾಣುವದು, ವಿಷಯವನ್ನರಿಯದ ಲೇಖಕರು, ತತ್ವವನ್ನು ಸಾರಾಸಾರವಾಗಿ ತಿಳಿಯದೆ ಬಡಬಡಿಸುವರು. ಯದ್ವಾತದ್ವ ಬರೆದರೆ ಏನಾಯಿತು, ಮೂರ್ಖತನದ ಲಕ್ಷಣ, ನಿಂದಕಾಸಕ್ತರು, ಅರ್ಥ ತಿಳಿಯಲಾರದಷ್ಟು ದುರ್ದೈವವೇಸರಿ. ಅರೆಹುಚ್ಚರು, ಅರಪಂಡಿತರು ಕಣ್ತೆರೆದು ನೋಡಬೇಕಾಗಿತ್ತು, ಲೇಖಕರಿಗೆ ಸುಳಿಗಾಳಿಬಡಿದಿಲ್ಲ, ಬುದ್ಧಿಬ್ರಹ್ಮಣವಾಗಿದೆ, ಪೂರ್ವಾಪರ ವಿಚಾರವೇ ಇಲ್ಲ, ಆಕ್ರೋಶಗೊಂಡಿರುವರು, 'A dog in The manager' ಅಧ್ಯಕ್ಷತೆಯಿಂದ ಹೇಳುವರು, ಇದು ಭೂಷಣವೆ? ಧರ್ಮಾಧಿಕಾರಿಗಳೂ, ಪಂಡಿತರೂ, ಕೀರ್ತಿಶಾಲಿಗಳೂ, ವಿದ್ವಾಂಸರೂ ಆದ ನಿಮಗೆ ಶೋಭಿಸುವದೋ? ಭೂಷಣವೆ? ಇಂತಹದು ನಂಬಿಗೆಗೆ ಪಾತ್ರರಾಗಬಹುದೋ? ನೀವು ಹೂಡಿದ ನಾಟಕಕ್ಕೆ ಯಾರು ಮರುಳಾಗುವರು? ಬೆಲೆಯಿಲ್ಲ. ಭ್ರಮೆ, ಬೊಗಳುವಿಯೇಕೆ? ಕಣ್ಣುಮುಚ್ಚಿ ಸುರಿದಂತೆ ಇದೆ. ಇವು ನಿಮ್ಮ ಮಹಾಸಿದ್ಧಾಂತ ತತ್ವಗಳು. ನಿಮ್ಮ ಅರ್ಥಮಾಡುವ ಪಂಡಿತಗಿರಿ ಬಹು ಹೆಚ್ಚಿನದು. ಧರ್ಮಾಂಧತೆಬೇಡ, ಅನುಚಿತ ಬರಹ, ನಿಮ್ಮ ಮಡ್ಡತಲೆಯಲ್ಲಿ ಸುಳಿಯಲಿಲ್ಲವೇನು? ಪ್ರಾಯಶ್ಚಿತ ಹೊಂದಿ ಪುನೀತರಾಗಿರಿ ಹಿತಶತ್ರುಗಳೇ ಸರಿ. ನಿನ್ನ

ಆಟ ಬಹುಕಾಲ ನಡೆಯದು ನಿಮಗೆ ಅರಿವೆ ಇಲ್ಲವೆ? ನಿಮ್ಮಂಥ ಭ್ರಷ್ಟಾಚಾರಿಗಳಿಗೆ ನನ್ನ ಲೇಕು ತಿಳಿಯದು? ಎಲ್ಲಿ ಓದಿ ಅನುಭವಪಡೆದನೋ, ದೇವರೇ ಬಲ್ಲ!! ಕಿವಿಯಲ್ಲಿ ಸೀಸುಕಾಸಿ ಸುರುವಿದಂತೆ ಆಗುವದೇನು? ಬೆಂಕಿಕಾರುವಿರಿ? ಹೊಸರುಳ್ಳಿಯಂತೆ ಬದಲಾಗಬಾರದು. ಹೌದಪ್ಪನ ಚಾವಡಿಯಲ್ಲಿ ಹೌದಪ್ಪ, ಇಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪನಾದರೆ ಪ್ರಯೋಜನವೇನು? ಅಮಂಗಲ, ತಿಂಡಿತೀರಿಸುವರು? ಹೀನ ವಿಚಾರಿ, ಇವರಿಗೆ ವಿವೇಕ ಉಂಟೇ? ಅಭಿಮಾನ ತಾಳುವದೇಕೆ? ಒಳ್ಳೇ ನಾಚಿಕೆಗೇಡಿತನವೇ ಸರಿ! ಅನ್ಯರ ಎಂಜಲಕ್ಕೆ ಬಾಯಿತೆರೆದಂತೆ!! ಹೀಗೆ ಅನೇಕ ದುಷ್ಟ ಹೀನ ವಾಕ್ಯಗಳನ್ನು ಲೇಖಕರ ವಿಷಯಕ್ಕೆ ಲೇಖಕರು ಬರೆಯಹತ್ತಿದರೆ ಏನುಪ್ರಯೋಜನ! ಸರಿಯಾದ ರೀತಿಯಲ್ಲಿ ವಿಷಯದ ಖಂಡನೆ ಮಂಡನೆಗಳಿರಬೇಕು. ತತ್ವಸಿದ್ಧಾಂತಗಳನ್ನು ಆಧಾರ ಅನುಭವ ವ್ಯವಹಾರಗಳ ರೀತಿಯಿಂದ ಸಿದ್ಧಮಾಡಲು ಯತ್ನಮಾಡಬೇಕು. ಆದರೆ ಕೆಟ್ಟ ಹೀನ ಶಬ್ದಗಳನ್ನು ಒಬ್ಬರಿಗೊಬ್ಬರು ಉಪಯೋಗಿಸುವದರಿಂದ ಯಾವ ಪ್ರಶಸ್ತಿಯನ್ನು ಗಳಿಸಿದಂತೆ ಆಗುವದಿಲ್ಲ. ಸಾಮೋಹಿಕವಾದ ಜನಗ್ರಾಹ್ಯತೆಯಾಗುವ ವಿಚಾರದ ಲೇಖಗಳಿರಬೇಕು. ಸರಿಯಾದ ರೀತಿಯಲ್ಲಿ ಸೂಚನೆಗಳನ್ನು ಮಾಡಬೇಕು. ತಮಗೆ ಹೊಳೆದ ಸತ್ಯ ಅನುಭವಗಳನ್ನು ಪ್ರಕಟಿಸಲಿಕ್ಕೆ ಯಾರದೂ ಆತಂಕವಿಲ್ಲ. ಆದರೆ ವ್ಯಕ್ತಿಯ ನಿಂದೆ ಟೀಕೆಯನ್ನು ಎಂದೂ ಲೇಖಗಳಲ್ಲಿ ಮಾಡಬಾರದೆಂದು ನಾವು ಸಕಲ ಲೇಖಕರಿಗೆ ಸೂಚಿಸುವೆವು. ಸಮಾಜದಲ್ಲಿಯ ದೋಷಗಳನ್ನು ಎತ್ತಿ ಬರೆದು ತಿದ್ದಿಕೊಳ್ಳಲಿಕ್ಕ ಹೇಳಿದರೆ ಅದು ಯಾರಿಗೂ ಸಂಬಂಧವಿಲ್ಲ ವೈಯಕ್ತಿಕವೂ ಆಗುವದಿಲ್ಲ. ಹೆಸರು ತಕ್ಕೊಂಡು ನಿಂದಿಸುವದು ಮಾತ್ರ ತಪ್ಪಾಗುವದು. ಬೇಕಾದರೆ ಹೆಸರುಗೊಂಡು ಅವರನ್ನು ಸರಿಯಾದ ರೀತಿಯಲ್ಲಿ ನಿಜಕಂಡರೆ ಬಣ್ಣಿಸಿ ಬರೆಯಲಿಕ್ಕೆ ಅಡ್ಡಿ ಇಲ್ಲ. ಆದರೆ ಇಂಥಿಂಥವುಗಳ ಕೊರತೆ ಇರುವದೆಂದು ಅನಿಸುವದು. ಅವುಗಳನ್ನ ಸ್ಪುಪಡೆದರೆ ಒಳಿತಾಗುವದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಲೇಖಗಳ ವಿಷಯಕ್ಕೆ ಸಂಶಯಬಂದರೆ ಸ್ವತಃ ಲೆಖಕರಿಗೆ ಭೆಟ್ಟಿಯಾಗಿ ಅಥವಾ ಪತ್ರಹಾಕಿ ವಿಚಾರಿಸಿಕೊಳ್ಳಬಹುದು. ಆದರೆ ಲೇಖಗಳಲ್ಲಿ ಒಬ್ಬರಿಗೊಬ್ಬರು ಯಾರೂ ಬಯ್ಯಬಾರದೆಂದು ನಾವು ಪುನಃ ವಿನಂತಿಸುವೆವು.

# ತೇರು.

೧

ತೇರು ಸಾಗಿ ಎನಿತು ಕಾಲ ?
ದಾರಿ ದೂರ ಪಾದಗಟ್ಟಿ
ಎರಡು ಗಾಲಿ ಏಳುಮುಜಲು
ಎರಡು ದೀಪ ಬೆಳಕಿಗಾಗಿ
ಹರಿಯು ಹಳ್ಳಕೊಳ್ಳ ಜೋಕೆ ।
ಧರೆಯು, ತಗ್ಗು, ದಿನ್ನೆ ಬಹಳ ।
ದಾರಿಯುದ್ದಕೆ ।

೨

ಅತ್ತ ಕೆಲವು ಇತ್ತ ಕೆಲವು ।
ತಾಳ ಮೇಳ ಯಳತವಿಲ್ಲ ।
ಹಿಂದೆ ಮುಂದೆ ಹೋಗುತಿಹುದು ।
ಜಾಗ ಬಿಟ್ಟು ಕದಲದಾಯ್ತು ।
ಅಸುರಿ ಶಕ್ತಿ ಯಳತ ಬಹಳ ।
ಪಾದಗಟ್ಟಿಯನ್ನು ಎನಿತು
ಸೇರಬೇಕದು ?

೩

ಅಸುರಿಶಕ್ತಿ ಹಗ್ಗಗಳನು ।
ಹರಿದು ಹಾಕಿ ದೂರ ಸರಿಸು ।
ದಾರಿ ಸರಳ ಹಿಡಿದು ಸಡಿಸು ।
ದೈವಿ ಶಕ್ತಿ ಎಳೆದು ತೇರ ।
ಬಿಡದೆ ಒಯ್ದು ಪಾದಗಟ್ಟೆ ।
ಮುಟ್ಟಿದಾಗ ಜಾತ್ರೆ ಮುಗಿದು ।
ಊರ ಸೇರ್‍ವರು ।

೪

ಡೊಂಕ ನಾಲಿಯಾಗೆ ತೇರು ।
ಅಂಕೆ ತಪ್ಪಿ ಮುಂದು ಬಿದ್ದು ।
ಲಂಕೆ ಸುಟ್ಟು ಹೋದತೆರದಿ ।
ಸಂಖ್ಯೆ ಇರದ ನರಕವಾಸ ।
ಬಿಂಕ ಬಿಟ್ಟು ದೇವನಾವು ।
ಝೇಂಕರಿಸಿ ತೇರ ನಡಿಸು ।
ದಂಡೆ ಕಾಣಲಿ

೫

ತೇರು ಹೆಣ್ಣು ಹೊನ್ನ ಮಣ್ಣು ।
ಮುಟ್ಟದಂತೆ ಜೋಕೆ ಮಾಡು ।
ಮುಟ್ಟು ರೋಗ ಕೆಟ್ಟ ರೋಗ ।
ಬರಲು ದಾರಿ ನಡೆಯದೆಂದು ।
ತೇರು ರೀತಿ ನೀತಿ ಬಿಡಲು ।
ಹೊಲಸು ಆಗಲಾಗಿ ಅದನು ।
ಹುಳವು ತಿನುವವು ।

---

## ಆಕಾಶ ಬುಟ್ಟಿ.

೧

ಆಗಸ ಬುಟ್ಟಿಯು ನೆಲವನು ಬಿಟ್ಟದು ।
ಮೇಲಕೆ ಹಾರದಲೆ ।
ವಿಷಯದ ದೂಷಿತ ಹವೆಯಿಂ ಬಾಧಿಸಿ ।
ನೆಲವನೆ ಸುತ್ತುವದು ॥

೨

ಭವವನು ತೊರೆಯುತ ಹಗುರಾಗಲು ಅದು ।
ಬಾನಲಿ ಏರುವದು ।
ದೂಷಿತ ಹವೆಯನು ಅದರಿಂದೂದುತ
ಬಳಿ ಹೊಗೆ ತುಂಬುವದು ।

೩

ಛಿದ್ರವನೆಲ್ಲಾ ಬಿಡದಲೆ ಮುಚ್ಚುತ ।
ನೀಟದಿ ಹಿಡಿಯುವದು ।
ಉರಿಯುವ ಕಕ್ಕಡ ತಳದಲಿ ಕಟ್ಟಲು ।
ಹಾರಲು ಹತ್ತುವದು ।

೪

ಏರುವತನಕತಿ ನೀಟದಿ ಹಿಡಿದರೆ ।
ಬುಟ್ಟಿಯು ಸುಡದೆಂದು ।
ಹೊರಗಿನ ದೂಷಿತ ಹವೆ ಒಳಸೇರದ ।
ತರದಲಿ ಹಿಡಿಯುವದು ।

೫

ಒಮ್ಮೆಲೆ ಬುಟ್ಟಿಯು ಹಿಡಿತನು ಬಿಡದಿರು
ಹೊರಳಲು ಸುಡುತಿಹುದು ।
ಆದರಲಿ ಶಕ್ತಿಯು ಬರುತವ ಹಿಡಿದಿರು ।
ಬಂದರೆ ಜಗ್ಗುವದು ।

ಏ  ಲು ಹತ್ತಲು ಕೈಗಳ ಬಿಡುವದು ।
ಅಂದರೆ ಹಾರುವದು ।
ಏರವ ಹಾರುವ ಬುಟ್ಟಿಯ ನೋಡಲು
ಆನಂದವು ಬಹಳ

೭

ತಾಯಿಯು ನಿನ್ನನು ಆಗಲದೆ ಇರುವಳು
ಆಗುವದಾನಂದ
ತಾಯಿಯು ನಿನ್ನನು ಎತ್ತುತ ಮುದ್ದಿಸಿ
ಜಗದಲಿ ಮೆರಸುವಳು

———

# ಗಡಿಗೆ.

೧

ಕುಂಬಾರ ಗಡಿಗೆ— ।
ಗೊಂಭತು ತೂತು ।
ಕುಂಬಿನಿಯೊಳಗಾಡುವದು ॥
ತಿಂಬುವ ಅಡಿಗೆಯ ।
ತುಂಬುವ ಗಡಿಗೆಯು ।
ಶಂಭುವೆ ಬಲ್ಲನು ಇದನಂ ॥

೨

ಹಲವೇ ಛಿದ್ರದಿ ।
ಹೊಲಸದು ಸೋರುತ ।
ಮಲಿನವದಾಗಿದೆ ಈ ಗಡಿಗೆ ॥
ಸೋರದೆ ಇದ್ದರೆ ।
ಪಾಕವ ಗೈಯಲು ।
ಲೋಕದಿ ಬರುವದು ಎಲ್ಲರಿಗೆ

೩

ಅಡಿಗೆಯ ಮಾಡಲು ।
ಗಡಿಗೆಯ ತೊಳೆವುದು ।
ಬಿಡದಲೆ ಛಿದ್ರವ ಮುಚ್ಚುವದು ।
ಬೇಗದಿ ಅಡಿಗೆಯ
ಸಹಜದಿ ಗೈಯುತ
ಭೋಜನಸುಖ ಮಾಡಲವಹುದು

೪

ಒಡಕ ಗಡಿಗೆಯಲಿ ।
ಅಡಿಗೆಯು ಆಗದು।
ಕೆಡವದು ಮಾಡಲು ಆ ಅಡಿಗೆ ।

ಕಂಬನಿಗರೆಯದೆ
ಅಂಬಲಿ ಕಾಸ್ಯೆ
ಕುಂಬಿನಿಯವರಿಗೆ ತಣಿಸುದಕೆ

೫

ಅಂತ್ಯದ ಕಾಲದ
ಚಿಂತೆಯ ಬಿಟ್ಟತಿ
ಕುಂತಲೆ ಅಡಿಗೆಯ ಮಾಡುವದು

ಕಂತೂಹೆರನಿಗೆ
ಶಾಂತವ ಗೊಳಿಸ್ಯೆ
ಭ್ರಾಂತಿಯ ತೊರೆಯುತ ಗಡಿಗೆಯದ

—ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ.

ತೆಗ್ಗಿಹಳ್ಳಿ, (ಇಂಡಿ)

# ಆತ್ಮಾನುಸಂಧಾನ.

[ವಿಜಾಪುರ ಶಿವಾನುಭವ ಮಂಟಪದಲ್ಲಿ ಶ್ರೀಮಲ್ಲಿಕಾರ್ಜುನ ಮಹಾಸ್ವಾಮಿಗಳವರು, ಶಿವಾನಂದಮಠ ಗದಗ, ಇದರ ಪ್ರವಚನದಿಂದ ಸಂಗ್ರಹಿಸಿದ್ದು.]

(ಲೇಖಕರು:— ಸದಾಶಿವ ಎಸ್. ತೆನಿಹಳ್ಳಿ, ವಿಜಾಪುರ.)

ಹಿಂದಿನಸಂಚಿಕೆಯಿಂದ ಮುಂದು ವರಿದುದು.

---

ಬಸವಂಣನವರ ಭಾರ್ಯೆಯಾದ ನೀಲಗಂಗಮ್ಮನು ಬಸವಣ್ಣನವರ ಆತ್ಮಾನುಭವದ ಕೊರತೆಯನ್ನು ಬೈಲಿಗೆಳೆದಿದ್ದಾರೆ. ತನ್ನ ಸ್ವರೂಪವನ್ನು ಬಿಟ್ಟು ಅನ್ಯ ಮಾರ್ಗಕ್ಕೆಳಸುವವರು ಪಾಪಕರ್ಮಿಗಳು. ಭೋಗದಾಸೆಗಾಗಿ ಪುಣ್ಯ ಕರ್ಮಗಳನ್ನು ಮಾಡುವವರು ದೇವಲೋಕದವರು. ಈ ಉಭಯತರು ಕರ್ಮಮಾರ್ಗಗಳೇ ಇರುವರು. ಇವರಿಗೆ "ತತ್ವಮಸಿ" ಮಹಾವಾಕ್ಯದ ಅರ್ಥವೇ ತಿಳಿದಿಲ್ಲವೆನ್ನಬೇಕು. ಈ ಎರಡೂ ಕರ್ಮಮಾರ್ಗಗಳನ್ನು ಬಿಟ್ಟು ಸಂಪೂರ್ಣ ಸಮರಸಭಾವವನ್ನು ತಳೆದು ದೇವಾ ಈ ತ್ರಿವಿಧದ ಪ್ರತಿಬಂಧಕಗಳಿಂದ ಮುಕ್ತಮಾಡಿ ನಿನ್ನಲ್ಲಿ ನನ್ನನ್ನು ಸಮರಸ ಮಾಡಿಕೋ. ಎಂದು ನಿಷ್ಕಾಮ ಭಕ್ತಿಯಿಂದ ಪರಮಾತ್ಮನನ್ನು ಮೊರೆ ಹೋಗುವದೇ ಪ್ರತಿಬಂಧಕಗಳನ್ನು ಗೆದೆಯುವ ರಾಜಮಾರ್ಗವು.

ಸ್ವರೂಪದ ದೃಷ್ಟಿಯಿಂದ ಬ್ರಹ್ಮ ವಿಷ್ಣು ರುದ್ರ, ಈಶ್ವರ ಸದಾಶಿವರುಗಳು ಒಂದೇ ಪಾದವೆಂದು ತಿಳಿಯಬೇಕು. ಈ ಎಲ್ಲ ದೇವಶಕ್ತಿಗಳು ಉಪಾಧಿಯಿಂದ ಕೂಡಿದವುಗಳಿರುತ್ತವೆ. ನರನು ರಜೋಗುಣಿಯು. ಬ್ರಹ್ಮಾದಿದೇವತೆಗಳು ಸತ್ವ ಗುಣದಿಂದ ಕೂಡಿಕೊಂಡಿರುವರು. ಇವರೆಲ್ಲರೂ ಕಾಲನಕೈಯ್ಯಲ್ಲಿರುವರು. ಲೌಕಿಕ ಮತ್ತು ವೈದಿಕಕರ್ಮಗಳು ಆತ್ಮಸ್ಥಿತಿಗೆ ಬಾರದ ಮುನ್ನ ಮಾಡತಕ್ಕ ಕರ್ಮಗಳಿರುವವು. ಇವುಗಳೆಲ್ಲವೂ ಮೋಕ್ಷ ಮಾರ್ಗಕ್ಕೆ ವಕ್ರಗತಿಗಳೆಂದು ತಿಳಿಯಬೇಕು. ಆದ್ದರಿಂದ ದೇವಾ ನಿನ್ನ ಕಡೆಗೆ ಬಂದಿರುವೆನು. ಇನ್ನು ಮುಂದಾದರೂ ಅವುಗಳ ಸ್ಮರಣೆಯು ಬಾರದಂತೆ ಮಾಡು. ಸದ್ಗತಿ, ಸಮಾಧಿ, ಆತ್ಮಸಾಕ್ಷಾತ್ಕಾರ ಮೊದಲಾದ ಶ್ರಿಂಗಾರ ರಸಪೂರಿತ ಶಬ್ದಜಾಲದ ಕಡೆಗೂ ನನ್ನ ಲಕ್ಷವು ಎಳೆಯದಂತೆ ಕರುಣಿಸು. ಈ ರೀತಿದೇವನಲ್ಲಿ ಸಂಪೂರ್ಣ ಶರಣಾಗತನಾದಾಗ ಉಪಾಧಿಯುಕ್ತ ಎಲ್ಲ ಶಕ್ತಿಗಳೂ ಆತ್ಮನಲ್ಲಿ ಲಯವಾಗಿ ಹೋಗುವವು. ಇದುವೇ ಪ್ರತಿಬಂಧಕ ಶಕ್ತಿಗಳನ್ನು ಗೆದೆಯುವ ಕೊನೆಯ ಮಾರ್ಗವು.

ಐವರು ಮಾನವರು."

ಮಾನವನನ್ನು ಮನುಷ್ಯತ್ವದಿಂದ ಮುಕ್ತಮಾಡಿ ದೇವತೆಗಳ ತುಟ್ಟತುದಿಯಲ್ಲಿ ತಂದು ಆತ್ಮಸಾಕ್ಷಾತ್ಕಾರದ ವರೆಗೆ ಮುಟ್ಟಿಸುವದಕ್ಕಾಗಿ ಶ್ರೀ ನಿಜಗುಣರು ಐದು ತರಗತಿಯ ಮಾನವರನ್ನು ನಿರ್ಮಾಣಮಾಡಿರುವರು. ಈ ತರಗತಿಗಳು ಮನುಷ್ಯನನ್ನು ಅಲ್ಲಗಳೆಯುವದಕ್ಕಾಗಿರದೆ ಆತನನ್ನು ದೇವಭೂಮಿಕೆಗೆ ತರುವದಕ್ಕಾಗಿರುವವು.

**ಕರ್ಮಿ:**—ಈ ಕರ್ಮ ಮಾರ್ಗಿಗಳು ಹಿತಾಹಿತಗಳ ವಿಚಾರವನ್ನರಿಯದೇ ಲೌಕಿಕ ವ್ಯವಹಾರದಲ್ಲಿ ಕೂಡಿಕೊಂಡು ತಮ್ಮ ತಮ್ಮ ಜಾತೀಯ ವಿಧಿಗಳನ್ನು ಸಫಲರಿಸುತ್ತಾ ಹೋಗುವರು. ಇದರಲ್ಲಿ ಭೋಗವಿಲಾಸಗಳು ನಷ್ಟವಾಗಿರುವದಿಲ್ಲ. ಆದರೂ ಅವರಲ್ಲಿ ಪುಣ್ಯದ ಅಂಶವಿರುವದರಿಂದ ಒಂದು ನೂರು ಜನ್ಮದಲ್ಲಿಯಾದರೂ ಮುಕ್ತಿಯು ಆಶೆಯಿರುವದು. ಇವರು ಕರ್ಮವರ್ಗದವರೆನಿಸುವರು.

**ಮುಮುಕ್ಷು:**— ಜಗತ್ತು ಸತ್ಯವೆಂದೂ ಜಗತ್ತಿನಲ್ಲಿ ನಡೆಯುವ ಬಾಹ್ಯ ಕರ್ಮಗಳೇ ಶ್ರೇಷ್ಠವೆಂದು ಮುಮುಕ್ಷುವು ತಿಳಿಯುವನು. ಈತನಿಗೆ ಜಗತ್ತು ಮಿಥ್ಯವೆಂದು ಹೇಳಿದರೆ ನಂಬಿಕೆ ಹುಟ್ಟುವದಿಲ್ಲ. ಇಂಥವರು ಚತುರಾಶ್ರಮಗಳಿಗನುಸರಿಸಿ ಕರ್ಮಮಾಡಬೇಕು. ಕೊನೆಯ ಆಶ್ರಮವಾದ ಸನ್ಯಾಸ್ಯಾಶ್ರಮದಲ್ಲಿ ಬಂದ ಬಳಿಕ ದ್ವೇಷಾಸೂಯಗಳು ಲಯವಾಗುವವು. ನಾನು ಮುಕ್ತನಾಗಬೇಕೆಂಬ ಬಯಿಕೆಯು ಪ್ರಬಲವಾಗುವದು. ಈ ವರ್ಗದವರಿಗಾಗಿ ಮಾತ್ರ ನಿಷ್ಕಾಮ ಕರ್ಮದ ಉಪದೇಶ ಮಾಡಬೇಕು. ಈ ಮುಮುಕ್ಷುವು ಮುಂದೆ ಅಭ್ಯಾಸಿಯಾಗಿ, ಅಭ್ಯಾಸಿಯಿಂದ ಅನುಭಾವಿಯಾಗಿ ಆತ್ಮಸಾಕ್ಷಾತ್ಕಾರಕ್ಕೆ ಅಧಿಕಾರಿಯಾಗುವನು. ಈತನಿಗೆ ಮೂರು ಜನ್ಮಗಳಲಿ ಮುಕ್ತಿಯಿರುವದು.

**ಅಭ್ಯಾಸಿ:**— ಮುಕ್ತನಾಗಬೇಕೆಂಬ ಇಚ್ಛೆಯುಳ್ಳವನು ಸದ್ಗುರುವಿನ ಕಡೆಗೆ ಹೋಗಲೇಬೇಕು. ಗುರುಗಳು ಆತನ ಪ್ರಗತಿಗನುಸಾರವಾಗಿ ಉಪದೇಶವನ್ನು ಕೊಡುವರು. ಅಭ್ಯಾಸಿಯು ನಿರ್ಮಮನಾಗಿ ನಿರಾಶಯಾಗಿ ಬಂದಿದ್ದರೂ ಜೀವ, ಜಗತ್ತು, ಈಶ ಇವರುಗಳ ಸಮ್ಬಂಧವನ್ನು ತಿಳಿದುಕೊಳ್ಳುವ ಪ್ರಬಲ ಇಚ್ಛೆಯುಳ್ಳವನಾಗಿರುವನು. ಪ್ರತಿಬಂಧಕ ವಿಚಾರಗಳನ್ನು ಬದಿಗೊತ್ತಿ ಮುಂದುವರಿಯುವದೇ ಅಭ್ಯಾಸಿಯ ಸಾಹಸವಿರುವದು. ತನ್ನ ಸಾಧನೆಯಲ್ಲಿ ಬರುವ ಎಲ್ಲ ತಾಪಗಳನ್ನು ದಭಾಯಿಸಿಕೊಂಡು ಗುರುಗಳ ಉಪದೇಶವನ್ನು ಘಟ್ಟಿಯಾಗಿ ಹಿಡಿದುಕೊಂಡಿರಬೇಕು. ನಾನು ಸತ್ಯನು, ನಿತ್ಯನು, ನನಗೆ ಜನನ ಮರಣಗಳಿರುವದಿಲ್ಲ. ಎಂಬಿವೇ ಮೊದಲಾದ ಗುರೂಪದೇಶವನ್ನು ಎದುರಿಟ್ಟು

ಕೊಂಡು ಆತ್ಮ ಸ್ವರೂಪಕ್ಕೆ ವಿಸ್ಮೃತಿಬರದಂತೆ ಆತ್ಮನಲ್ಲಿ ಧೃಡವಾದ ನಂಬಿಗೆ ಯನ್ನಿಟ್ಟು ನಡೆಯುವದೇ ಅಭ್ಯಾಸಿಯ ಕರ್ಮಗಳು. ಈತನಿಗೆ ಎರಡು ಜನ್ಮ ಗಳಲ್ಲಿ ಮುಕ್ತಿಯು ದೊರೆಯುವದು.

**ಅನುಭಾವಿಃ—** ಲೋಕವೆಲ್ಲವನು ಮರೆತು ಪರತತ್ವದ ಸಾಕ್ಷಾತ್ಕಾರ ದಲ್ಲಿಯೇ ಕಾಲಕಳೆಯುವವನು ಅನುಭಾವಿಯು. ಈ ಅನುಭಾವಿಗೆ ಶಿವ ಸ್ವರೂಪದ ಅನುಭವದ ಅಹಂಕಾರ ಮಾತ್ರವಿರುವದು. ಈ ಅಹಂ ವೃತ್ತಿ ಇದ್ದರೂ ಅನುಭಾವಿಯು ಲೋಕದ ಬಳಕೆಯಿಂದ ದೂರಾಗಿರುವನು. ಶಿವಾನು ಭವದ ಅಹಂವೃತ್ತಿಯಲ್ಲಿ ಶರೀರವು ಪಾತವಾದರೆ ಒಂದೇ ಜನ್ಮದಲ್ಲಿ ಮುಕ್ತಿಯು.

**ಆರೂಢಃ—** ಶಿವಾನುಭವದ ಅಹಂ ಕಲ್ಪನೆಯು ಸಹ ಇರದೇ ಪರ ಮಾತ್ಮನೇ ತಾನಾಗಿರುವದು. ಆರೂಢಸ್ಥಿತಿಯನಿಸುವದು. ಈ ಪುಣ್ಯ ಪುರುಷನಿಗೆ ಹಿಂದಿನ, ಇಂದಿನ, ಮುಂದಿನ, ಜನ್ಮಗಳ ವಾಸನೆಯೇ ಇರುವದಿಲ್ಲ. ಆರೂಢವು ಯಾವುದೇ ವ್ಯಕ್ತಿಯ ಹೆಸರಲ್ಲ. ವಸ್ತುಸ್ವರೂಪದ ಮೆಟ್ಟಲೆಂದು ತಿಳಿಯಬೇಕು. ಆತನು ಯಾವಾಗಲೂ ಸುಖ ಸಮುದ್ರನಾಗಿ ನಿತ್ಯಮುಕ್ತನು.

ಈ ಐದು ತರಗತಿಗಳಲ್ಲಿ ಬೇಕಾದವರು ತಮ್ಮ ತಮ್ಮ ತರಗತಿಗಳನು ಆರಿಸಿಕೊಂಡು ಆತ್ಮಾನುಭವದಲ್ಲಿ ಮುಂದುವರಿಯಬೇಕು.

"ಇವರು ಆತ್ಮಸಾಕ್ಷಾತ್ಕಾರಿಗಳೇ"

ಶಾಸ್ತ್ರವು ಅನುಭವದಲ್ಲಿ ಬರದಿದ್ದರೆ ಅದರ ಲಾಭವಾಗಲಾರದು. ಬರೀ ಬಾಯಿ ಮಾತಿನ ಶಬ್ದ ಪಾಂಡಿತ್ಯದಿಂದ ಮದ, ಮತ್ಸರಗಳನ್ನು ಕಟ್ಟಿಕೊ ಳ್ಳುವ ಪ್ರಸಂಗ ಬರುವದು. ಓರ್ವ ಕವಿಯು ಅಂದದ್ದೇನಂದರೆ, ವಿದ್ವಾಂಸರ ಹತ್ತರ ಮದ, ಮತ್ಸರಗಳಿರುವದರಿಂದ ಅವರಲ್ಲಿ ಮಾತ್ರ ಲಕ್ಷ್ಮಿಯು ಇರು ವದಿಲ್ಲ. ಮಂದ ಬುದ್ಧಿಯುವರಿದ್ದರೂ ಭಕ್ತಿ ಭಾವದಿಂದ ಕೂಡಿಕೊಂಡಿರುವ ದರಿಂದ ಅವರಲ್ಲಿ ಲಕ್ಷ್ಮಿ ಇರುವಳೆಂದು ವರ್ಣಿಸಿದ್ದಾನೆ. ಉಪದೇಶವು ಒಂದು ವ್ಯಂಗಪೂರಿತವು. ಮತ್ತೊಂದು ಪ್ರೋತ್ಸಾಹ ಪೂರಿತವು. ಅಂತಾ ಎರಡು ಬಗೆಯಾಗಿರುವದು. ಪ್ರಸ್ತುತ ಪ್ರಸಂಗದಲ್ಲಿ ಸುಮ್ಮನೆ ಆತ್ಮಸಾಕ್ಷಾತ್ಕಾರ ವಾಯಿತೆಂದು ಹೇಳುವ ಜನರಿಗೆ ವ್ಯಂಗ ಭಾವದಿಂದ ಉಪದೇಶ ಮಾಡಿರು ವರು. ಶಾಸ್ತ್ರ ಪ್ರತೀತಿ ಗುರುಪ್ರತೀತಿಗಿಂತಲೂ ಅನುಭವಪ್ರತೀತಿಯು ಹೆಚ್ಚಿ ನದು. ಅನುಭವದಲ್ಲಿಯೇ ಆತ್ಮಸುಧೆಯಿರುವದು. ಮಾಯೆಯ ಆವರಣ ವಿಲ್ಲದ್ದು ಅನುಭವವೆನಿಸುವದು. ವಿಕಾರಗಳ ಸಮ್ಮಂದವಿಟ್ಟುಕೊಂಡು ಮಾಯೆಯ ಆವರಣದಲ್ಲಿ ಸಾಕ್ಷಾತ್ಕಾರವಾಯಿತೆಂದರೆ, ಅದನ್ನು ನಾವರಿ ಯೆವು. ಅನುಭವದಲ್ಲಿಯೇ ಅಂತಿಮ ಜನ್ಮವಿರುವದು. ಅನುಭವವಿಲ್ಲದ ಕೈವಲ್ಯದ ಬಗೆಯು ಹೊಸದಲ್ಲವೇ ?

ಮೋಕ್ಷವನ್ನು ಬಯಸುವವನಿಗೆ ಮೊದಲು ಹಿತಾಹಿತಗಳ ಜ್ಞಾನಬೇಕು. ಇಂಥ ವಿವೇಚನ ಶಕ್ತಿಯಿರದೇ ನಿತ್ಯಾನಿತ್ಯಗಳ ಗೂಢವು ತಿಳಿಯಲಾರದು. ಒಂದು ವೇಳೆ ಹಿತಾಹಿತಗಳ ಜ್ಞಾನವಿದ್ದು ವಿಷಯದ ಅಭಿರುಚಿಮಾತ್ರ ಬಿಟ್ಟಿರದಿದ್ದರೆ ಅದು ಶಾಬ್ದಿಕ ಜ್ಞಾನವೆನಿಸುವದು. ಇಂಥ ಶಾಬ್ದಿಕ ಪಂಡಿತರು ಆತ್ಮಸಾಕ್ಷಾತ್ಕಾರಿಗಳೇ ? ಶಮೆಯು ಬಂಧುರವಿದ್ದು ಚಿಂತೆಯು ಮಾತ್ರ ಮನವನ್ನು ಆವರಿಸಿದ್ದರೆ, ಇವರು ಆತ್ಮಸಾಕ್ಷಾತ್ಕಾರಿಗಳೇ ? ಪುಣ್ಯಕರ್ಮಗಳ ರಾಶಿಯಿದ್ದರೂ ಸದ್ಗತಿಯ ಆಶೆಯಿಲ್ಲದಿದ್ದರೆ, ಆತ್ಮಸಾಕ್ಷಾತ್ಕಾರಿಗಳೇ ? ಲೋಕದಲ್ಲಿ ಅವರು ದೇವೇಂದ್ರನಾಗಿ ಕಾಣಬಹುದು, ಧನಸಂಗ್ರಹದಲ್ಲಿ ಕುಬೇರನನ್ನು ಸರಿಗಟ್ಟಬಹುದು, ಇಂಥವರನ್ನು ಆಶಯ ಪಾಶವು ಬಳ್ಳಿಯಂತೆ ಬಂಧನದಲ್ಲಿ ಕೆಡಹುದೇ ಹೊರ್ತು ಆತ್ಮಸಾಕ್ಷಾತ್ಕಾರದ ಕಕ್ಷೆಯಲ್ಲಿ ಬರಲಾರರು. ಆದರೆ ಇವರು ಗುರುಸೇವೆಯನ್ನಾಶ್ರಯಿಸಿದರೆ ಮಾತ್ರ ಇವರಿಗಾಗಿ ಮುಕ್ತಿಯ ಬಾಗಿಲು ತೆರೆಯುವದು. ಗುರುಕುಲದಲ್ಲಿದ್ದುಕೊಂಡು ಮೂರು ಪಟ್ಟದ ವರೆಗೂ ಅಭ್ಯಾಸಮಾಡಬೇಕು. (ಒಂದು ಪಟ್ಟಕ್ಕೆ ಹನ್ನೆರಡುವರುಷಗಳು) ಈ ಭವರೋಗವು ಮಹಾರೋಗಕ್ಕಿಂತಲೂ ಹೆಚ್ಚಿನದು. ಆದ್ದರಿಂದ ಗುರುಕುಲವಾಸವೇ ಭವರೋಗದ ನಾಶಕ್ಕೆ ಬ್ರಹ್ಮಾಸ್ತ್ರವು. ಶ್ರುತಿಗಳಲ್ಲಿ ಒಲುಮೆಯಂತೆ. ಆದರೆ ಗುರುಮತದಂತೆ ನಡೆಯದಿದ್ದರೆ ಇಂಥವರು ಆತ್ಮಸಾಕ್ಷಾತ್ಕಾರಿಗಳೇ? ದೇಹಾದಿಗಳ ಮೇಲಿನ ಮಮತೆಯನ್ನಿಟ್ಟುಕೊಂಡು ಜ್ಞಾನಿಯೆಂದು ಹೇಳಿಕೊಂಡರೆ ಸರಿಯೆನಿಸೀತೇ? ಇಂಥ ಶಿಷ್ಯರು ಅನುಕೂಲ ಸ್ಥಿತಿಯಲ್ಲಿ ಗುರುಗಳ ಕೈಕಾಲು ಒತ್ತುವರು. ಪ್ರತಿಕೂಲಸ್ಥಿತಿ ಬಂದಾಗ ಕುತ್ತಿಗೆಯನ್ನು ಒತ್ತುವರು. ಇವರು ಸಾಕ್ಷಾತ್ಕಾರವಾದಿಗಳೇ? ಅಧ್ವಯನು ತಾನಂತೆ. ಆದರೆ ಜೀವಭಾವವನ್ನು ಬಿಟ್ಟಿಲ್ಲವಂತೆ. ಇಂಥ ಜೀವಭಾವಿಗಳಿಗೆ ಆತ್ಮಭಾವ ಬರುವದೆಂತು? ಆತ್ಮನ ಮರವು ಇಲ್ಲವಂತೆ ಆದರೆ ಸಂಶಯಮಾತ್ರ ಹೋಗಿಲ್ಲವಂತೆ. ಅಜ್ಞಾನನಿವೃತ್ತಿಯಾಗದೆ ಸಂಶಯವಳಿಯುವದೇ? ನಿಜವು ಧೃಡಗೊಂಡಿದೆಯಂತೆ. ಆದರೆ ವಿಪರೀತ ಮತಿಮಾತ್ರ ಬಿಟ್ಟಿಲ್ಲವಂತೆ ವಿಪರೀತ ಮತಿಯಲ್ಲಿ ನಿಜವು ಧೃಡಭೂಮಿಕೆಯಲ್ಲಿ ಬರುವದೋ? ನಿರಭಿಮಾನಿಯಂತೆ, ಆದರೆ ಅಭಿಮಾನವನ್ನು ಬಿಟ್ಟಿಲ್ಲವಂತೆ. ಪೂರ್ಣಸ್ಥಿತಿಯವನಂತೆ ಆದರೆ ಮನೆ ಮಠಾದಿಗಳು ತನ್ನವಂತೆ. ಇಂಥ ಭೌತಿಕ ಸಂಪತ್ತಿನ ಮೇಲೆ ಒಡೆತನ ಕಾಯ್ದುಕೊಳ್ಳುವವರು ಪೂರ್ಣಸ್ವರೂಪರೇ? ಸಾಕ್ಷಾತ್ಕಾರಿಗೆ ಮನೆಯೇನು? ಮಠವೇನು? ಆತನು ಸೀಮಾತೀತನು. ಮುಕ್ತಿಪದವಂತೆ ಭವ-ಮರಣ-ಸಂಸ್ಕೃತಿ, ಭಯವಂತೆ. ಇಂಥ

ಶಾಬ್ದಿಕ ಪಂಡಿತರು ಆತ್ಮಸಾಕ್ಷಾತ್ಕಾರಿಗಳೇ? ಇದನು ನಾವರಿಯವು. ಎಂದು ನಿಜಗುಣರು ವ್ಯಂಗಮಾತಿನ ಎಚ್ಚರಿಕೆಯನ್ನು ಕೊಟ್ಟಿರುವರು.

### "ಸ್ವರೂಪದರ್ಶನದ ಮುಂಗುರುತುಗಳು"

ತನ್ನ ಸ್ವರೂಪವನ್ನು ತಾನು ವಿಚಾರಿಸಲು ಸಮರ್ಥನಿಲ್ಲದವನಿಗೆ ನಿಜ ಸುಖವು ತಿಳಿಯದು, ಅಂಥ ಜೀವಿಗಳು ಜೀವಭಾವದಲ್ಲಿದ್ದುಕೊಂಡು ಸುಖ ದುಃಖಗಳ ಚಕ್ರದಲ್ಲಿ ಸಿಕ್ಕು ಒದ್ದಾಡುವರು. ಜೀವನದ ಆಳಿಕೆಯಲ್ಲಿ ಸುಖವೂ ಅದೆ. ದುಃಖವೂ ಅದೆ. ಈ ದ್ವಂದದಲ್ಲಿಯೇ ಜೀವನದ ಆಳಿಕೆಯ ಪ್ರವಾಹವು ಸಾಗಿರುವದು. ಈ ಜೀವನದಲ್ಲಿ ತೋರುವ ಸುಖವು ನಿಜಸುಖವಿರದೆ ಅದು ಬದ್ಧಜೀವಿಗಳನ್ನಾಗಿ ಮಾಡುವದು. ಎಂದೂ ಆಗ ಲದ ಭದ್ರವಾದ ಸ್ಥಿತಿಯೇ ನಿಜವಾದ ಸುಖವು. ಅದನ್ನು ದೊರಕಿಸಿಕೊಳ್ಳಬೇಕಾದರೆ ಸ್ವರೂಪ ಜ್ಞಾನವೇ ವಿಷಯವು ನದಿಯು ಪರ್ವತದಲ್ಲಿ ಉಗುಮವಾದರೂ ಅದರ ಮೂಲವು ಸಮುದ್ರದಲ್ಲಿರುವದರಿಂದ ಅದು ಸ್ವಾಭಾವಿಕವಾಗಿ ಸಮುದ್ರದತ್ತ ಧಾವಿಸುವದು. ನದಿಯು ಮೂಲವಾದ ಸಮುದ್ರಕ್ಕೆ ಕ್ರೀಯಯಿರುವದಿಲ್ಲ. ಆದ್ದರಿಂದ ನದಿಗೆ ಕ್ರೀಯಯಿರುವದು. ಅದರಂತೆ ಜೀವನ ಪ್ರವಾಹದ ಮೂಲವು ಸ್ವರೂಪವೇ ಇದ್ದು ಅದು ಒಂದಿಲ್ಲೊಂದು ದಿನ ತನ್ನ ಮೂಲವಾದ ಸ್ವರೂಪದಲ್ಲಿ ಸಮರಸವಾಗಲೇಬೇಕು. ಸ್ವರೂಪಕ್ಕೆ ಕ್ರೀಯ ಇರುವದಿಲ್ಲ. ಆದರೆ ಜೀವಕ್ಕೆ ಕ್ರೀಯಯಿರುವದು. ಉಷ್ಣತೆಯ ಶಕ್ತಿಯಿಂದ, ಕ್ರೀಯಯುತ್ಪನ್ನವಾಗುವಂತೆ ಮಾಯೆಯ ಸ್ಪರ್ಶದಿಂದ ಜೀವನು ಕ್ರಿಯಾ ಬದ್ಧನಾಗಿರುವನು. ಆದರೆ ಅವಿಶ್ರಾಂತ ಆತ್ಮನ ಅನುಸಂಧಾನ ದಿಂದ ನಿಜಸುಖದ ಆಶೆಯಿರುವದು.

ಸ್ವರೂಪವನ್ನು ಕುರಿತು ಅನುಸಂಧಾನ ಮಾಡುವಾಗ ಯಾವುದಾದರೊಂದು ವಸ್ತುವನ್ನು ದೃಷ್ಟಿಯಲ್ಲಿ ತಂದುಕೊಳ್ಳಬಾರದು. ಯಾಕಂದರೆ ವಸ್ತುವು ಸ್ವರೂಪವಲ್ಲ, ಅದು ನೇತ್ರದ ಸ್ವಭಾವವು. ಅದರಂತೆ ಶಬ್ದಾದಿಗಳೂ ಕೂಡ ಹೊರಗಿನ ರೂಪಗಳು. ನಾವು ಕಣ್ಣು ಮುಚ್ಚಿಕೊಂಡು ಕುಳಿತರೆ ಹೊರಗಿನ ವಿಷಯಗಳು ಕಣ್ಣು ಮುಂದೆ ಬಂದು ನಿಲ್ಲುವವು. ನಿದ್ರೆ ಮತ್ತು ಎಚ್ಚರಿಕೆಗಳು ಪ್ರಕೃತಿಯ ಅವಸ್ಥೆಗಳಿರುವಂತೆ ಯೋಗನಿದ್ರೆ ಮತ್ತು ಅರುವಿನೆಚ್ಚರವು ಆತ್ಮನ ಸ್ಥಿತಿಗಳಾಗಿರುವವು. ಪ್ರಕೃತಿ ನಿದ್ರೆಯು ಮರವೆಯನ್ನು ಕಟ್ಟಿಕೊಂಡಿದ್ದರೆ ಯೋಗನಿದ್ರೆಯು ಸ್ವರೂಪದರ್ಶನ ಮಾಡಿಸುವದು. ಪ್ರಕೃತಿಯ ಎಚ್ಚರವು ವಿಕಾರದಿಂದ ಕೂಡಿಕೊಂಡಿದ್ದರೆ ಸ್ವರೂಪದೆಚ್ಚರವು ಆತ್ಮನ ಅನುಸಂಧಾ

ನದಲ್ಲಿರುವದು. ಸ್ವರೂಪಾನುಸಂಧಾನದಲ್ಲಿರುವಾಗ ಸಾಧಕನಿಗೆ ಹಿಂದಿನ ವಾಸನೆಗಳು ಭೂಕಂಪದಂತೆ ಸ್ಫೋಟವಾಗುವವು. ಆ ವಾಸನೆಗಳು ಅವ್ಯಕ್ತ ವಾಗಿದ್ದುಕೊಂಡು ಒಮ್ಮಿಂದೊಮ್ಮೆ ಹೊರಗೆ ಬರುವವು. ವಿಷಯಗಳನ್ನು ದೂರಿಡುವದು ಒಂದು ಪಕ್ಷಕ್ಕೆ ಸರಳವೆನಿಸೀತು, ಆದರೆ ವಿಷಯದ ವಾಸ ನೆಗಳನ್ನು ದಗ್ಧ ಮಾಡುವದು ಬಲು ಕಷ್ಟದ ಕೆಲಸವಿರುವದು. ಅನುಸಂಧಾ ನದಲ್ಲಿ ಸಜಾತಿಯ ಸಂಸ್ಕಾರಗಳ ಬದಲಾಗಿ ವಿಜಾತಿಯ ಸಂಸ್ಕಾರಗಳು ಬಂದು ಕೂಡಿಕೊಂಡರೆ, ಸುಳಿಗಾಳಿಯಿಂದ ದೀಪವು ಹೊಯ್ದಾಡುವಂತೆ, ಸಂಸ್ಕಾರಗಳ ಹೊಡೆತದಿಂದ ಆತ್ಮನ ಸ್ಥಿತಿಯು ಅಲ್ಲೋಲ ಕಲ್ಲೋಲ ವಾಗುವದು. ಈ ವಾಸನೆಯು ಸಂಸ್ಕಾರಗಳು ಮನಸಿನದ್ವಾರಾ ಬರುವವೇ ಹೊರತು ಆತ್ಮಗತವಾದವುಗಳಲ್ಲ. ಒಂದು ವೇಳೆ ವಾಸನೆಗಳು ಆತ್ಮಗತವಾಗಿ ದ್ದರೆ ಅವುಗಳನ್ನು ನಷ್ಟಮಾಡಲಿಕ್ಕೆ ಉಪಾಯವೇ ಇರುತ್ತಿರಲಿಲ್ಲ. ಅದ ರಿಂದ ಅವುಗಳು ಆತ್ಮನಲ್ಲಿರದೆ ಮನೋಭೂಮಿಕೆಯಲ್ಲಿರುವವು. ಯೋಗಬಲ ದಿಂದಲೇ ಈ ವಾಸನೆಗಳನ್ನು ಕತ್ತರಿಸಬಹುದು. ವಾಸನೆಗಳು ಸಂಪೂರ್ಣ ವಾಗಿ ಕರಗಿಹೋದ ನಂತರ ಏಕಾಗ್ರತೆಯು ಬರುವದು. ಇಂಥ ಏಕಾಗ್ರತೆಯ ದೃಢಭೂಮಿಕೆಯು ಯಾವ ಪುಣ್ಯಪುರುಷನಲ್ಲಿ ಬರುವದೋ ಅಂಥವರಿಗೆ ಮಾತ್ರ ನಿಜಸುಖದ ಪದವಿಯು ದೊರೆಯುವದು. ಅಲ್ಲಿ ಸ್ವರೂಪದ ಆವಿ ರ್ಭಾವವಾಗುವದು. ಯೋಗನಿದ್ರೆಯಲ್ಲಿಯೇ ಇದರ ಸಫಲತೆಯು. ಆದರೆ ಈ ಯೋಗನಿದ್ರೆಯನ್ನು ಗುರುಕುಲದಲ್ಲಿದ್ದುಕೊಂಡು ಪ್ರಯತ್ನಪೂರ್ವಕವಾಗಿ ಪಡೆಯಬೇಕಾಗುವದು. ಸ್ವರೂಪಾನುಸಂಧಾನದಲ್ಲಿ ಇದಮಾಕಾರವೃತ್ತಿ ಆದ ರಂತೆ ಅಹಮಾಕಾರವೃತ್ತಿಗಳು ಇರಬಾರದು. ಸ್ವರೂಪದ ದೃಷ್ಟಿಯಿಂದ ಎರಡೂ ಹೊರಗಿನವುಗಳೇ ಇರುವವು. ಅನ್ಯವನು ಅಂತರಂಗದಲ್ಲಿ ಪ್ರವೇಶ ಮಾಡಗೊಡದೇ ಪೂರ್ಣದ ಪೂರ್ಣತೆಯನ್ನು ಸ್ವೀಕಾರ ಮಾಡಿಕೊಳ್ಳಬೇಕು. ಜಗತ್ತಿನ ಪೂರ್ಣ ಭಾವವನ್ನು ಕಳೆದರೆ ಉಳಿದದ್ದು ಪೂರ್ಣವೇ ಉಳಿಯು ವದು. ಇಷ್ಟಾದರೂ ಅಷ್ಟಮಹಾಸಿದ್ಧಿಗಳು ಅಡ್ಡ ಬರುವವು. ಅವುಗಳನ್ನು ಮೆಟ್ಟಿನಿಂತು ಪೂರ್ಣತ್ವದಲ್ಲಿ ಸ್ಥಿರವಾಗಿ ಉಳಿಯಬೇಕು. ಇನ್ನೊಂದು ನೆನ ಪಿನಲ್ಲಿಡತಕ್ಕ ಸಂಗತಿಯೆಂದರೆ ಪೂರ್ಣದಲ್ಲಿ ಸಮರಸವಾದನಂತರ ಉಳಿದದ್ದು ಇದೇ ಎಂದು ಹೆಸರಿಡಲಿಕ್ಕೆ ಮಾತ್ರ ಹೋಗಬೇಡ. ನಾನು ಒಂದಾದೆನೆಂಬ ಭಾವದಲ್ಲಿಯೂ ಕೂಡ ಪರವಶನಾಗದಿರುವದೇ ಆತ್ಮಾನುಸಂಧಾನದ ತ.ಟ ಸ್ಥಿತಿಯು. ಸ್ವರೂಪಸಾಕ್ಷಾತ್ಕಾರದ ಮುಂಗುರುತು.

## "ಸವಿಕಲ್ಪ ಸಮಾಧಿಯಿಂದ ನಿರ್ವಿಕಲ್ಪ ಸಮಾಧಿಗೆ"

ಜೀವ ಪರಮಾತ್ಮರ ಅದ್ವೈತದ ಸ್ಥಿತಿಯನ್ನು ತಂದುಕೊಡುವದು ನಿಜ ಯೋಗವೆನಿಸುವದು. ಯೋಗಗಳಲ್ಲಿ ಜ್ಞಾನಯೋಗವೇ ಮುಖ್ಯವಾದದ್ದು ಅಧೋಮುಖ ಜೀವಿಗಳನ್ನು ಸ್ವರೂಪದಕಡೆ ಹೊರಳಿಸುವದು ಇದರ ಉದ್ದೇಶ ವಿರುವದು. ಸಮಾಧಿಯಲ್ಲಿ ಸವಿಕಲ್ಪ ಸಮಾಧಿಯೆಂದೂ ನಿರ್ವಿಕಲ್ಪ ಸಮಾಧಿ ಯೆಂದೂ ಎರಡು ಭೇದಗಳುಂಟು. ಸವಿಕಲ್ಪ ಸಮಾಧಿಯು ತಟಸ್ಥಭೂಮಿ ಕೆಯಲ್ಲಿದ್ದುಕೊಂಡು ಆಂತರಿಕ ಸವಿಕಲ್ಪ ಸಮಾಧಿ, ಬಾಹ್ಯ ಸವಿಕಲ್ಪ ಸಮಾಧಿ ಎಂಬ ಒಳಭೇದಗಳನ್ನು ಕೂಡಿಕೊಂಡಿರುವದು. ನಿರ್ವಿಕಲ್ಪ ಸಮಾಧಿಯು. ಸ್ವರೂಪ ಸ್ಥಿತಿಯಲ್ಲಿದ್ದುಕೊಂಡು ಆಂತರಿಕ ನಿರ್ವಿಕಲ್ಪ ಸಮಾಧಿ, ಬಾಹ್ಯ ನಿರ್ವಿ ಕಲ್ಪ ಸಮಾಧಿ ಎಂಬ ಒಳಭೇದಗಳಿಂದ ಕೂಡಿಕೊಂಡಿರುವದು. ಈ ಸಮಾಧಿ ಗಳ ಮರ್ಮವನ್ನು ತಿಳಿದು ಆತ್ಮನಲ್ಲಿ ನಿಜನಿಷ್ಠರಾಗಿರುವದೇ ಶುಭ ಸೂಚ ನೆಯೆಂದು ನಿಜಗುಣರು ಅಭ್ಯಾಸಿಗಳಿಗೆ ಮುನ್ನೆಚ್ಚರಿಕೆಯನ್ನು ಕೊಟ್ಟಿದ್ದಾರೆ.

### "ಆಂತರಿಕ ಸವಿಕಲ್ಪ ಸಮಾಧಿ."

ಅಂಗಜ ವಿಕಾರಗುಣಗಳು ಮನಸ್ಸಿನಲ್ಲಿ ಹುಟ್ಟುವವು. ಅವುಗಳು ಕರ್ಮಾಧೀನದಿಂದ ಸಂಸ್ಕಾರ ಮೂಲಕವಾಗಿ ಬಂದಿರುವವು. ಗಿಡದ ಕೆಳಗೆ ಬಿದ್ದ ಬೀಜಗಳಿಂದ ಗಿಡವು ಬಿದ್ದು ಹೋದರೂ ಮೊಳಕೆಗಳೇಳುವಂತೆ ಆನು ವಂಶಿಕ ಸಂಸ್ಕಾರದ ಮೊಳಕೆಗಳು ಮನಸ್ಸಿನಲ್ಲಿ ಉದಯವಾಗುವವು. ಆತ್ಮನ ಪ್ರಕಾಶದಲ್ಲಿಯೇ ಇವುಗಳು ಕಾಣುವದರಿಂದ ಇವುಗಳು ನಾನಲ್ಲ. ಇವೆಲ್ಲವು ಗಳನ್ನು ಅರಿಯುವ ಅರುವೇ ನಾನೆಂದು ದೃಢನಿಶ್ಚಯಕ್ಕೆ ಬರಬೇಕು. ಸ್ವರೂ ಪಕ್ಕೆ ಅರುವು ಮರವೆಗಳಿಲ್ಲ. ಉದಯಾಸ್ತಮಾನಗಳಿಲ್ಲ. ಎಂಬ ದೃಢನಂಬಿಕೆ ಯನ್ನಿಟ್ಟು ವಿಷಯಾದಿಗಳನ್ನು ಮರೆಯಬೇಕು. ನಿನ್ನ ಅರುವನ್ನು ವಿಷಯ ಗಳ ಕಡೆಗೆ ಹೊರಳಿಸಿ ಜೀವನಾಗಬೇಡ, ಜೀವನನ್ನು ಸ್ವರೂಪದ ಕಡೆ ಹೊರಳಿಸಿ ಶಿವನಾಗು. ಈ ಭಾಗ್ಯದ ಗುಣವು ಸವಿಕಲ್ಪ ಸಮಾಧಿಯಲ್ಲಿರುವದು. ಇದಕ್ಕೇನೇ ವೀರಶೈವರು ಪ್ರಸಾದಗುಣವೆಂದು ಹೆಸರು ಕೊಟ್ಟಿರುವರು. ಆಂತರಿಕ ದೃಶ್ಯಗ ಳನ್ನು ಕಂಡರೂ ಸಾಕ್ಷೀಭೂತನಾಗಿರುವದೇ ತಟಸ್ಥಭೂಮಿಕೆಯು. ಇದುವೇ ಆಂತರಿಕ ಸವಿಕಲ್ಪ ಸಮಾಧಿಯೆನಿಸುವದು.

### "ಬಾಹ್ಯ ಸವಿಕಲ್ಪ ಸಮಾಧಿ"

ಬಾಹ್ಯದಲ್ಲಿ ಮೊದಲಿಗೆ ಮಹತ್ತು, ಮಹತ್ತಿನಿಂದ ಅಹಂಕಾರ, ಅಹಂಕಾ ರದಿಂದ ಪಂಚತನ್ಮಾತ್ರೆಗಳು, ಪಂಚತನ್ಮಾತ್ರೆಗಳಿಂದ ಪಂಚಮಹಾಭೂತಗಳು,

ಉದಯವಾದವು. ಇವುಗಳಿಗೆ ಆಶ್ರಯವಾಗಿ ಸಮಷ್ಟಿಯ ರೂಪದಿಂದ ಸಕಲ ಜಗತ್ತಿಗೂ ಪರಮಾತ್ಮನೊಬ್ಬನಿರುವನೆಂಬ ದೃಢಭೂಮಿಕೆಯಲ್ಲಿ ನಿಲ್ಲಬೇಕು. ಅಂತರಿಕ ವ್ಯವಹಾರದಲ್ಲಿ ವ್ಯಷ್ಟಿಗತವಾಗಿ ಪ್ರತ್ಯೇಕವಾಗಿದ್ದುಕೊಂಡು ಸಾಕ್ಷೀಭೂತನಾಗಿ ಕೂಟಸ್ಥ ಚೈತನ್ಯನೇ ನಾನೆಂಬ ತಿಳುವಳಿಕೆಯಲ್ಲಿರುವಂತೆ ಬಾಹ್ಯದಲ್ಲಿ ತೋರುವ ವಿಶ್ವಪ್ರಪಂಚಕ್ಕೆ ಪ್ರತ್ಯೇಕವಾಗಿದ್ದುಕೊಂಡು ಸಾಕ್ಷಿಭೂತನಾಗಿ ಪರಮಾತ್ಮನೇ ನಾನೆಂದು ತಿಳಿಯುವದು ಬಾಹ್ಯಸವಿಕಲ್ಪ ಸಮಾಧಿಯೆನಿಸುವದು. ಈ ಸ್ಥಿತಿಯಲ್ಲಿ ಮಹದಾದಿ ವಿಕೃತಿಗೆ ಒಳಗಾಗದೇ ಸ್ವರೂಪನೇ ತಾನೆಂದು ತಿಳಿಯಬೇಕು. ಆಗ ಸಾಧಕನಿಗೆ ವಿಶ್ವಪ್ರಪಂಚದಲ್ಲಿ ಕಾಣುವ ಎಲ್ಲ ವಸ್ತುಗಳಲ್ಲಿ ಆತ್ಮಭಾವ ಬರುವದು. ಎಲ್ಲವೂ ಪರಮಾತ್ಮನ ಸ್ವರೂಪನೇ ಎಂದು ತಿಳಿದಾಗ ನಾಮರೂಪಾತ್ಮಕ ಪ್ರಪಂಚದ ಮೇಲಿನ ಮೋಹವು ಕತ್ತರಿಸಿಬೀಳುವದು.

### ಅಂತರಿಕ ನಿರ್ವಿಕಲ್ಪ ಸಮಾಧಿ”

ಮನವು ಶಾಂತವಾದಾಗಲೇ ಸಾಕ್ಷೀ ಎಂಬ ಪದಕ್ಕೆ ಸೂಚಕಾರ್ಥವನ್ನು ಕೊಡುವದು. ಕರಣಾದಿಗಳ ಭಾವವನು ತೊರೆದು ಸಾಕ್ಷೀಭಾವದಲ್ಲಿ ಬೆರೆತು ಹೋಗಬೇಕು. ಆಗ ಜೀವಾತ್ಮನು ಅಂತರಾತ್ಮನಲ್ಲಿ ಒಂದಾಗಿ ಹೋಗುವನು. ಇದುವೇ ಅಂತರಿಕ ನಿರ್ವಿಕಲ್ಪ ಸಮಾಧಿಯೆನಿಸುವದು.

### “ಬಾಹ್ಯ ನಿರ್ವಿಕಲ್ಪ ಸಮಾಧಿ”

ಮಹದಾದಿಗಳ ಕಡೆಗೆ ದೃಷ್ಟಿಯನ್ನು ಬಿಟ್ಟು ಸಾಕ್ಷೀಭಾವವನ್ನು ಕೂಡ ಲಯಮಾಡಿಕೊಂಡು, ವಿಶ್ವಾತ್ಮನಲ್ಲಿ ಲಯವಾಗುವದೇ ಬಾಹ್ಯ ನಿರ್ವಿಕಲ್ಪ ಸಮಾಧಿಯೆನಿಸುವದು. ಅದರಂತೆ ಪಿಂಡಾಂಡ ಮತ್ತು ಬ್ರಹ್ಮಾಂಡಗಳ ಸಾಕ್ಷಿಭೂತನು ಸಂಪೂರ್ಣ ಲಯವಾದಾಗ ನಿರ್ವಿಕಲ್ಪ ಸಮಾಧಿಯೆನಿಸುವದು. ಸಾಧಕನಿಗೆ ಸವಿಕಲ್ಪ ಸಮಾಧಿಯಲ್ಲಿ ಮರಣವಾದರೆ ಪುನರ್ಜನ್ಮವಾಗುವದು. ಆದರೆ ಮುಂದಿನ ಜನ್ಮದಲ್ಲಿ ಅದರ ಲಾಭವು ದೊರೆಯುವದು. ನಿರ್ವಿಕಲ್ಪ ಸಮಾಧಿಯಲ್ಲಿ ದೇಹಪಾತವಾದರೆ ಮಾತ್ರ ಪುನರ್ಜನ್ಮ ವಿರುವದಿಲ್ಲ. ಅದುವೇ ಮುಕ್ತಿಯು. ಸವಿಕಲ್ಪ ಸಮಾಧಿಯಲ್ಲಿಯೇ ನಿರ್ವಿಕಲ್ಪ ಸಮಾಧಿಯು ಹೆಬ್ಬಾಗಿಲು ಕಾಣವದು. ಆದ್ದರಿಂದ ನಿಜಗುಣರು ಮೊದಲು ಸವಿಕಲ್ಪಸಮಾಧಿ ಹಿಂದಿನಿಂದ ನಿರ್ವಿಕಲ್ಪ ಸಮಾಧಿಯೆಂದು ಹೇಳಿದ್ದರಲ್ಲಿ ಬಹಳೇ ಅರ್ಥಗಾಂಭೀರ್ಯವದೆ.

# ೩. ಬಸವಣ್ಣನವರ ಸಾಧನ.

ಲೇಖಕರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ)

---

ಬಸವಣ್ಣನು ೧೧೧೪ ರಲ್ಲಿ ಉಪನಯನವನ್ನು ತಿರಸ್ಕರಿಸಿ ಕೂಡಲಸಂಗಮ ಕ್ಷೇತ್ರಕ್ಕೆ ಬಂದನು ಅವನ ಕೂಡ ಅಕ್ಕನಾಗಮ್ಮನೂ ಇದ್ದಳು. ಅಲ್ಲಿ ಇವರು ಆಯಿಯ ಮನೆಯಲ್ಲಿ ಅಂದರೆ ತಾಯಿಯ ತಾಯಿಯ ಮನೆಯಲ್ಲಿ ಇರಹತ್ತಿದರು, ಈಗ ಬಸವಣ್ಣನಿಗೆ ೮ ವರ್ಷ ತುಂಬಿದ್ದವು. ನಿತ್ಯ ಜಾತವೇದ ಮುನಿಗಳ ಆಶ್ರಮವಾದ ಕೂಡಲ ಸಂಗಮಕ್ಕೆ ಬಸವನು ಹೋಗುತ್ತಿದ್ದನು. ನದಿಯಲ್ಲಿ ಸ್ನಾನ ತೀರಿಸಿಕೊಂಡು ಅಲ್ಲಿಯ ಸ್ಥಾವರ ಲಿಂಗವಾದ ಕೂಡಲ ಸಂಗಮನ ಪೂಜೆ ಮಾಡಿ ಲಿಂಗದ ಮುಂದೆ ಧ್ಯಾನಸ್ಥನಾಗಿ ಕೂಡ್ರುವನು. ಪೂಜೆಮುಗಿದ ಬಳಿಕ ಗುರುಗಳಿಗೆ ನಮಿಸಿ ಅವರ ಉಪದೇಶಗಳನ್ನು ಕೇಳುವನು. ಊಟಕ್ಕೆ ಮನೆಗೆ ಹೋಗುವನು. ಹೀಗೆ ಕೆಲವು ದಿನಗಳೆದ ಬಳಿಕ ಆಯಿಯ ಮನೆಯನ್ನು ಬಿಟ್ಟು ಆಶ್ರಮದಲ್ಲಿಯೇ ಇರಹತ್ತಿದನು. ನಿತ್ಯ ೪ ಗಂಟೆಗೆ ನಸುಕಿನಲ್ಲಿ ಎದ್ದು; ಪ್ರಾತರ್ವಿಧಿಯಗಳನ್ನು ತೀರಿಸಿಕೊಂಡು ಲಿಂಗ ಪೂಜೆ ಮಾಡುವನು. ಆಗ ಪೂಜೆಯಲ್ಲಿ ವಚನಗಳನ್ನೇ ಹೇಳುವನು. ನಿತ್ಯ ಇದೇ ಪ್ರಕಾರ ಅವನ ಕಾರ್ಯಕ್ರಮವಿತ್ತು.

(೧) ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ ।
ಸಕಳ ವಿಸ್ತಾರದ ರೂಹು ನೀನೇದೇವ ವಿಶ್ವತೋ ಬಾಹು ನೀನೇ ದೇವ।
ವಿಶ್ವತೋ ಚಕ್ಷು ನೀನೆ ದೇವ ವಿಶ್ವತೋ ಮುಖ ನೀನೇ ದೇವ ।
ವಿಶ್ವತೋ ಪಾದ ನೀನೇ ದೇವಾ ಕೂಡಲಸಂಗಮ ದೇವಾ ॥೧॥

(೨) ವೇದವೇದಿಸ ಲರಿಯದೆ ಅಭೇದ್ಯ ಲಿಂಗವೆಂದು ನಡನಡುಗಿತ್ತು ।
ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯಲಿಂಗವೆಂದು ಸಾರುತ್ತೈದಾವೆ ।
ತರ್ಕ ತರ್ಕಿಸಲರಿಯದೆ ಅತರ್ಕಲಿಂಗವೆಂದು ಮನಗೊಳವು ।
ಆಗಮ ಅಗಮ್ಯಲಿಂಗವೆಂದು ಗಮಿಸಲರಿಯದೆ ಹೋದವು ।
ನರರು ಸುರರು ಅಂತುವ ಕಾಣರು ನಮ್ಮ ಕೂಡಲಸಂಗಮ ದೇವನ
ಪ್ರಮಾಣವ ಶರಣಬಲ್ಲ ॥೨॥

ಈ ಪ್ರಕಾರ ಲಿಂಗದ ಮಹಿಮೆಯನ್ನು ಮನಸಾ ಹಾಡಿ ಪ್ರಾರ್ಥಿಸು ವನು. ಇದು ಬಸವಣ್ಣನ ವಿಶ್ವರೂಪ; ಆದರೂ ನಿರಾಕಾರ ಸಕಳ ವಿಸ್ತಾರದ ರೂಪು; ಆದರೂ ಯಾವ ವರ್ಣವಿಲ್ಲ. ವಿಶ್ವತೋ ಬಾಹು; ಆದರೂ ಕೈಗೆ ನಿಲುಕದು. ವಿಶ್ವತೋ ಚಕ್ಷು, ವಿಶ್ವತೋ ಮುಖ, ವಿಶ್ವತೋ ಪಾದ ಆದರೂ ಕಣ್ಣಿಗೆ ಕಾಣ, ಮಾತಿಗೆ ನಿಲುಕ, ಇವನು ವೇದ, ಶಾಸ್ತ್ರ, ಪುರಾಣ, ಆಗಮ, ತರ್ಕಗಳಿಗೆ ಹೊಳೆಯದು. ಸರ ಸುರರಾರೂ ಇವನನ್ನು ಅರಿಯರು. ಇಂಥ ಪರ ಮಾತ್ಮನನ್ನು ಬಡವನು ಪರಿಪೂರ್ಣ ಅರಿಯಲಿಕ್ಕೆ ಸಾಧನಗಳನ್ನು ನವವಿಧ ಭಕ್ತಿಯನ್ನು ಒಳ್ಳೇ ಉಗ್ರವಾಗಿ ಪ್ರಾರಂಭಿಸಿದನು.

(೩) ಜನಿತಕ್ಕೆ ತಾಯಾಗಿ ಹೆತ್ತಿಹಳು ಮಾಯೆ. ಮೋಹಕ್ಕೆ ಮಗು ವಾಗಿ ಹುಟ್ಟಿದಳು ಮಾಯೆ ಕೂಟಕ್ಕೆ ಸ್ತ್ರೀಯಾಗಿ ಕೂಡಿಹಳು ಮಾಯೆ ಇದಾವ ಪರಿಯಲಿ ಕಾಡಿಹಿತು ಮಾಯೆ ಈ ಮಾಯೆಯ ಕಳೆವರೆ ಎನ್ನಳವಲ್ಲ ನೀವೇ ಬಲ್ಲಿರಿ ಕೂಡಲಸಂಗಮದೇವ. ಈ ವಿಶ್ವರೂಪ ದರ್ಶನ ಮಾಡಿಕೊಳ್ಳ ಬೇಕಾದರೆ ಮೊದಲು ಮಹಾ ಮಾಯೆಯನ್ನು ಕಳೆಯದೆ ಗತಿ ಇಲ್ಲ. ಈ ಮಾಯೆಯೇ ಅನಂತ ರೂಪ ತಾಳಿ ಅನಂತ ಕಾರ್ಯಗಳನ್ನು ನಡಿಸಿದ್ದಾಳೆ. ತಾಯಿ, ಮಗು ಸ್ತ್ರೀ ಎಲ್ಲವೂ ಆದಾಕೆ ಈ ಮಹಾ ಮಾಯೇ ಸರಿ, ಈಕೆಯ ಹೊಡತಕ್ಕೆ ಲೋಕ ಜರ್ಜಿತವಾಗಿ ಹೋಗಿದೆ. ಇಂಥ ಮಹಾ ಮಾಯೆಯನ್ನು ನಾನು ಕಳೆಯಲಾರೆ ನೀವೆ ಬಲ್ಲಿರಿ ಎನ್ನ ತಂದೆ ಕೂಡಲಸಂಗಮದೇವ. ನೀವು ನಿಮ್ಮ ಮಾಯೆಯನ್ನು ಎನ್ನಿಂದ ಕಳೆದು ನಿಮ್ಮ ದರ್ಶನವನ್ನು ನನಗೆ ಕೊಡ ಬೇಕೆಂದು ಸದಾ ಬೇಡುವನು.

(೪) ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎಲ್ಲ ಬಾಳುವೆ ಸಂಸಾರ ಸಂಗವ ಬಿಡದು ನೋಡೆನ್ನ ಮನವು. ಈ ನಾಯಿ ತನವ ಮಾಣಿಸು ಕೂಡಲಸಂಗಮದೇವ ಎಂದು ಅಣ್ಣನು ದೇವರಲ್ಲಿ ಮೊರೆ ಇಡುವನು. ಪರಮಾತ್ಮನೇ ನನ್ನನ್ನು ಮಾಯೆಯ ಕೈಯಲ್ಲಿ ಕೊಡಬೇಡ. ಸದಾ ನಿನ್ನ ಧ್ಯಾನ ಶಿವಚಿಂತೆಯೊಳಗೆ ಇಡಿರೆಂದು ದೇವರಿಗೆ ದೀನನಾಗಿ ಬೇಡುವನು—

(೫) ನರವಿಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವ ಶಿವಾ ಎಂದೋದಿಸಯ್ಯ ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು ಕೂಡಲ ಸಂಗಮ ದೇವಾ. ಈ ಜನರೆಂಬ ಮಹಾ ಅರಣ್ಯದಲ್ಲಿ ಎನ್ನಗೊಂದು ಚಿಕ್ಕ ಗಿಳಿಯನ್ನಾಗಿ ಮಾಡಿ ಭಕ್ತಿ ಎಂಬ ಪಂಜರದಲ್ಲಿ ಇಟ್ಟು ಸಲಹಿ ಸದಾ ಶಿವ!

ಶಿವಾ! ಎಂದು ಅನ್ನುವಂತೆ ಕರುಣಿಸೆಂದು ಅಣ್ಣನು ಬೇಡುವನು. ಇದೇ ಕ್ಷಣದಲ್ಲಿ ಅಣ್ಣನ ಮನಸ್ಸು ಚಂಚಲವಾಗಲು ಗೋಳಾಡಿ ಅನ್ನುವದೇನಂದರೆ—

(೬) ನಾನೊಂದು ನೆನೆದಡೆ ತಾನೊಂದು ನೆನೆವದು. ನಾನಿತ್ತಲೆಳೆದಡೆ ತಾನತ್ತಲೆಳೆವುದು. ತಾ ಬೇರೆ ಎನ್ನನಳಲಿಸಿ ಕಾಡಿತ್ತು. ತಾ ಬೇರೆ, ಎನ್ನ ಬಳಲಿಸಿ ಕಾಡಿತ್ತು. ಕೂಡಲಸಂಗಾ ನಿಮ್ಮ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ. ''

ಮಾಯೆಯು ಹೊಡತ ಈ ಪ್ರಕಾರ ಬಹು ತ್ರಾಸದಾಯಕ. ಯಾವಾಗಲೂ ಈ ಸಂಸಾರದ ಬಗೆಬಗೆಯ ಮೋಹಕ ವಿಷಯಗಳತ್ತ ಎಳೆದೊಯ್ಯುವದು. ಪರಮಾತ್ಮನ ಕಡೆಗೆ ಹೋಗಗೊಡುವದಿಲ್ಲ. ಮುಂದುಗೆಡಿಸಿ ತನ್ನನ್ನು ಕಾಡುವದೇದೂ ಅದನ್ನು ಬಿಡಿಸಿ ದೂರಮಾಡೆಂದು ದೇವನಲ್ಲಿ ಅನನ್ಯ ಭಕ್ತಿಯಿಂದ ಬೇಡಿಕೊಳ್ಳುವನು. ಭಕ್ತಿಮಾಡುತ್ತ—

(೭) " ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವದು, ಮಾಡಿದ ಪೂಜೆಯ ನೋಡುವದು. ಶಿವತತ್ವಗೀತವ ಪಾಡುವದು. ಶಿವನ ಮುಂದೆ ನಲಿದಾಡುವದು. ಭಕ್ತಿಸಂಭಾಷಣೆಯ ಮಾಡುವದು. ನಮ್ಮಸಂಗಯ್ಯನ ಕೂಡುವದು. " ಈಪ್ರಕಾರ ಶಿವನ ತತ್ವಹಾಡಿ ಶಿವನ ಮುಂದೆ ಕುಣಿದಾಡಹತ್ತಿದನು.

(೮) 'ನರಕೂರಂಬಿನಲೆಚ್ಚುವಂಗೊಲಿದೆಯಯ್ಯ । ಅರಳಂಬಿನಲೆಚ್ಚ ಕಾಮನ ಸುಹಿದೆ । ಇರುಳು ಹಗಲೆನ್ನದೆ ಘಾತವ ಮಾಡಿದ ಬೇಡನ ಕೈಲಾಸ ಕೊಯ್ದೆಯಯ್ಯ. '

ಇಂಥಿಂಥ ದುಷ್ಟ ಬೇಡರಿಗ ಮೆಚ್ಚಿ ಕೈಲಾಸಕ್ಕೆ ಒಯ್ದಿ ಆದರೆ ನನಗೇಕೆ ನೀನು ದರ್ಶನಕೊಡದೆ? ಮೌನವಾಗಿ ಯಾಕೆ ಕುಳಿತಿರುವಿ. ನನ್ನಲ್ಲಿ ನೀನು ದರ್ಶನ ಕೊಡದೆ ಮೌನವಾಗಿ ಯಾಕೆ ಕುಳಿತಿರುವಿ ನನ್ನಲ್ಲಿ ನೀನು. ಒಳ್ಳೇ ಗುಣಗಳನ್ನು ಅರಸಬೇಡ ಯಾಕಂದರೆ—

(೯) ಮೇರುಗುಣವನರಸುವರೆ ಕಾಗಿಯಲ್ಲಿ? ಪರುಷಗುಣವನರಸುವರೇ ಕಬ್ಬುನದಲ್ಲಿ? ಸಾಧುಗುಣವನರಸುವರೇ ಅವಗುಣಿಯಲ್ಲಿ? ಚಂದನ ಗುಣವ ನರಸುವರೇ ತರುಗಳಲ್ಲಿ? ಎಂದು ಅಣ್ಣನು ದೇವರಿಗೆ ವಿನಯ ಸಂಭ್ರಮದಿಂದ ಮೊರೆಯಿಡುವನು. ಅಣ್ಣನು ಸರ್ವಾಂಗಸುಂದರನೂ ಒಳ್ಳೇ ಗುಣ

ವಂತನೂ ನೀತಿವಂತನೂ ಇದ್ದರೂ ಪರಮಾತ್ಮನ ಮುಂದೆ ತನ್ನನ್ನು ಹೀನ ಗುಣದವನೆಂದು ಹೇಳಿಕೊಂಡಿದ್ದು ಅಣ್ಣನ ನಿರಹಂಕಾರ ನಿರಭಿಮಾನಗಳನ್ನು ಸೂಚಿಸುವದು. ಮಾನವನು ಅತಿ ನಿರಹಂಕಾರಿಯಾದಾಗ ಮಾತ್ರ ಪರಮಾತ್ಮನ ಕೈಗೂಸಾಗುವನು. ಆಗಮಾತ್ರ ಪರಮಾತ್ಮನ ದರ್ಶನಕೊರತು ಅಲ್ಲಿಯತನಕ ಯಾವದೂ ಶಕ್ಯವಿಲ್ಲ.

ಪುನಃ ಪರಮಾತ್ಮನನ್ನು—

(೧೦) ಅತ್ತಲಿತ್ತ ಹೋಗದಂತೆ ಹೆಳವನಮಾಡಯ್ಯಾ ತಂದೆ, ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ. ಮತ್ತೊಂದ ಕೇಳ ದಂತೆ ಕಿವುಡನ ಮಾಡಯ್ಯ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವ.

ಎಂದು ದೇವನನ್ನು ಬೇಡಿಕೊಳ್ಳುವನು. ಅನ್ಯವನ್ನು ಕೇಳದಂತೆ ಅನ್ಯ ವನ್ನು ನೋಡದಂತೆ ಮತ್ತೊಂದು ಕಡೆಗೆ ಹೋಗದಂತೆ ಅನ್ಯ ವಿಷಯಕ್ಕೆ ಳಸದಂತೆ ಸದಾ ದೇವರ ಬಗ್ಗೆ ಕೇಳುವಂತೆ ಸದಾ ದೇವರನ್ನೇ ನೋಡು ವಂತೆ ಅನ್ಯ ವಿಷಯಗಳಿರುವ ಸ್ಥಾನಗಳಿಗೆ ಹೋಗದಂತೆ ಮಾಡೆಂದು ದೇವ ರಲ್ಲಿ ಮೊರೆ ಇಡುವನು.

ಹೀಗೆ ಮೊರೆ ಇಟ್ಟರೂ ಅಣ್ಣನಲ್ಲಿ ಅನೇಕ ವಿಕಾರಗಳು ಬರುವವು ಆಗ ಅವನು—

(೧೧) ಕಾಯವಿಕಾರ ಕಾಡಿಹುದಯ್ಯ! ಮನವಿಕಾರ ಕೂಡಿಹುದಯ್ಯ! ಇಂದ್ರಿಯವಿಕಾರ ಸುಳಿವುದಯ್ಯಾ! ಸುಳಿವಿನೊಳಗೆ ಸುಳಿಯುತಲಿದ್ದೇನೆ. ಸಿಲುಕಿಸದಿರಯ್ಯ! ನಿಮ್ಮ ಚಿತ್ತವಿರಿಸಯ್ಯ! ಅನುಪಮಸುಖಸಾರಾಯ ಶರಣ ರಲ್ಲಿ ಕೂಡಲಸಂಗಮದೇವಯ್ಯ ಇದನೆ ಬೇಡುವೆನಯ್ಯ.''

ಎಂದು ವಿಕಾರಗಳನ್ನೆಲ್ಲ ತೆಗೆದು ಸಕಲ ವಿಕಾರರಹಿತನ ಮಾಡಿ ದರ್ಶನ ಕೊಡು ಎಂದು ಅಂಗಲಾಚಿ ಬೇಡಿಕೊಳ್ಳುವನು. ಹೀಗೆ ಬೇಡುತ್ತಿದ್ದರೂ ಅಣ್ಣನಿಗೆ ದೇವರು ನೋಡುವದಕ್ಕಾಗಿ ಕೆಲವು ವಿಷಯಗಳನ್ನು ನೋಡು ವಂತೆಸರುವನು. ಆಗ ಅಣ್ಣನು—

(೧೨) "ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆ ಯಯ್ಯ! ಪಶುವೇನುಬಲ್ಲುದು? ಹಸುರೆಂದೆಳಸುವದು. ವಿಷಯರಹಿತನ ಮಾಡಿ

ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿ ಎಂಬ ಉದಕವ ನೆರೆದು, ನೋಡಿ ಸಲಹಯ್ಯ ಕೂಡಲಸಂಗಮದೇವ"

ಎಂದು ಮೊರೆ ಇಡುವನು. ಇವೆಲ್ಲ ಸಾಧಿಸಬೇಕಾದರೆ ಪರಮಾತ್ಮನ ಬಲುಮೆಯಾಗದೆ ಆಗದೆಂದು ನಿಶ್ಚಯ ಮಾಡುವನು.

(೧೩) "ನೀನೊಲಿದರೆ ಕೊರಡು ಕೊನರುವದಯ್ಯಾ, ನೀನೊಲಿದರೆ ಬರಡು ಹಯನಹುದಯ್ಯ ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ. ನೀನೊಲಿದರೆ ಸಕಲಪರಿ ಪದಾರ್ಥ ಇದಿರಲ್ಲಿಪ್ಪವು."

ಹೊರತು ಏನುಮಾಡಿದರೂ ಏನೂ ಇಲ್ಲ. ಪರಮಾತ್ಮನು ಒಲಿದರೆ ಮಾತ್ರ ಯಾವತ್ತೂ ಸಿದ್ಧಿಗಳು ದರ್ಶನಗಳು ಆಗುವವು. ಎಲ್ಲದಕ್ಕೂ ಪ್ರಭು ವಿನ ಕೃಪೆ ಒಲುಮೆ ಅವಶ್ಯ ಬೇಕೇಬೇಕು. ಇದಿಲ್ಲದಿದ್ದರೆ ಯಾವದೂ ಸಾಧಿಸುವದಿಲ್ಲ. ಎಲ್ಲವೂ ಅರಣ್ಯರೋಧನೆಯಾಗುವದು. ಆದರೂ ಅಣ್ಣನ ಮನೆ ಸ್ವಲ್ಪ ಆಶೆಯ ಕಡೆಗೆ ಹರಿವುದನ್ನು ಕಂಡು ಹೀಗೆ ಮೊರೆ ಇಡುವನು.

(೧೪) ಎಲೆ ಎಲೆ ಮನವೆ ಅಳಿಯಾಸೆ ಬೇಡವೋ । ಕಾಳ ಬೆಳದಿಂಗಳ ಸಿರಿ ಸ್ಥಿರವಲ್ಲ । ಕೇಡಿಲ್ಲದ ಪದವಿಯ ಬೇಡು । ಕೂಡಲಸಂಗಮ ದೇವನ ಮರೆಯದೆ ಪೂಜಿಸು" ॥

ಸಿರಿ ಸಂಸಾರ ಸ್ಥಿರವಲ್ಲ ಅದು ಬಂಗಾರದೊಂದು ದಿನ ಕೆಟ್ಟೇ ಕೆಡುವದು.

(೧೫) "ಸಂಸಾರವೆಂಬುದು ಗಾಳಿಯ ಸೊಡರು । ಸಿರಿಯೆಂಬುದೊಂದು ಸಂತೆಯ ಮಂದಿ ಕಂಡೈಯ್ಯ । ಇದನಚ್ಚಿ ಕೆಡಬೇಡ ಸಿರಿ ಎಂಬದ" ಎಂದು ಮನಕ್ಕೆ ಹೇಳಿಕೊಂಡು ಮನವನ್ನು ಸಂತೈಸುವನು. ಆದರೂ ಅಣ್ಣನಿಗೆ ಶರೀರದ ಮೇಲೆ ಪ್ರೇಮ ಹುಟ್ಟುವದು. ಹೆಚ್ಚಿನ ತ್ರಾಸನ್ನು ಶರೀರಕ್ಕೆ ಕೊಡದೆ ಸಾದನ ಮಾಡುವದನ್ನು ಅಣ್ಣನು ತನ್ನನ್ನು ತಾನೇ ಖಂಡಿಸುವನು. ಎಲೆ ಮನವೇ ಈ ಶರೀರದ ಮೇಲೆ ಇಷ್ಟೇಕೆ ಮೋಹ? ಬಲಗಾದ ಸಾಧನಗಳನ್ನು ಮಾಡು. ಹಿಂಜರಿಯಬೇಡ. ಶರೀರವು ಅನಿತ್ಯ ಅಶಾಶ್ವತ ಜ್ಞಾನಿಗಳು ಶರೀರಕ್ಕೆ ಒಂದು ಕಾಸಿನ ಬೆಲೆ ಮಾಡಿದರು.

(೧೬) "ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬೆಲೆ ವರಯ್ಯ ನೆಲನಾಳ್ವನ ಹೆಣನ ತಂದರೆ ಒಂದಡಿಕೆಗೆ ಕೊಂಬವರಿಲ್ಲ! ನೋಡಯ್ಯ ಮೊಲನಿಂದ ಕರಕಷ್ಟ ನರನ ಬಾಳುವೆ । ಸಲೆನಂಬು ನಮ್ಮ ಕೂಡಲ

ಸಂಗಮದೇವನ " ಎಂದು ತನ್ನ ಮನಸ್ಸಿಗೆ ಬುದ್ಧಿ ಹೇಳುವನು. ಬೇಸರಿಯದೆ. ಶರೀರದ ಪರಿವೆ ಇಲ್ಲದೆ ಊಟ, ಆಟ, ನೋಟಗಳ ಪರಿವೆಯಿಲ್ಲದೆ ಸಾಧನ ಮಾಡು ಅಂದರೆ ದೇವರು ತೀವ್ರ ದರ್ಶನಕೊಡುವನೆಂದು ತನ್ನ ಮನಸ್ಸಿಗೆ ಹೇಳುವನು. ಪುನಃ ದೇವರಿಗೆ ಮೊರೆ ಇಡುವನು.

(೧೭) "ಅಯ್ಯಾ ! ಅಯ್ಯಾ ! ಎಂದು ಕರೆಯುತಲಿದ್ದೇನೆ. ಅಯ್ಯಾ ಅಯ್ಯಾ ಎಂದು ಬರೆಯುತಲಿದ್ದೇನೆ. 'ಓ' ಎನ್ನಲಾಗದೆ ಅಯ್ಯಾ? ಆವಾಗಳೂ ನಿಮ್ಮ ಕರೆಯುತಲಿದ್ದೇನೆ. ಮೌನವೇ ಕೂಡಲಸಂಗಮ ದೇವಾ?

(೧೮) ಎನ್ನ ಆಪತ್ತು ಸುಖ ದುಃಖ ನೀವೇ ಕಂಡಯ್ಯಾ ! ಮತ್ತಾರೂ ಇಲ್ಲ ಹರಾ ಹರಾ ನೀವೇ ಕಂಡಯ್ಯ! ಎನ್ನ ಮಾತಾಪಿತನು ನೀವೇ ಕಂಡಯ್ಯ ಕೂಡಲಸಂಗಮ ದೇವಾ. " ಈ ಪ್ರಕಾರ ದೇವರಿಗೆ ಸದಾ ಬೇಡುವನು. ದೇವರೆ ತನ್ನ ತಾಯಿ ತಂದೆ ಬಂದು ಬಳಗವೆಂದು ನಿವೇದಿಸುವನು. ಮೌನವೇಕೆ ತನ್ನ ಕೂಡ ಮಾತಾಡೆಂದು ಅಣ್ಣನು ಶಿವನಿಗೆ ಮೊರೆ ಇಡುವನು.

(೧೯) ದೇವಾ! ನೀ ಭವರೋಗ ವೈದ್ಯನೆಂದು ನಾ ನಿಮ್ಮ ಮೊರೆ ಹೊಕ್ಕೆ ! ಭಕ್ತಿ ದಾಯಕ ನೀನು ಕರುಣಿಸು ಲಿಂಗ ತಂದೆ ! ಜಯ ಜಯ ಶ್ರೀ ಮಹಾದೇವ ಜಯ ಜಯ ಶ್ರೀ ಮಹಾದೇವ ಜಯ ಜಯ ಶ್ರೀ ಮಹಾದೇವ ಎನುತಿದ್ದಿತ್ತೆನ್ನ ಮನವು ಕೂಡಲಸಂಗಮದೇವಂಗೆ ಶರಣೆನ್ನುತಿದ್ದಿತ್ತೆನ್ನ ಮನವು" ಈ ಪ್ರಕಾರ ಅಣ್ಣನ ಮನಸ್ಸು ಶಿವನಿಗಾಗಿ ಬೇಡುವದು- ಆದರೂ ಶಿವನಿಗೆ ಇನ್ನೂ ದಯ ಹುಟ್ಟಲಿಲ್ಲ. ಅಣ್ಣನ ಮನಸ್ಸು ಇನ್ನೂ ತಿಳಿತಿಳಿಯಾಗಬೇಕಾಗಿತ್ತು. ಆಗ ಅಣ್ಣನು ಪುನಃ.

(೨೦) "ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನಿಗೆ ನಿಜಪುರಕೊಯ್ದೆ, ನಂಬಿ ಕರೆದಡೆ 'ಓ' ಎಂದೆ. ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ ಕೂಡಲಸಂಗಮ ದೇವಾ ಎನ್ನನೇಕೊಲ್ಲೆಯಯ್ಯಾ? " ಎಂದು ಹಿಂದೆ ಆಗಿ ಹೋದ ಕೆಲ ಮಹಿಮರಿಗೆ ತೀವ್ರ ಒಲಿದಿ ನನಗೇಕೆ ಒಲಿಯಲೊಲ್ಲಿ? ಎಂದು ಬೇಡಿಕೊಳ್ಳುವನು. ಆಗ ಪರಮಾತ್ಮನ ರಕ್ಷಣೆಬೇಡತ್ತ—

(೨೧) "ಆನು ಒಬ್ಬನು ಸುಡುವವೈವರು ಮೇಲೆ ಕಿಚ್ಚು ಘನ ನಿಲಲು ಬಾರದು ಕಾಡಬಸವನ ಹುಲಿ ಕೊಂಡೊಯ್ದರೆ ಆರೈಯ್ಯಲಾಗದೇ ಕೂಡಲಸಂಗಮದೇವಾ? " ಎಂದು ಅಣ್ಣನು ತನ್ನನ್ನು ಕಾಡಬಸವನ ಹುಲಿಗೆ ಹೋಲಿಸಿಕೊಂಡು ದೇವರಿಗೆ ಮೊರೆ ಇಡುವನು.

ಈ ಕೆಲಸ ಶಿವನೇ ನಿನ್ನಿಂದ ಏಕೆ ಆಗಲೊಲ್ಲದು? ನೀನೇನು ಸಾಮಾನ್ಯನಲ್ಲ. ನಿನ್ನ ಮಕ್ಕಳಿಗೆ ಬಂದರೆ ಬೇಕಾದ ಕೆಲಸಗಳನ್ನು ಭಕ್ತರಿಂಗಾಗಿ ಮಾಡುವಿ ನನಗೇಕೆ ಕರುಣಿಸಲೊಲ್ಲಿ ದೇವಾ.

(೨೨) "ಹರಿಯಜ ಮನುಮುನಿಗಳೆಲ್ಲರು ನಿಮ್ಮ ಬಾಗಿಲ ಕಾಯ್ದಿಪ್ಪರು. ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ? ಪಿಂಗರಿಗನ ಮನೆಗೆ ಲಿಂಗಜಾಹೆವಕ್ಕೆ ಹೋಗಿ ಇದ್ದವರೊಳರೇ ಕೂಡಲಸಂಗಮದೇವ" ಎಂದು ಶಿವನ ಮಹಿಮೆಯನ್ನು ಹಾಡುವನು. ಇಂಥ ಮಹಿಮಾಶಾಲಿ ಶಿವನು ಬಾಣನ ಬಾಗಿಲ ಕಾಯ್ದನೆಂದ ಮೇಲೆ ನನ್ನನೇಕೆ ಕರುಣಿಸಿ ದರ್ಶನ ಕೊಡಲೊಲ್ಲಿ ಎಂದು ಅಂಗಲಾಚಿ ಬೇಡಿಕೊಳ್ಳುವನು ದೇವರಿಗೆ.

(೨೩) "ಎನ್ನ ಕಾಯುವ ದಂಡಿಗೆಯ ಮಾಡಯ್ಯ। ಎನ್ನ ಶಿರವ ಸೋರೆಯ ಮಾಡಯ್ಯ ಎನ್ನ ನರವ ತಂತಿಯ ಮಾಡಯ್ಯ। ಎನ್ನ ಬೆರಳ ಕಡ್ಡಿಯ ಮಾಡಯ್ಯ ಬತ್ತೀಸರಾಗವ ಹಾಡಯ್ಯ। ಉರದ ತೊತ್ತಿ ಬಾರಿಸು ಕೂಡಲ ಸಂಗಮದೇವಾ।"

ಹೀಗೆ ಅಣ್ಣನು ಶರೀರವೆ ಕೋಲು, ತಲೆಯೇ ಕುಂಬಳಕಾಯಿ, ನರಗಳೆಲ್ಲ ತಂತಿ, ಬೆರಳು ಕಡ್ಡಿ ಮಾಡಿ, ಅದರಿಂದಾದ ತಂಬೀರಿಯಿಂದ ಮೂವತ್ತೆರಡು ರಾಗಗಳಿಂದ ಶಿವಭಕ್ತಿಯ ಅನೇಕ ಗೀತಗಳನ್ನು ಹಾಡಿ ಶಿವನ ವರ ಭಕ್ತಿಯನ್ನು ಮಾಡಿಸೆಂದು ಬೇಡಿಕೊಳ್ಳುವನು. ಮತ್ತು ಆಗ ಶಿವಭಕ್ತಿಯ ಗೀತಗಳು ತನ್ನ ಸರ್ವಾಂಗಗಳಲ್ಲಿ ತುಂಬಲೆಂದು ಬೇಡಿಕೊಳ್ಳುವನು.

(೨೪) "ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ। ಮನದಲ್ಲಿ ನಿಮ್ಮ ನೆನಹು ತುಂಬಿ। ಕಿವಿಯಲಿ ನಿಮ್ಮ ಕೀರುತಿ ತುಂಬಿ। ಕೂಡಲ ಸಂಗಮದೇವಾ ನಿಮ್ಮ ಚರಣ ಕಮಲದೊಳಗಾನು ತುಂಬಿ॥"

ಈ ಪ್ರಕಾರ ಸಕಲ ಇಂದ್ರಿಯಗಳಲ್ಲಿ, ಮನಸ್ಸಿನಲ್ಲಿ, ಬುದ್ಧಿಯಲ್ಲಿ, ಚಿತ್ತದಲ್ಲಿ, ಅಹಂಕಾರದಲ್ಲಿ ಸದಾ ಪರಮಾತ್ಮನ ನೆನಹು, ರೂಪ, ನಾಮಾಮೃತ, ಕೀರುತಿಗಳೇ ತುಂಬಿ ತುಳಕಾಡಲೆಂದು ಬೇಡುವನು. ತಾನು ಪರಮಾತ್ಮನ ಚರಣ ಕಮಲದೊಳಗೆ ತುಂಬಿಯೂ ಇರಬೇಕೆಂದೂ ಸದಾ ಭಕ್ತಿರಸವ ಸವಿಯಬೇಕೆಂದೂ ದೇವನಲ್ಲಿ ಬೇಡಿಕೊಳ್ಳುವನು. ಇದೆಲ್ಲ ಬಸವಣ್ಣನವರ ಭಕ್ತಿಯ

ತಿರುಳು ಹುರುಳು ಸಾರವಾಗಿರುವದು. ದೇವಾ ನೀನು ದರ್ಶನ ಕೊಡದಿದ್ದರೂ ಚಿಂತೆಯಲ್ಲಿ ಅನ್ಯರಿಗೆ ಬೇಡದಂತೆ ಮಾತ್ರ ಇರಿಸೆಂದು ಬೇಡುವನು- -

(೨೫) "ಧೃತಿಗೆಟ್ಟು ಅನ್ಯರ ಬೇಡದಂತೆ। ಮತಿಗೆಟ್ಟು ಪರರ ಹೊಗಳದಂತೆ ಪರಸತಿಯು ರತಿಗೆ ಮನಬೆಳಸದಂತೆ ಇರಿಸಯ್ಯಾ ಕೂಡಲ ಸಂಗಮದೇವಾ॥

ಎಂದು ಅಣ್ಣನು ಪರಮಾತ್ಮನಲ್ಲಿ ವಿನಂತಿ ಮಾಡಿಕೊಳ್ಳುವನು. ಹಾಗೇ ಕಳವಳದಿಂದ-

(೨೬) "ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ. ಅಕಟಕಟಾ ಶಿವ ನಿನಗಿನಿತು ಕೃಪೆ ಇಲ್ಲ. ಏಕೆ ಹುಟ್ಟಿಸಿದಿ? ,ಇಹಲೋಕಕು ದುಃಖಿಯ ಪರಲೋಕ ದೂರನ? ಏಕೆ ಹುಟ್ಟಿಸಿದೆ? ಕೂಡಲಸಂಗಮದೇವ ಕೇಳಯ್ಯಾ ಎನಗಾಗಿ ಮತ್ತೊಂದು ತರು ಮರಾದಿಗಳದಿಲ್ಲವೇ। "

ಈ ಪರಮಾತ್ಮನಿಗೆ ತಾನು ಇಹಲೋಕದಲ್ಲಿ ದುಃಖಿ ಪರಲೋಕದ ದೂರನೆಂದು ನಿವೇದಿಸುವನು. ಯಾಕೆಂದರೆ ಸಾಧನೆಗಳನ್ನು ಪೂರ್ಣ ಮನಸ್ಸಿನಿಂದ ಮಾಡುವದು ಆಗಲೊಲ್ಲದು. ಅದನ್ನು ಬಿಟ್ಟು ಸಂಸಾರದ ವಿಷಯಗಳಲ್ಲಿಯೂ ತಾನು ಆನಂದ ಪಡಲೊಲ್ಲದು ನಡುವಿನ ಕತ್ತಿಯಾದಂತೆ ಅವನಿಗೆ ಅನಿಸಿದ್ದರಿಂದ ಹೀಗೆ ಹೇಳಿಕೊಳ್ಳುವನು. ದೇವರ ದರ್ಶನವಾದರೆ ಸಾರ್ಥಕವಾಗುವದು. ಇಲ್ಲವಾದರೆ ಜೀವನದಲ್ಲಿ ಎಳ್ಳನಿತೂ ತನಗೆ ಸುಖವೇ ಇಲ್ಲೆಂದು ಗೋಳಾಡಿದನು ತನ್ನ ಎಲ್ಲ ಸುಖ ದುಃಖಗಳನ್ನು ಪರಮಾತ್ಮನದೆಂದೇ ಬಗೆದು-

(೨೭) "ಎನ್ನ ನಾಮ ಕ್ಷೇಮ ನಿಮ್ಮದಯ್ಯ। ಎನ್ನ ಹಾನಿ ವೃದ್ಧಿ ನಿಮ್ಮದಯ್ಯ ಎನ್ನ ಮಾನಾಪಮಾನವು ನಿಮ್ಮದಯ್ಯ। ಒಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲಸಂಗಮದೇವ?" ಎಂದು ಅಣ್ಣನು ಸಕಲ ಒಳಿತು ಕೇಡುಗಳನ್ನು ಪರಮಾತ್ಮನಿಗೆ ನಿವೇದಿಸುವನು. ಹೀಗೆ ಹೇಳಿ ಅಣ್ಣನು ಸ್ವಲ್ಪ ತಪ್ಪು ಮಾಡಿದ್ದಾನೆ. ಎನ್ನ ನಾಮ ಎನ್ನದು. ಎನ್ನ ಕ್ಷೇಮ ನಿನ್ನದು. ಎನ್ನ ಹಾನಿ ಎನ್ನದು. ಎನ್ನ ವೃದ್ಧಿ ನಿಮ್ಮದು. ಎನ್ನ ಅಪಮಾನ ಎನ್ನದು ಎನ್ನ ಮಾನ ನಿಮ್ಮದು. ಎಂದು ಹೇಳಿದ್ದರೆ ಪರಭಕ್ತಿ ಆಗಿ ನಿಜವ ನುಡಿದಂತೆ ಆಗುತ್ತಿತ್ತು. ನನಗೆ ಒಳ್ಳೇದೆಲ್ಲ ಆದದ್ದು ಪರಮಾತ್ಮನ ಕೃಪೆಯಿಂದ. ನನಗೆ ಕೆಟ್ಟದ್ದೆಲ್ಲ ಆದದ್ದು ನನ್ನ ದುಷ್ಕರ್ಮದ ಫಲದಿಂದ ಇದನ್ನು ದೇವರ ಮೇಲೆ ಹಾಕುವದು ಅಣ್ಣನ ತಪ್ಪು.

—ಮುಂದುವರೆಯುವದು.

# ಹಿಂದೂ ಧರ್ಮದಲ್ಲಿಯ ಭಿನ್ನ ಭಿನ್ನ ಆಶ್ರಮಗಳು.

ಲೇಃ— ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ದೇವರ ನಿಂಬರಗಿ ಜಿ. ವಿಜಾಪೂರ.

ಭಾರತದ ಇತಿಹಾಸದಲ್ಲಿ ನಮ್ಮ ಋಷಿ ಪುಂಗವರು ಮಾಡಿದ ಕಾರ್ಯವು ಅಮೋಘವಾದದ್ದು ಅದು ಕಾಲಕಾಲಕ್ಕೂ ತೊಳಗಿ ಬೆಳಗಿದ್ದೆ ಹೊರತು ಕುಂದತಕ್ಕದ್ದಲ್ಲ. ಯುರೋಪದ ರಾಷ್ಟ್ರಗಳು ಗಾಢ ಕತ್ತಲೆಯ ಮುಸುಕಿನಲ್ಲಿದ್ದಾಗ ನಮ್ಮ ಭಾರತವು ಮಾನವಕುಲಕ್ಕೆ ಮಾಡಿದ ಉಪಕಾರವು ಚಿರಸ್ಮರಣೀಯವಾದುದು. ನಮ್ಮ ಋಷಿ ಪುಂಗವರು ಮಾನವನ ಅಂತಿಮಧ್ಯೇಯವು ಮುಕ್ತಿ ಎಂಬುದನ್ನು ಕಂಡು ಹಿಡಿದರು. ಆದಕ್ಕಾಗಿ ಅವರು ಅನೇಕ ಸೋಪಾನಗಳನ್ನು ಮಾಡಿರುವರು. ಅವು (೧) ಬ್ರಹ್ಮಚರ್ಯ (೨) ಗ್ರಹಸ್ಥ (೩) ವಾನಪ್ರಸ್ಥ ಮತ್ತು (೪) ಸನ್ಯಾಸ.

ಮೊದಲನೆಯ ಆಶ್ರಮವಾದ ಬ್ರಹ್ಮಚರ್ಯದಲ್ಲಿ ತನ್ನ ಸ್ವರೂಪದ ಜ್ಞಾನಮಾಡಿಕೊಂಡು ಮುಕ್ತನಾಗುವ ಹೋರಾಟ ನಡಿಸುವವನು ಉತ್ತಮನೆಂದೂ, ಎರಡನೆಯ ಆಶ್ರಮವಾದ ಗ್ರಹಸ್ಥಾಶ್ರಮದಲ್ಲಿ ಸ್ವರೂಪ ಜ್ಞಾನ ಮಾಡಿಕೊಳ್ಳಲು ಪ್ರಯತ್ನಿಸುವವನೂ ಮಧ್ಯಮನೆಂದೂ, ಮೂರನೆಯ ಆಶ್ರಮವಾದ ವಾನಪ್ರಸ್ಥದಲ್ಲಿ ಗೃಹಸ್ಥ ಕಾಲದಲ್ಲಿಯ ಹೊಡೆತದ ಅನುಭವ ಸ್ಮರಿಸಿಕೊಂಡು ಮುಕ್ತನಾಗಬೇಕೆನ್ನುವವನು ಕನಿಷ್ಠನೆಂದೂ ಹಾಗೂ ಮೊದಲಿನ ಮೂರು ಆಶ್ರಮಗಳಲ್ಲಿ ಹುರುಳಿಲ್ಲವೆಂದು ಅನುಭವ ಪಡೆದು ಲಜ್ಜೆಗೆಟ್ಟು ಶಾಂತಿ ಧಾಮದ ಕಡೆಗೆ ಸಾಗುವವನು ಅತಿ ಕನಿಷ್ಟನೆಂದೂ ಶ್ರೇಷ್ಠ ಯೋಗಿಗಳು ಗಣಿಸಿದ್ದಾರೆ, ಆದರೆ ಈ ಆಶ್ರಮಗಳೆಂದರೇನು? ಹೇಗೆ ನಡೆದರೆ ಮನುಷ್ಯನು ಯಾವ ಆಶ್ರಮದವನಾಗುವನು? ಪ್ರತಿಯೊಂದು ಆಶ್ರಮದ ಆಚರಣೆ ಏನು? ಎಂಬದನ್ನು ವಿಚಾರಿಸುವದು ಅವಶ್ಯಕವು ಈ ನಾಲ್ಕು ಆಶ್ರಮಗಳಲ್ಲೊಂದಾದ ಬ್ರಹ್ಮಚರ್ಯದ ವಿಷಯಕ್ಕೆ ಮಹಾತ್ಮರ ಮತ್ತು ನನ್ನ ವಿಚಾರವನ್ನು ಬಾಂಧವರ ಅರಿಕೆಗಾಗಿ ವಿಧಿಸಪಡಿಸುವೆ.

## ೧. ಬ್ರಹ್ಮಚರ್ಯ.

ಬ್ರಹ್ಮಚರ್ಯವೆಂದರೆ ಬ್ರಹ್ಮನನ್ನು ಪ್ರಾಪ್ತಮಾಡಿಕೊಳ್ಳುವದು ಎಂಬರ್ಥ ಆದುದರಿಂದ ಬ್ರಹ್ಮನನ್ನು ಕಾಣಬೇಕಾದರೆ ಬ್ರಹ್ಮಚರ್ಯವನ್ನು ಪಾಲಿಸಬೇಕು. ಬ್ರಹ್ಮಚರ್ಯವೆಂದರೆ ವೀರ್ಯವನ್ನು ಕಾಪಾಡಿಕೊಳ್ಳುವದು. ವೀರ್ಯವನ್ನು ಕಾಪಾಡಿಕೊಳ್ಳುವದು ಕೂಡಾ ಒಂದು ತಪಸ್ಸೇ ಆಗಿದೆ. ಅಂಥ ಒಂದು ತಪಸ್ಸಿಗಾಗಿ ನಾವು ಅನೇಕ ಕರ್ಮಗಳನ್ನು ತ್ಯಜಿಸಬೇಕಾದರೂ ಕೂಡ ಅನೇಕ ಕರ್ಮಗಳನ್ನು ನಾವು ಅಂಗೀಕರಿಸಬೇಕಾಗುತ್ತದೆ. ಮೊದಲನೆಯದಾಗಿ ತ್ಯಜಿಸಬೇಕಾದ ಕರ್ಮಗಳಿಂದ ಅಂಗೀಕರಿಸಬೇಕಾದ ಕರ್ಮಗಳ ಕಡೆಗೆ ಹೊರಳುವಾ.

ಚೇತನಯುಕ್ತವಾದ ಚಹಾ ಕಾಫಿ, ಕುಡಿಯಬಾರದು. ಚುಟ್ಟಾ ಮತ್ತು ಸಿಗರೇಟುಗಳನ್ನು ಮುಟ್ಟಬಾರದು. ಹುಳಿ, ಕರಿದ, ತಂಗುಳ ಮತ್ತು ಹಳಸಿದ ಅನ್ನವನ್ನು ಸೇವಿಸಬಾರದು. ಕೊಳೆತ ಹಣ್ಣುಗಳನ್ನಂತೂ ಮುಟ್ಟಬಾರದು. ಪೌರಾಣಿಕ ಮತ್ತು ನೈತಿಕ ನಾಟಕ ಸಿನೇಮಾಗಳನ್ನು ಹೊರ್ತುಪಡಿಸಿ ಉಳಿದವುಗಳನ್ನು ನೋಡಬಾರದು. ಕಾದಂಬರಿಗಳನ್ನಂತೂ ಓದಲೇಬಾರದು. ಅಕ್ಕ ತಂಗಿ ಹಾಗೂ ತನ್ನ ಹೆತ್ತ ತಾಯಿಯಿದ್ದರೂ ಕೂಡ ಹೆಚ್ಚು ಮಾತನಾಡುವದು, ನಗುವದು, ಕೂಡ್ರುವದು ಮತ್ತು ಒಂದೇ ಹಾಸಿಗೆಯಲ್ಲಿ ಮಲಗುವದನ್ನು ಸರ್ವಥಾ ಕಟ್ಟಾ ಬ್ರಹ್ಮಚಾರಿಗಳು ಮಾಡಬಾರದೆಂದು ಆಜ್ಞೆ ಇರುತ್ತದೆ. ಅಂಗಾತ ಹಾಗೂ ಬೆನ್ನು ಮೇಲು ಮಾಡಿ ಮಲಗಬಾರದು.

ಬ್ರಹ್ಮಚಾರಿಗಳಾದವರು ಪ್ರತಿ ದಿದಸ ಮುಂಜಾನೆ ತಣ್ಣೀರಿನ ಸ್ನಾನ ಮಾಡಬೇಕು. ಜಗತ್ತಿನ ಎಲ್ಲ ಸದಾ ಸಜ್ಜನರ ಸಹವಾಸದಲ್ಲಿ ಇರಬೇಕು. ಮತ್ತು ಸಾತ್ವಿಕ ಆಹಾರವನ್ನು ಸೇವಿಸಬೇಕು. ಜಗತ್ತಿನಲ್ಲಿ ಎಲ್ಲ ಸ್ತ್ರೀಯರನ್ನು ತನ್ನ ತಾಯಿಯ ಸಮಾನರೆಂದು ತಿಳಿಯಬೇಕು. ಮಲಗುವಾಗ, ಏಳುವಾಗ ಜಗದುತ್ಪತ್ತಿಗೆ ಕಾರಣೀಭೂತನಾದ ಪರಮೇಶ್ವರ ಧ್ಯಾನ ಮಾಡಬೇಕು. ಸರ್ವ ವಸ್ತುಗಳಲ್ಲಿ ಪರಮೇಶ್ವರನನ್ನೇ ಕಾಣಬೇಕು. ತಾನು ಸೇವಿಸುವ ಆಹಾರವು ಪರಮೇಶ್ವರ ಪ್ರಸಾದವೆಂದು ತಿಳಿದು ಸ್ವೀಕರಿಸಬೇಕು. ತನ್ನ ನಿತ್ಯ ಕಾರ್ಯದಲ್ಲಿ ನಿರತನಾಗಿ ಮತ್ತು ಗುರು ತೋರಿಸಿದ ಮಾರ್ಗದಲ್ಲಿ ನಡೆಯಬೇಕು. ಬಲಭಾಗ ಮೇಲೆ ಮಾಡಿ ಮಲಗಬೇಕು. ಪ್ರತಿದಿನ ಶೀರ್ಷಾಸನ ಮತ್ತು ಮಯೂರಾಸನಗಳನ್ನು ತಪ್ಪದೆ ಹಾಕಬೇಕು. (ಮಾಡಬೇಕು.)

ಮೇಲೆ ಹೇಳಿದ ನಿಯಮಗಳನ್ನು ಪಾಲಿಸಲು ಯಾರು ಸಮರ್ಥರೋ ಅವರೇ ಬ್ರಹ್ಮಚಾರಿಗಳು ಈ ನಿಯಮಗಳನ್ನು ನಾಲ್ಕು ಆಶ್ರಮಗಳಲ್ಲಿ ಒಂದಾದ ೨೫ ವರ್ಷದ ಬ್ರಹ್ಮಚರ್ಯದ ವಿಷಯಕ್ಕೆ ಆಯಿತು. ಅಖಂಡ ಬ್ರಹ್ಮಚರ್ಯದ ಬಗ್ಗೆಯೂ ವಿಚಾರಿಸುವಾ. ೨೫ ವರ್ಷಗಳವರೆಗೆ ವೀರ್ಯವನ್ನು ಕಾಪಾಡಿ ಕೊಳ್ಳುವ ಸಾಮರ್ಥ್ಯ ಬರುವದರಿಂದ ಮನುಷ್ಯನ ಶರೀರವು ಪುಷ್ಟವೂ ತೇಜ ಪುಂಜವೂ ರೋಗ ರುಜಿನಗಳನ್ನು ಪ್ರತಿಭಟಿಸುವಂಥದೂ ಮತ್ತು ಮನಸ್ಸನ್ನು ಆಧೀನದಲ್ಲಿ ಇಟ್ಟುಕೊಳ್ಳುವಂಥದೂ ಆಗುವದು. ಸ್ಮರಣಶಕ್ತಿಯು ವರ್ಧಿಸುವದು. ಇಂಥ ಬ್ರಹ್ಮಚರ್ಯವನ್ನು ಪುರುಷರು ೨೫ ವರ್ಷಗಳ ವರೆಗೆ ಸ್ತ್ರೀಯರು ೧೬ ವರ್ಷಗಳ ವರೆಗೆ ನಿಯಮಬದ್ಧವಾಗಿ ಪಾಲಿಸಬೇಕೆಂದು ಮನು ಹೇಳಿರುತ್ತಾನೆ. ಮುಂದಿನ ಜೀವನವನ್ನು ಲೋಕಕಲ್ಯಾಣಕ್ಕಾಗಿ ಮತ್ತು ತನ್ನ ಅನುಭವವನ್ನು ಲೋಕದ ಜನರಿಗೆ ಉಣಬಡಿಸಲು ಇಚ್ಛೆ ಇದ್ದರೆ ಪ್ರತಿಯೊಬ್ಬ ಸ್ತ್ರೀ ಪುರುಷರು ತಮ್ಮ ಇಡೀ ಆಯುಷ್ಯವನ್ನು ಅಖಂಡ ಬ್ರಹ್ಮಚಾರಿಗಳಾಗಿ ಕಳೆಯಬೇಕು.

ಅಖಂಡ ಬ್ರಹ್ಮಚಾರಿಗಳಾದವರು ತಾವು ಇರುವ ಸ್ಥಾನದಲ್ಲಿ ಯೋಗಿಗಳ ಮತ್ತು ಮಹಾತ್ಮರು ಹನುಮ ಮೊದಲಾದ ಬ್ರಹ್ಮಚಾರಿಗಳ ಫೋಟೋಗಳನ್ನು ಹಚ್ಚಬೇಕು. ಇದಲ್ಲದೆ ಅವರು ಹೇಳಿದ ಉಪದೇಶದ ಮಾತುಗಳನ್ನು ಗೋಡೆಯ ಮೇಲೆ ಬರೆಯಬೇಕು. ಅಂಥವರ ಗ್ರಂಥಗಳ ಸಂಗ್ರಹ ಮಾಡಿ ಯಾವಾಗಲೂ ಗ್ರಂಥಗಳ ಪಠಣ ಮಾಡುತ್ತಿರಬೇಕು. ಜಗತ್ತಿನ ಜನರ ಸಲುವಾಗಿ ಬ್ರಹ್ಮಚಾರಿಗಳು ಇಲ್ಲದ ನಟನೆ ಮಾಡಬಾರದು. ಬ್ರಹ್ಮಚರ್ಯಪಾಲಸುವದೆಂದರೆ ಬರೇ ಲಂಗೋಟ ಹಾಕಿ ಕಾವಿ ಅರಿವೆ ತೊಟ್ಟು ಉಪದೇಶ ಮಾಡುವದು ಎಂಬರ್ಥವಲ್ಲ. ಕಣ್ಣಿಗೆ ಬ್ರಹ್ಮಚಾರಿಗಳಂತೆ ಕಂಡರೂ ಕೂಡ ಅವರು ನಿಜವಾಗಿ ವಂಚಕರೇ ಸರಿ. ಉಪದೇಶ ಮಾಡುವವರೆಲ್ಲರೂ ಮಹಾತ್ಮರಲ್ಲಿ. ಆದ್ದರಿಂದ ಅಖಂಡ ಬ್ರಹ್ಮಚಾರಿಗಳಾದವರು ಇದನ್ನು ಸ್ಮರಿಸಿ ಹೆಜ್ಜೆಗಳನ್ನು ಹಾಕಬೇಕು. ಇಂಥ ಬ್ರಹ್ಮಚಾರಿಗಳು ಯೋಗವನ್ನಾದರೂ ಹಾಗೂ ಪಾರಮಾರ್ಥಿಕ ಕರ್ಮಗಳನ್ನಾದರೂ ಮಾಡುತ್ತಿರಬಹುದು. ಪ್ರಾಪಂಚಿಕ ಜನರಿಂದ ಅಮೋಘಕಾರ್ಯಗಳು ಆಗಲಾರವು. ಯಾಕಂದರೆ ಅವರ ಹಿಂದೆ ವ್ಯಷ್ಟಿ ಪ್ರಪಂಚವಿರುವದರಿಂದ ಮತ್ತು ಅದರ ಅಭಿಮಾನವುಳ್ಳವರಿರುವರು. ಆದರೆ ಬ್ರಹ್ಮಚಾರಿಗಳ ಹಿಂದೆ ಸಮಷ್ಟಿ ಪ್ರಪಂಚವಿದ್ದರೂ ಲಿಂಗ ಮಧ್ಯ ಜಗತ್ ಸರ್ವಂ ಎಂಬುದರ ಅರ್ಥ ಮಾಡಿಕೊಂಡಿರುವದರಿಂದ ಅದರ

ಅಭಿಮಾನ ಯಶ ಅಪಯಶ, ಕೀರ್ತಿ, ಅಪಕೀರ್ತಿಗಳನ್ನು ಹೆಚ್ಚಿಕೊಳ್ಳಲಾರ ದವರಾಗಿರುವದರಿಂದ ಅಂಥವರಿಂದ ಅಮೋಘ ಕಾರ್ಯಗಳು ಜರಗುವವು. ನಿಜವಾಗಿ ನೋಡಿದರೆ ಮಠಕ್ಕೆ ಬಿಡುವ ಮರಿಗಳು ಅಖಂಡ ಬ್ರಹ್ಮಚಾರಿ ಗಳು ಆದದ್ದು ಬಹಳ ಕಡಿಮೆ ಯಾಕಂದರೆ ಅಂಥವರು ತಮ್ಮ ಆತ್ಮ ಸ್ಫೂರ್ತಿಯಿಂದ ಸನ್ಯಾಸಿ ಆಗಿರುವದಿಲ್ಲ ಆದರೆ ಸಮಾಜದ ಮನೆಯವರ ಇಲ್ಲವೆ ಕಾಂಚನ ಆಶೆಗಾಗಿ ಅಪ್ಪರ ಸಲುವಾಗಿಯೇ ತಮ್ಮ ಇಂದ್ರಿಯಗಳನ್ನು ಬಿಗಿಹಿಡಿಯುವರು. ಆದರೆ ಹಿಂದಿನಿಂದ ಅವರ ಮನಸ್ಸು ಮತ್ತೆ ಪ್ರಪಂಚದ ಕಡೆಗೆ ಹರಿದೇ ಹರಿಯುವದು. ನಾಯಿಯ ಬಾಲವನ್ನು ಕೊಳವೆಯ ಒಳಗೆ ಹಾಕಿ ನೆಟ್ಟಗೆ ಮಾಡಿದರೂ ಕೂಡ ಕೊಳವೆ ತೆಗೆದ ಮೇಲೆ ತಿರುಗಿ ಅದು ತನ್ನ ಸ್ವಭಾವವನ್ನು ಬಿಟ್ಟಿತೇ? ಅವರು ಕೇವಲ ನಾಟಕದಲ್ಲಿ ಆ ನಾಟ್ಯದ ಸಲುವಾಗಿಯೇ ಪಾರ್ಟ ಹೇಗೆ ಮಾಡುವರೋ ಅದೇ ಪ್ರಕಾರ ತಮ್ಮ ಇಂದ್ರಿ ಯಗಳನ್ನು ಹರಿಬಿಟ್ಟು ಪ್ರಪಂಚದಲ್ಲಿಯೇ ಹೊರಳಾಡುವರು. ಇಂಥವರು ನಿಜವಾದ ಬ್ರಹ್ಮಚಾರಿಗಳಲ್ಲ. ಒಂದು ವೇಳೆ ಬ್ರಹ್ಮಚಾರಿಗಳು ಎಂದು, ಅವರು ಹೇಳಿದರೆ ಅದು ಅವರ ಭ್ರಮೆ ಎಂದು ಹೇಳಬೇಕು. ಇದರ ಸತ್ಯತೆಯನ್ನು ಈಗಿನ ವಿರಕ್ತಮಠಾಧೀಶರ ಚರಿತ್ರೆಯಿಂದ ಕಂಡು ಹಿಡಿಯಬಹುದು. ಇಂಥ ಬ್ರಹ್ಮಚಾರಿಗಳು ಎಂದು, ಹೇಳಿಸಿ ಅನ್ನಿಸಿಕೊಳ್ಳುವ ವಿರಕ್ತಸ್ವಾಮಿಗಳಿಗಿಂತ ಸ್ವಯಂ ಸ್ಫೂರ್ತಿಯಿಂದ ಆದ ಬ್ರಹ್ಮಚಾರಿಯೇ ನಿಜವಾದ ಸ್ವಾಮಿ. ಗುರು, ವಿರಕ್ತ, ಬ್ರಹ್ಮಚಾರಿ ಮತ್ತು ಸನ್ಯಾಸಿ ಎಂದು ಹೇಳಬೇಕು, ಅವರು ಒಂದು ಗುಡಿಸಲಿನಲ್ಲಿಯೇ ಇರಲಿ, ಅರಣ್ಯದಲ್ಲಿಯೇ ಇರಲಿ ಅಥವಾ ಬೈಲು ಪ್ರದೇ ಶದಲ್ಲಿಯೇ ಇರಲಿ ಅದು ಒಂದು ಮಹಾಮಠವೆಂದು ಹೇಳಬೇಕು ಅದುವೇ ನಿಜವಾದ ವಿರಕ್ತಮಠ ಆಶ್ರಮವು ಸ್ವಯಂ ಸ್ಫೂರ್ತಿಯಿಂದ ಇದ್ದ ಬ್ರಹ್ಮ ಚಾರಿಗಳಿಗೆ ಶಾಂತಿ, ಸುಖ ಸಮಾಧಾನ ಲಭಿಸುವವೇ ಹೊರತು ಇನ್ನಿತರ ರಿಗೆ ಗಗನಕುಸುಮವು ಶಶಿವಿಧಾನ ಬಂಜೆಯಮಗ ಮತ್ತು ಬಿಸಿಲ್ಗುದುರೆ ಯಂತೆ ಭಾಸವಾಗುವವು. ಆದರೂ ಅದಕ್ಕಾಗಿ ಧೈರ್ಯಗುಂದದೆ ಸತತ ಪ್ರಯತ್ನ ಮೂಲಕವಾಗಿ ಸಾಧ್ಯವಾಗುವ ಆ ಬ್ರಹ್ಮಚರ್ಯವನ್ನು ಕಾಪಾಡಿ ಕೊಳ್ಳುವದು ಪ್ರತಿಯೋರ್ವನ ಕರ್ತವ್ಯ. ಏಕೆಂದರೆ ಅದುವೇ ನಮ್ಮ ಗುರಿ. ಅದುವೇ ಮೋಕ್ಷಮಾರ್ಗದ ದಾರಿ ದೀಪ. ಅದುವೇ ಸಾರ್ಥಕ ಸಾಧನ. ಅದುವೇ ಸಾರ್ವಜನಿಕರ ಏಳ್ಗೆಗೆ ಕಾರಣ. ಅದುವೇ ಪರಮ ಸಾಧನ. ಅದರಿಂದ ಇನ್ನಿತರ ಶ್ರೇಷ್ಠ ಸಾಧನೆಗಳಿಲ್ಲ. ಹೆಚ್ಚೇನು ಹೇಳುವದು, ಅದು ಆಧಾರ

ಸ್ಥಂಭವಾಗಿದೆ. ಬಾಹ್ಯದಲ್ಲಿ ಅಂತರದ್ದು ಜೀವನದ್ದು ರಾಷ್ಟ್ರಕ್ಕೆ ಸಾರ್ವಭೌಮತ್ವ ಅಥವಾ ಸಂಪೂರ್ಣ ಸ್ವಾತಂತ್ರ್ಯ ಎಷ್ಟು ಮಹತ್ವವೋ ಅದಕ್ಕಿಂತಲೂ ಹೆಚ್ಚಿನ ಮಹತ್ವವು ಮರ್ಯಾದೆಯು ಇದಕ್ಕೆ ಸಿಕ್ಕುವದೆಂಬದರಲ್ಲಿ ಇನ್ನಾವ ಸಂಶಯ?

## ೨. ಗೃಹಸ್ಥ

ಗೃಹಸ್ಥನೆಂದರೆ ಓರ್ವ ಸತಿಯನ್ನು ಕೈಹಿಡಿದು ಅವಳ ಕೂಡ ಬಾಳ್ವೆ ಸಾಗಿಸುವದು, ಪರಸ್ತ್ರೀಯರನ್ನು ಹೊರಳಿ ನೋಡದೆ ಉಳಿದವರು ತನ್ನ ತಾಯಂದಿರೆಂದು ತಿಳಿಯುವದು, ಧರ್ಮದಿಂದ ಹಣವನ್ನು ಗಳಿಸಿ, ತನ್ನ ಸಂಪಾದನೆಯನ್ನು ನಡಿಸುತ್ತ ಮಿತವ್ಯಯದಿಂದ ಜೀವನ ಸಾಗಿಸುವದು, ಮಿತಸಂತಾನ ಪ್ರಾಪ್ತಮಾಡಿಕೊಳ್ಳುವದು ಮತ್ತು ಇವೆಲ್ಲವುಗಳ ಸಂಗಡ ಪರಮಾರ್ಥವನ್ನು ಸಾಧಿಸುವದು ಎಂದು ಅರ್ಥವಾಗುತ್ತದೆ. ಆದ್ದರಿಂದಲೇ ನಾವು ಶರಣರಿಗೆ ನಿಜವಾದ ಗೃಹಸ್ಥರೆನ್ನುತ್ತೇವೆ. ಕಾರಣ ಅವರು ಪ್ರಪಂಚದಲ್ಲಿದ್ದರೂ ಕೂಡ ಇದರ ಸಂಬಂಧವನ್ನು ಹಚ್ಚಿಕೊಳ್ಳದೆ, ಕೆಸರಿನೊಳಗಿದ್ದ ಕಮಲದಂತೆ ನಿರ್ಲಿಪ್ತರಾಗಿ ಪರಮಾರ್ಥವನ್ನು ಸಾಧಿಸುತ್ತಾರೆ.

ಗೃಹಸ್ಥ ಆಶ್ರಮದಲ್ಲಿದ್ದುಕೊಂಡು ಪರಮಾರ್ಥವನ್ನು ಗೆದೆಯುವವರು ಬಹಳ ಕಡಿಮೆ. ಗೃಹಸ್ಥರು ಕೇವಲ ಸತಿಸುತರನ್ನು ಸಂರಕ್ಷಿಸುವದರಲ್ಲಿಯೂ ಹಾಗೂ ಕಾಂಚನ ಪ್ರಾಪ್ತಮಾಡಿಕೊಳ್ಳುವದರಲ್ಲಿಯೂ ತಮ್ಮ ವೇಳೆಯನ್ನು ಕಳೆಯುವರು. ಇಂಥದರಲ್ಲಿ ಅರಿಷಡ್ವರ್ಗಗಳಿಂದಲೂ ಅವರನ್ನು ಕಚ್ಚಿ ಮುಸುಕಲು ಕೂಡ ಬಿಡುವದಿಲ್ಲ. ಅದರಲ್ಲಿ ಅಧಿಕಾರಿಗಳು ಇದ್ದರೆ ಕೇಳುವದೇ ಬೇಡ. ಅದರ ಸಲುವಾಗಿಯೇ ಸರ್ವಜ್ಞನು ಹೇಳುತ್ತಾನೆ.

ಬೆಚ್ಚನಾ ಮನೆಯಾಗಿ ।
ವೆಚ್ಚಕ್ಕೆ ಹಣವಾಗಿ ।
ಇಚ್ಛೆಗೆ ಬರುವ ಸತಿಯಾದರೆ ।
ಕೈಲಾಸಕ್ಕೆ ಕಿಚ್ಚುಹಾಕೆಂದ ಸರ್ವಜ್ಞ ॥೧॥

ಇಂಥವರು ಕೈಲಾಸಕ್ಕೆ ಬೆಂಕಿಹಚ್ಚಲು ಹೋಗುತ್ತಾರೆ ಆದರೆ ಇದು ಮಾನವನ ಧರ್ಮವಲ್ಲ. ಶ್ವಾನಶೂಕರಗಳಂತೆ ಹೊಟ್ಟೆಹೊರೆದುಕೊಳ್ಳುವಂತೆ ಆಗುವದು. ಇವರು ತಮ್ಮ ಜೀವನವನ್ನು ವಿಲಾಸದಲ್ಲಿ ಕಳೆದು ಇಹಲೋಕದ ವಸ್ತುಗಳೆಲ್ಲ ತಮ್ಮ ಭೋಗಕ್ಕಿವೆ ಎಂದು ಭಾವಿಸಿ, ಅನ್ಯಾಯದಿಂದ

ಹಣ ಪ್ರಾಪ್ತಮಾಡಿ ದುಷ್ಟ ಕಾರ್ಯಗಳಲ್ಲಿ ಹಣ ವ್ಯಯ ಮಾಡುವರು. ದೀನ ದಲಿತರಿಗೆ ಸಹಾಯ ಮಾಡಬೇಕು ಎಂಬುದು ಇವರ ಕನಸು ಮನಸುಗಳಲ್ಲಿ ಕೂಡ ಬರುವದಿಲ್ಲ. ಪರಮಾತ್ಮನ ನಾಮಸ್ಮರಣೆ, ಶಾಸ್ತ್ರ, ಪುರಾಣ, ಶ್ರವಣ ಗಳಿಂದಂತೂ ಇವರು ಹತ್ತು ಹರದಾರಿ ದೂರ ಸರಿಯುತ್ತಾರೆ. ತನ್ನ ಸತಿ ಸುತರೆ ಇಷ್ಟ ದೈವವೆಂದು ಕಾಲಹರಣ ಮಾಡುವರು. ಅದರಂತೆ ಅನ್ಯಾಯ ದಿಂದ ಹಣಗಳಿಸಿ, ಕೂಡಹಾಕುವದೇ ಅವರು ತಿಳಿದುಕೊಂಡ ಗೃಹಸ್ಥ ಆಶ್ರಮದ ಅರ್ಥವಾಗಿರುವದು. ಅನ್ಯಾಯದಿಂದ ಹಣಗಳಿಸಿ ಸ್ವಾರ್ಥಸಾಧಕ ರಾಗಿರುವದು ಗೃಹಸ್ಥನ ಧರ್ಮವಲ್ಲ. ಲೋಕದಲಿ ಬಂದ ಬಳಿಕ ಹಿಂದೆ ತಮ್ಮ ಹೆಸರನ್ನು, ಕೀರ್ತಿಯನ್ನು ಬಿಟ್ಟುಹೋಗಬೇಕೆಂದು ವಿವೇಕಾನಂದರು ಹೇಳಿದ್ದಾರೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಮಾನವನು ಪಡೆಯಬೇಕು. ಇದೇ ಮಾನವನ ಅಂತಿಮ ಧ್ಯೇಯವಾಗಬೇಕು. ಆದರೆ ಇಂಥ ಕಾರ್ಯಕ್ಕಾಗಿ ಗೃಹಸ್ಥರು ತ್ಯಾಗಿಗಳಾ ಗಬೇಕು. ತ್ಯಾಗವಿಲ್ಲದೆ ಸಿದ್ಧಿಯಿಲ್ಲ. ತನ್ನಲ್ಲಿ ತುಂಬಿರುವ ಅನೇಕ ಅಪ ಯೋಜಕ ಪದಾರ್ಥಗಳನ್ನು ಮನುಷ್ಯ ಹೊರಗೆ ಎಸೆಯದ ಹೊರತು ಉತ್ತಮ ರತ್ನ ಕನಕಾದಿಗಳು ಅಲ್ಲಿ ಬಂದು ಸೇರಲು ಎಡೆಯಾಗುವದಿಲ್ಲ." ಅ.ನ.ಕೃ. ಹೇಳುತ್ತಾರೆ. ಆದ್ದರಿಂದ ಗೃಹಸ್ಥರು ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರವೆಂಬ ಆರು ವೈರಿಗಳನ್ನು ತಮ್ಮ ಶರೀರದಿಂದ ಹೊರಗೆ ಅಟ್ಟಿದ ಹೊರತು ಪಾರಮಾರ್ಥವೆಂಬ ರತ್ನಗಳು ಅಲ್ಲಿ ಬಂದು ಸೇರಲಾರವು. ಆದ್ದರಿಂದ ಇಂಥ ಪಾರಮಾರ್ಥವನ್ನು ಗೆದ್ದರೇನೆ ಮಾನವ ಜನ್ಮಕ್ಕೆ ಬಂದುದು ಸಾರ್ಥಕ. ಪರಮಾರ್ಥವನ್ನು ಗೆದೆಯುವದು ನಮ್ಮಿಂದ ಆಗುವದಿಲ್ಲ ಎಂದು ಗೃಹಸ್ಥರಾದವರು ಭಾವಿಸಬಾರದು. ಬಸವಣ್ಣ, ಜನಕಮಹಾರಾಜ ಇವರೆಲ್ಲರು ಪ್ರಪಂಚದಲ್ಲಿದ್ದು ಪಾರಮಾರ್ಥ ಗೆದೆಯಲಿಲ್ಲವೇ? ಆದ್ದರಿಂದ Man Can do what man has done (ಮನುಷ್ಯ ಮಾಡಿದ್ದನ್ನು ಮನುಷ್ಯ ಮಾಡಬಲ್ಲ") "ಎದ್ದೇಳು ಮಾನವಾ ನೀನು ದುರ್ಬಲನಲ್ಲ, ಅಜೇಯ. ನಿನ್ನ ದೇಹ ಜಗನ್ಮಾತೆಯ ದೇಗುಲ. ಅವಳ ಪುಣ್ಯಪುತ್ರ. ನೀನು ದುರ್ಬಲ ನೆಂದು ಎಂದೆಂದೂ ಭಾವಿಸಬೇಡ. ನಿನ್ನ ಮಹಾಶಕ್ತಿಯ ಮುಂದೆ ಪ್ರಕೃತಿ ಒಂದು ಶಿಶು. ಏಳು! ಜಾಗ್ರತನಾಗು! ಆತ್ಮಸಾಕ್ಷಾತ್ಕಾರವನ್ನು ಪಡೆ" ಎಂದು ವಿವೇಕಾನಂದರು ಧೈರ್ಯವನ್ನು ಕೊಟ್ಟು ಹೋಗಿದ್ದಾರೆ. ಬೇಕಾ ದಂಥ ಕಷ್ಟಬಂದರೂ ತಮ್ಮ ಈ ಗುರಿಯನ್ನು ನೋವಿನೊರೆಗಲ್ಲಲ್ಲಿ ಇರುವಿನ

ಅರಿವು ತಿಕ್ಕಲು ಹೋಳಿಯುವದು" ಎಂದು ಬೇಂದ್ರೆಯವರು ಹೇಳುತ್ತಾರೆ. ಆದ್ದರಿಂದ ಪರಮಾರ್ಥ ಸಾಧನವೇ ಗೃಹಸ್ಥನ ಅಂತಿಮ ಗುರಿಯಾಗಬೇಕು.

ಪರಮಾರ್ಥ ಸಂಗಡ ಗೃಹಸ್ಥನು ಮುಂದಿನ ಪೀಳಗೆಯನ್ನು ಕೂಡ ಈಪ್ರಕಾರ ಮಾಡುವದು ಅವನ ಧರ್ಮ. ಇಂದಿನ ಬಾಲಕರೇ ನಾಳಿನ ನಾಗರಿಕರು. ರಾಷ್ಟ್ರದ ಹೊರೆಯು ಗೃಹಸ್ಥನ ಮೇಲೆ ಇರುವದು. ಯಥಾ ಪಿಂಡಾಂಡ ತಥಾಬ್ರಹ್ಮಾಂಡವೆನ್ನುವಂತೆ ತಮ್ಮಂತೆಯೇ ತಮ್ಮ ಮಕ್ಕಳು ಇರುವರು. ಆದುದರಿಂದ ಗೃಹಸ್ಥರು ಸದ್ವರ್ತನದಿಂದ ವಿನಯದಿಂದ ಹಾಗು ರಾಷ್ಟ್ರಾಭಿಮಾನಿಗಳಾಗಬೇಕು: ಶಾಸ್ತ್ರ ಪುರಾಣ ಕೇಳಬೇಕು. ಮಹಾತ್ಮರ ದರ್ಶನ ಅಂಥವರ ಗ್ರಂಥಗಳನ್ನು ಪಠಿಸಬೇಕು. ಇವೆಲ್ಲ ಪರಿಣಾಮಗಳು ಮುಂದಿನ ಪೀಳಿಗೆಯ ಮೇಲೆ ಆಗಿ ಅವರ ಸಂತತಿಯೇ ರಾಷ್ಟ್ರದ ಹೊಣೆ ಹೊರಲು ಸಿದ್ಧವಾಗುವರು. ಕೇವಲ ಗೃಹಸ್ಥರು ಮಕ್ಕಳನ್ನು ಹೆರುವ ಯಂತ್ರ ವಾಗಬಾರದು. ಮನು ಹೇಳಿದಂತೆ ಗಂಡಸು ೨೫ನೇ ವಯಸ್ಸಿನಲ್ಲಿಯೂ ಹಾಗೂ ಹೆಂಗಸು ೧೮ನೇ ವಯಸ್ಸಿನಲ್ಲಿಯೂ ಮದುವೆಯಾಗಬೇಕು. ಆದರೆ ಎಷ್ಟೋ ಜನರು ೨೫ ರ ಪೂರ್ವದಲ್ಲಿಯೇ ४-५ ಮಕ್ಕಳ ತಂದೆಯಾಗುವರು. ಇದು ಅವರ ತಂದೆತಾಯಿಗಳ ತಪ್ಪೆಂದೇ ಭಾವಿಸಬೇಕು. ಹೀಗೆ ಮಾಡು ವದು ಸೃಷ್ಟಿಯ ನಿಯಮ ಮುರಿದಂತೆ ಆಗುತ್ತದೆ. ಸೃಷ್ಟಿಯ ನಿಯಮ ಪ್ರಕಾರ ಋತುಮತಿಯಾದ ಕಾಲದಲ್ಲಿಯೇ ಸತಿಪತಿಯರು ಕೂಡಬೇಕು. ಗೃಹಸ್ಥರು ತಮ್ಮ ಸತಿಯರನ್ನು ಊಟದ ವೇಳೆಯಲ್ಲಿ ತಮ್ಮ ತಾಯಿಯಂದಿ ರೆಂದು ಉಳಿದ ವೇಳೆಯಲ್ಲಿ ತಮ್ಮ ಅಕ್ಕತಂಗಿಯರೆಂದು ಗಣಿದರೆ ಶಯನ ಗೃಹದಲ್ಲಿ ಮಾತ್ರ ತಮ್ಮ ಸತಿಯರೆಂಬ ಭಾವ ಉರ್ವರಲ್ಲಿಯೂ ಇರಬೇಕು. "Time is money" ವೇಳೆಯೇ ಹಣವೆಂಬ ಮಂತ್ರವನ್ನು ಅವರು ಅರಿತಿರಬೇಕು. ಮನೆಯಲ್ಲಿ ಮಹಾತ್ಮರ ಫೋಟೋಗಳನ್ನು ಹಚ್ಚಬೇಕು. ನಿತ್ಯ ಸಾತ್ವಿಕ ಆಹಾರ ಸೇವನೆಮಾಡಿ ತಮ್ಮ ಕಾರ್ಯಗಳಲ್ಲಿ ನಿರತರಾಗಿರ ಬೇಕು, ಸಜ್ಜನರ ಸಂಗದಲ್ಲಿ ಇರಬೇಕು, ದಾನಧರ್ಮಗಳಲ್ಲಿ ಮನಸ್ಸುಹಾಕ ಬೇಕು. ಈಪ್ರಕಾರ ನಡೆದರೆ ಉತ್ತಮ ಸಂತತಿ ಉತ್ಪತ್ತಿಯಾಗುವದು. ಇದೊಂದು ರಾಷ್ಟ್ರ ಮಹತ್ಕಾರ್ಯ ಮಾಡಿದಂತಾಗುವದು. ಮತ್ತು ಪ್ರತಿ ಯೊಬ್ಬರು ಈ ನೇಮ ಪಾಲಿಸಬೇಕು. ತಮ್ಮ ಮಕ್ಕಳು ದೊಡ್ಡವರಾದ ಮೇಲೆ

ಅವರ ಮೇಲೆ ಸಂಸಾರದ ಹೊರೆಹಾಕಿ ತಾವು ಸದ್ವರ್ತನದ ಬಗ್ಗೆ ಮಾರ್ಗ ದರ್ಶನ ಮಾಡುತ್ತ ಸದಾ ಪರಮಾತ್ಮನ ಧ್ಯಾನದಲ್ಲಿ ನಿರತರಾಗಬೇಕು. ಇದುವೇ ಗೃಹಸ್ಥದ ನಿಜವಾದ ಅರ್ಥ,

ನಿತ್ಯ ಸಾತ್ವಿಕ ಆಹಾರ ಸೇವನೆ ಮಾಡಿ ತಮ್ಮ ಕಾರ್ಯಗಳಲ್ಲಿ ನಿರ ತರಾಗಿರಬೇಕು, ಸಜ್ಜನರ ಸಂಗದಲ್ಲಿ ಇರಬೇಕು. ದಾನ ಧರ್ಮಗಳಲ್ಲಿ ಮನಸ್ಸು ಹಾಕಬೇಕು. ಈ ಪ್ರಕಾರ ನಡೆದರೆ ಉತ್ತಮ ಸಂತತಿ ಉತ್ಪತ್ತಿಯಾಗುವದು. ಇದೊಂದು ರಾಷ್ಟ್ರ ಮಹತ್ ಕಾರ್ಯಮಾಡಿದಂತಾಗುವದು. ಮತ್ತು ಪ್ರತಿ ಯೊಬ್ಬರು ಈ ನಿಯಮಪಾಲಿಸಬೇಕು. ತಮ್ಮ ಮಕ್ಕಳು ದೊಡ್ಡವರಾದ ಮೇಲೆ ಸಂಸಾರದ ಹೊರೆ ಹಾಕಿ, ತಾವು ಸದ್‌ವರ್ತನದ ಬಗ್ಗೆ ಮಾರ್ಗ ದರ್ಶನ ಮಾಡುತ್ತ ಸದಾ ಪರಮಾತ್ಮನ ಧ್ಯಾನಲ್ಲಿ ನಿರತರಾಗಬೇಕು. ಇದುವೇ ನಿಜವಾದ ಗೃಹಸ್ಥದ ನಿಜವಾದ ಅರ್ಥ.

ಗೃಹಸ್ಥ ಆಶ್ರಮವೂ ಕೂಡಾ ಬ್ರಹ್ಮಚಾರಿ ಆಶ್ರಮದಂತೆ ಮಹತ್ವವಾ ಗಿರುವದು. ಯಾರೂ ಎರಡರಲ್ಲಿ ಹೆಚ್ಚು ಕಡಿಮೆ ಎಣಸಬಾರದು. ಬ್ರಹ್ಮಚಾ ರಿಗಳು ಭಾವಿಸದೆ ಇರಬೇಕು. ನಿಜವಾದ ದೃಷ್ಟಿಯಲ್ಲಿ ಯಾವದೂ ಹೀನ ವಲ್ಲ. ಮೇಲೂ ಅಲ್ಲ. ಎರಡೂ ಆಶ್ರಮಗಳು ತಮ್ಮಷ್ಟಕ್ಕೇ ತಾವು ಶ್ರೇಷ್ಠ ವಾದವುಗಳೇ ಅವೆರಡು ಒಂದೇ ನಾಣ್ಯದ ಎರಡು ಮೈಗಳು. ಇವೆರಡೂ ಒಂದಕ್ಕೊಂದು ಪೂರಕಗಳಾಗಿರುತ್ತವೆ. ಈ ಮಾತನ್ನು ನಮ್ಮ ಬಾಂಧವರು ಅರಿತು ಪ್ರತಿಯೊಬ್ಬರನ್ನೊಬ್ಬರು ತೆಗಳದೆ ಬಾಂಧವ್ಯದಿಂದ ರಾಷ್ಟ್ರಕಾರ್ಯಕ್ಕೆ ಹೆಗಲು ಹಚ್ಚಿ ಕಾರ್ಯಮಾಡಲೆಂದು ನನ್ನ ಆಶೆ.

## ವಾನಪ್ರಸ್ಥ

ಗೃಹಸ್ಥ ಆಶ್ರಮದಲ್ಲಿ ತಾನು ಮಾಡತಕ್ಕ ಎಲ್ಲ ಪ್ರಪಂಚದ ಕರ್ಮಗಳನ್ನು ಮುಗಿಸಿ ತನ್ನ ಸಂಸಾರದ ಎಲ್ಲ ಹೊಣೆಯನ್ನು ತನ್ನ ಮಕ್ಕಳಿಗೆ ಒಪ್ಪಿಸಿ ತಾನು ಸದಾ ಪರಮಾತ್ಮನ ನಾಮಸ್ಮರಣೆಯಲ್ಲಿ ಹಾಗೂ ಸಮಾಜ ಕಲ್ಯಾಣದ ಚಿಂತೆಯಲ್ಲಿ ವೇಳೆಗಳೆಯುವದೇ ವಾನಪ್ರಸ್ಥವು. ಇಂಥ ಆಶ್ರಮದಲ್ಲಿ ತನ್ನ ಉದ್ಧಾರದ ಕಡೆಗೂ ಲಕ್ಷವಿಡಬೇಕು.

ಮನುಷ್ಯನು ತನ್ನ ದೃಷ್ಟಿಯನ್ನು ವಿಶಾಲಮಾಡಬೇಕು. ತನ್ನದೇ ಒಂದು ಕುಟುಂಬವೆಂದು ತಿಳಿದು ಆಚರಿಸಬೇಕು. ತನ್ನ ಪತಿಸುತರ ಚಿಂತನೆಬಿಟ್ಟು ಅಂದರೆ ದೃಷ್ಟಿ ಸಂಸಾರ ದೊರೆದು ಸಮುಷ್ಟಿಪ್ರಪಂಚವಾದ ಒಂದು ಗ್ರಾಮದ

ಸಲುವಾಗಿ ಒಂದು ನಾಡಿನ ಏಳಿಗೆಗಾಗಿ ಪ್ರಾಮಾಣಿಕನಾಗಿ ದುಡಿಯಬೇಕು. ಮಾನವರೆಲ್ಲರೂ ಒಂದೇ ಎಂದು ತಿಳಿಯುವ ಈ ಆಶ್ರಮಕ್ಕೆ ಜಾತಿ ಮತ ಗಳ ದಂದುಗವಿಲ್ಲ. ಜೈ ಜಗತ್ ಎಂಬ ವಿನೋಭಾರವರ ಮಂತ್ರದಂತೆ ಇಡೀ ಜಗತ್ತಿನ ಮಾನವ ಕುಲಕ್ಕೆಯೇ ಅಭ್ಯುದಯವನ್ನು ಬಯಸಬೇಕು ನಾವೆಲ್ಲರೂ ಆ ಪರಮೇಶ್ವರನ ಸೂತ್ರದ ಮಣಿಗಳೆಂಬ ಭಾವವು ಅಳವಡಬೇಕು.

ಕೆಲವರು ಈ ಆಶ್ರಮದ ತತ್ವಗಳನ್ನೇ ಮರೆತು ಹೊರಡುವರು ಇಂಥ ವರು ತಮ್ಮ ಸಂಸಾರದ ಹೊಣೆಯನ್ನು ಮಕ್ಕಳ ಮೇಲೆ ಹೊರಿಸಿ ಸಮಾಜ ಕಾರ್ಯಗಳಲ್ಲಿ ಅಗ್ರಪಾತ್ರ ವಹಿಸಿ ಜನರಿಗೆ ಸವಿಮಾತಿನಿಂದ ಆನಂದ ಪಡಿಸಿ ಸಮಾಜದ ಹಣವನ್ನು ಎತ್ತಿಹಾಕುವರು. ಅಂಥ ಹಣವನ್ನು ತಮ್ಮ ಸತಿಸುತರ ಕೈಯಲ್ಲಿ ತಂದೊಪ್ಪಿಸುವರು. ಹೀಗೆ ಪ್ರಪಂಚದ ಸಂಪತ್ತನ್ನು ಎತ್ತಿಹಾಕಿ ತನ್ನ ಸತಿಸುತರಿಗೆ ಒದಗಿಸುವದೇ ನಿಜವಾದ ವಾನಪ್ರಸ್ಥಾಶ್ರಮದ ಧರ್ಮವೆಂದು ಆಶ್ರಮದ ನಿಜಾರ್ಥವನ್ನು ತಿಳಿಯುವದವಶ್ಯ ಅಂಥ ನಡೆನುಡಿಗಳಿರುವವರನ್ನೇ ವಾನಪ್ರಸ್ಥರೆಂದು ತಿಳಿದು. ಅವರನ್ನೇ ಮುಖಂಡರನ್ನಾಗಿ ಮಾಡುವ ಭಾವವು ದೇಶದ ಜನರ ಮನದಲ್ಲಿ ಉದಿಸಬೇಕು. ಅಂಥ ಸದಾಚಾರಿಗಳ ಮುಖಂಡ ತ್ವವು ನಾಡಿನ ಕಲ್ಯಾಣಕ್ಕಾಗಿಯೇ ಮೀಸಲಾಗಿರುತ್ತದೆ. ಇಂಥವರಿಂದಲೇ ನಾಡಿಗೆ ಕಲ್ಯಾಣ.

## ಸನ್ಯಾಸ.

ವಾನಪ್ರಸ್ಥಾಶ್ರಮದ ನಂತರದ ಆಶ್ರಮವಿದು. ಇದುವೇ ಕಡೆಯ ಆಶ್ರಮ. ಇದು ಮಾನವನು ತನ್ನನ್ನು ಉದ್ಧರಿಸಿಕೊಳ್ಳುವ ಕೊನೆಯ ಸೋಪಾನವೇ ಸೈ. ಮೇಲಿನ ಆಶ್ರಮದಲ್ಲಿಯ ದೃಷ್ಟಿ ಪ್ರಪಂಚದ ನಿವೃತ್ತಿಭಾವ ಮತ್ತು ಇದರ ಮೇಲಿನ ನಿರಭಿಮಾನ ಎರಡನ್ನು ಮರೆತು ಅಂದರೆ ಅವುಗಳ ಭಾವವಿಲ್ಲದ ಭಾವನಾರಹಿತವಾದ ಸ್ಥಿತಿಯು. ಮಹಾತ್ಮರ ಸಂಘಮಾಡಿ ಹಸಿವೆ ತೃಷೆಗಳ ಬಾಧೆನೀಗಿ ಆತ್ಮಚಿಂತನದಲ್ಲಿ ಕಾಲಕಳೆಯುವದೇ ಸನ್ಯಾಸ ಆಶ್ರಮದ ಧರ್ಮವು.

ಈ ಆಶ್ರಮಕ್ಕೆ ಬಂದರೂ ಕೂಡ ಇದರಿಂದ ನಿಜವಾದ ಲಾಭವನ್ನು ತೆಗೆದುಕೊಳ್ಳುವವರು ತೀರ ವಿರಳ. ಒಂದು ಮಠ ಅಥವಾ ಆಶ್ರಮ ರಚಿ ಸಿಕೊಂಡು ಕೌಪೀನ ಧಾರಿಗಳಾಗಿ ಜನರಲ್ಲಿ ಭಕ್ತಿಯ ಉಪದೇಶ ಬೀರಿ ತನ್ನ ಶಿಷ್ಯರನ್ನಾಗಿ ಮಾಡಿಕೊಂಡು ಅವರಿಂದ ಯಥೇಶ್ಚ ಹಣ ಸಂಪಾದಿಸಿ ಸೋಗು

ಹಾಕುವ ಜನರೇ ಬಹಳ ಆದರೆ ಜನರು. ಇಂಥ ಸನ್ಯಾಸಿಗಳ ಶಬ್ದಾಜಾಲದ ಉಪದೇಶಕ್ಕೆ ಬಲಿ ಬೀಳಬಾರದು. Worst people always Give best advice: ಎಂದು ಹೇಳಲಿಲ್ಲವೇ? ಇಂಥವರ ಸನ್ನಿಧಿಯಲ್ಲಿರಬಾರದು. ಕಪ್ಪೆಯು ಬಿಸಿಲಿನಲ್ಲಿ ಹಾವಿನ ಹೆಡೆಯ ನೆರಳನ್ನಾಶ್ರಯಿಸಿದಂತಾಗುವದು. ಎಲೆಯಮರೆಯ ಕಾಯಿಯಂತೆ ಸಮಾಜದ ಎದುರಿನಲ್ಲಿ ನಿಂತು ಇಂಥ ಜನರು ಹೆಣಗಳಸುವರು. ಇಂಥವರಲ್ಲಿ ಅರಿಷಡ್ವರ್ಗಗಳ ರಾಜ್ಯವೇ ತುಂಬಿ ರುವದು. ಜಗತ್ತಿನಲ್ಲಿ ಪ್ರತಿಷ್ಠಿತರಾಗಿ ಜನತೆಯಲ್ಲಿ ಬಂಗಾರದ ಪಲ್ಲಕ್ಕಿಯಲ್ಲಿ ಮೆರೆಯುವರು, ವಾಗ್ಯುದ್ಧಗಳಲ್ಲಿ ಜಯಪಡೆಯುವರು. ಜನತೆಯಲ್ಲಿ ಮತ ಧರ್ಮದಬೇರು ಬಿತ್ತಿ ಸ್ವಾರ್ಥ ಸಾಧಿಸಿಕೊಳ್ಳುವದೇ ಇವರ ಗುರಿ. ಅದಕ್ಕಾಗಿ ಸನ್ಯಾಸದ ನಿಜವಾದ ಅರ್ಥ ತಿಳಿದುಕೊಂಡು ನಡೆಯುವವರೇ "ಸನ್ಯಾಸಿ ಗಳು." ವಿಮರ್ಶಾತ್ಮಕ ದೃಷ್ಟಿ ಹಾಗೂ ಯೋಗ್ಯ ನಿಲುವು ಎಲ್ಲಿಯವರೆಗೆ ಬರುವದಿಲ್ಲವೋ ಅಲ್ಲಿಯವರೆಗೆ ಸಮಾಜಕ್ಕೆ ಶಾಂತಿ ದೊರೆಯುವದಿಲ್ಲವೆಂದು ನನ್ನ ಅನುಭವದ ಮಾತುಗಳನ್ನು ಮುಗಿಸುವೆ.

ಶೂನ್ಯ ಸಂಪಾದನೆಯ ಪುರಾಣ ಪ್ರವಚನಕ್ಕಾಗಿ ಆಗಮಿಸಿದ
ಗದುಗಿನ ಶ್ರೀ. ವೇದಾಂತಕೇಸರಿ

# ಮಲ್ಲಿಕಾರ್ಜುನ ಮಹಾಸ್ವಾಮಿಗಳ ಸ್ವಾಗತ ಭಾಷಣ.



ಶ್ರೀ ಶ್ರೀ ಸದ್ಗುರು ಶಿವಾನಂದ ಸ್ವಾಮಿಗಳು
ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು
ಗದಗ.

---

ವಿಜಯಪುರ ನಗರದಲಿ ವಿಜಯಧ್ವಜವನೆನೆಟ್ಟು ।
ಅಜರಾಮರ ಕೀರ್ತಿಯನು ಗಳಿಸಿ ಆಗಮಿಸಿರುವ ।
ನಿತ್ಯಾತ್ಮ ಶೋಧಕರೆ ಅಧ್ಯಾತ್ಮ ಸಾಧಕರೆ ।
ವೇದಾಂತಕೇಸರಿಯೆ ಪ್ರವಚನ ಪಂಡಿತರೆ ॥

ಓ ಗುರುವೆ ಮಹಾಗುರುವೆ ಮಲ್ಲಿಕಾರ್ಜುನ ಗುರುವೆ ।
ಪ್ರಣಿಪಾತರಾಗುವೆವು ತವಚರಣ ಕಮಲದಲಿ ॥
ಪರಮಪುಣ್ಯವು ನಮಗೆ ತಮ್ಮ ದರ್ಶನದಿಂದ ।
ಭಕ್ತಿ ಭಾವವು ತುಂಬಿ ಪಾವನತೆ ಹೊಂದಿದೆವು

ಭಾರತದ ಆದ್ಯಂತ ಅಲ್ಲೊಮ್ಮೆ ಇಲ್ಲೊಮ್ಮೆ ।
ನಕ್ಷತ್ರ ದೋಷಾದಿ ತೊಳಗಿ ಬೆಳಗಿರುವಂಥ ॥
ದಿವ್ಯಾತ್ಮರಮರಾತ್ಮರೆನಿಸಿ ಜನಿಸಿರುವಂಥ ।
ದೇವಾಂಶರಾಗಿರುವ ಯೋಗಿ ಶ್ರೇಷ್ಠರಲಿ ॥
ತಿಲಕ ಪ್ರಾಯರು ಎನಿಸಿ ಜಗಜ್ಯೋತಿ ಬಸವೇಶ ।
ಜನಿಸಿದರು ಕನ್ನಡದ ಕಮನೀಯ ನಾಡಿನಲಿ ॥
ಈ ಮಹಾಯೋಗಿವರ ಉದಯಿಸಿದ ಪುಣ್ಯನೆಲ ।
ನಮ್ಮೂರೆ ಆಗಿಹುದು ನಮಗೆನಿತು ಅಭಿಮಾನ ॥
ಜನ್ಮಜನ್ಮಾಂತರದ ಪುಣ್ಯಗಂಗೆಯು ಹರಿದು ।
ನಮ್ಮಲ್ಲಿ ಸಂಚಯಿಸಿ ಹುಟ್ಟಿ ಬಂದೆವು ಇಲ್ಲಿ ॥
ಬಸವ ಜನಿಸಿದ ಭೂಮಿ ಬಸವ ಚರಿಸಿದ ನೆಲವು ।
ಬಸವನುಸುರಿದ ಉಸಿರು ಪ್ರತಿಕಣವ ತುಂಬಿಹುದು ॥
ಇಲ್ಲಿರುವ ನೆಲ ಜಲವು ಇಲ್ಲಿರುವ ಗಿಡಮರವು ।
ಇಲ್ಲಿರುವದೆಲ್ಲವೂ ಅವನಿಂದ ಪಾವನವು ॥
ಭಾರತದ ನೆಲದಲ್ಲಿ ಧರ್ಮನಶಿಸಿದೊಡಲ್ಲಿ ।
ಜನಿಸಿ ಬರುವೆನು ಎಂದು ಕುರುಕ್ಷೇತ್ರ ರಣದಲ್ಲಿ ॥
ಉಸುರಿದನು ಅರ್ಜುನಗೆ ಶ್ರೀಕೃಷ್ಣ ಪರಮಾತ್ಮ ।
ಭಗವದ್ಗೀತೆಯನು ನೋಡಿದರೆ ತಿಳಿಯುವದು ॥
ಆ ವಾಣಿಗನುಸರಿಸಿ ಶಿವನೆ ಬಸವನು ಎನಿಸಿ ।
ಎಂಟು ಶತಮಾನಗಳ ಮೊದಲು ಜನಿಸಿದನಿಲ್ಲಿ ॥
ಬಸವನಗರದಿ ಜನಿಸಿ ಸಂಗಮನ ಬಳಿಸಾರಿ ।
ಜ್ಞಾನ ಜ್ಯೋತಿಯ ಪಡೆದು ಕಲ್ಯಾಣದೆಡೆಸಾಗಿ ।
ಮಂತ್ರಿಪದವನು ಪಡೆದು ಅನುಭವ ಮಂಟಪ ರಚಿಸಿ ।
ಆಧ್ಯಾತ್ಮ ವಿಷಯದಲಿ ಕ್ರಾಂತಿ ಕಹಳೆಯ ಕೂಗಿ ।
ದೇಶದಾ ಗಡಿಮೀರಿ ವಿಶ್ವದೆಡೆ ಸಾಗಿರುವ ।

ಅನುಭವದ ವಚನಗಳು ಸತ್ವಯುತ ತತ್ವಗಳು ॥
ಜ್ಞಾನದಾಮೃತವನ್ನು ನೀಡಿರುವ ನಿಧಿಯನ್ನು ।
ಸ್ಮರಿಸಿದರೆ ಮನತುಂಬಿ ಉಕ್ಕೇರಿ ಹರಿಯುವದು ॥
ಕಾಯಕವೆ ಕೈಲಾಸವೆಂದೆನುತ ಸರ್ವರನು ।
ಉದ್ಯೋಗಿಗಳ ಮಾಡಿ ನಿರುದ್ಯೋಗವನೆ ದೂಡಿ ॥
ಮಾನವನ ಮಹತಿಯು ಗಳಿಕೆಯೊಂದರಲಿ ಇಲ್ಲ ।
ಬಡವರಿಗೆ ಈಯುವದು ಮಿಕ್ಕಿದ್ದು ಉಳಿಸುವುದು ॥
ಬಳಿಕುಳಿದ ಹಣವನ್ನು ನೆಲದಲ್ಲಿ ಹುಗಿಯದಲೆ ।
ಸತ್ಕಾರ್ಯ ಮಾಡಲ್ಕೆ ನೀಡುವುದು ಎಲ್ಲವನು ॥
ಈ ರೀತಿ ದುಡಿಮೆಯಲಿ ಸಮತೆಯನು ತುಂಬಿದರು ।
ದಾರಿದ್ರ್ಯ ರಕ್ಕಸಿಯ ದೂಡಿದರು ಎಲ್ಲೆಡೆಗು ॥
ರಾಜ್ಯದಂಡದ ಜೊತೆಗೆ ಧರ್ಮದಂಡವ ಪಿಡಿದು ।
ಸಂಗಮಿಸಿ ಎರಡನ್ನು ಸಂಗಮನ ದಯದಿಂದ ॥
ಅನವರತ ಅಂಗದೊಳು ಲಿಂಗವನು ತೊರೆಯದಲೆ ।
ಜಂಗಮರ ಪಾದಗಳ ಧೂಳಿಯನು ಧರಿಸುತ್ತ ॥
ಲಿಂಗಾಂಗ ಸಮರಸದ ಮಂಗಲಮಯ ಭಾವವನು ।
ಭವ ಮರಣ ಚಕ್ರದಾ ಪಾಶವನು ಪರಿಹರಿಪ ॥
ಶ್ರೇಷ್ಠ ತತ್ವದ ತಿರುಳು ಜ್ಞಾನ ಜ್ಯೋತಿಯು ನಿಲವು ।
ಅರಿಯಲ್ಕೆ ಅತಿಶುಲಭ ಮಾಡಿದನು ಬಸವೇಶ ॥
ವೇದವೇದಾಂತಗಳು ಗೀರ್ವಾಣ ಭಾಷೆಯಲಿ ।
ಬರೆದಿರುವ ಕಾರಣದಿ ಅರಿಯಲ್ಕೆ ಸರ್ವರಿಗು ॥
ಉಕ್ಕಿನಾ ಕಡಲೆಯು ತೆರದಿ ಗುರುತರವು ಆಗಿತ್ತು ।
ಕೆಲಜನರ ಸೊತ್ತಾಗಿ ಅಜ್ಞರನು ತುಳಿಯಲ್ಕೆ ॥
ಸುಲಭಸಾಧನವಾಗಿ ಸರ್ವಾಧಿಕಾರಕ್ಕೆ ।
ಎಡೆಯಾಗಿ ಬಹುಜನರ ದಾಸ್ಯಕ್ಕೆ ಎಳಸಿತ್ತು ॥
ದಲಿತರಾ ಚಿತ್ರವನು ಅಣ್ಣ ಬಸವನು ಕಂಡು ।
ಮನನೊಂದು ಜನತೆಯನು ಕೈಹಿಡಿದು ಎತ್ತಲ್ಕೆ ॥
ಧರ್ಮದಾ ಸತ್ವವನು ಅನುಭವದ ತಿರುಳನ್ನು ।
ತಿಳಿಯಾದ ಕನ್ನಡದಿ ಸರ್ವರಿಗು ತಿಳುವಂತೆ ।

ಲೋಕಾನುಭವ ದೊಡನೆ ಆಧ್ಯಾತ್ಮವನು ಬೆರಸಿ ।
ವಚನ ವಾಙ್ಮಯವನ್ನು ರಚಿಸಿದರು ಅಗಣಿತವ ॥
ಕಲ್ಯಾಣ ಪಟ್ಟಣದ ಅನುಭವ ಮಂಟಪದಿ ।
ಪಕ್ಕಾದ ವಚನಗಳು ವಿಶ್ವಕ್ಕೆ ಕೊಡುಗೆಗಳಿವು ॥
ಜಾತಿಭೂತವ ಅಳಿದು ಮೇಲು ಕೀಳನು ತೊಡೆದು ।
ಮಾನವರೊಳೆಲ್ಲರಲಿ ಲಿಂಗಭೇದವನಳಿದು ॥
ಸ್ತ್ರೀಯರು ಮೊದಲ್ಗೊಂಡು ಸರ್ವರಿಗು ಧರ್ಮದೊಳು ।
ಸಮತೆಯನು ನೀಡಿದರು ಭೇದವನು ದೂಡಿದರು ॥
ಮಾನವರ ಉನ್ನತಿಯು ಸರ್ವತೋಮುಖವಾಗಿ ।
ಸಾಧಿಸಲು ಹೆಣಗಿದರು ಜಯವನ್ನು ಪೊಂದಿದರು ॥
ಈ ರೀತಿ ಸಾಧಿಸಿದ ಸಾಧನೆಗಳೆನಿತೆನಿತೊ ।
ಪೇಳಲ್ಕೆ ನನ್ನಳವು ಮೀರಿಹುದು ಸಾಕಿನ್ನು ॥
ಪರಮ ಪೂಜ್ಯರಾದ ತಾವೇನು ಕಡಿಮೆಯೇ ।
ಪುರಾಣ ಪ್ರವಚನದಲಿ ಪಾಂಡಿತ್ಯ ಪ್ರತಿಭೆಯಲಿ ॥
ಅನುಭವದ ಅರ್ಕದಲಿ ಸುಹಾಸ ವದನದಲಿ ।
ಮಂತ್ರಮುಗ್ಧರ ಮಾಡಿ ಜನಮನವ ತಣಿಸುವಿರಿ ॥
ನಿಮ್ಮ ಕೀರ್ತಿಯ ಕಲಶ ಉನ್ನತೋನ್ನತವಾಗಿ ।
ಗಗನವನು ಅಡರಿಹುದು ಬಲುದೂರ ಸಾಗಿಹುದು ॥
ರಾಮಕೃಷ್ಣ ಮುನಿವರಗೆ ವಿವೇಕಾನಂದ ದೊರೆತಂತೆ ।
ಗದುಗಿನ ಶಿವಾನಂದ ವರಯೋಗಿ ಮುನಿಗಳಿಗೆ ॥
ಶ್ರೇಷ್ಠ ಶಿಷ್ಯರು ಎನಿಸಿ ಮೆರೆಯುವಿರಿ ಎಲ್ಲೆಡೆಗೆ ।
ಕೈಮಾಡಿ ಕರೆಕರೆದ ಮಠಾಧಿಕಾರವ ಪಿಡಿದು ॥
ಮೃಷ್ಟಾನ್ನ ಹೊಡೆಯುತ್ತ ಸೌಖ್ಯವನು ಪಡೆಯುತ್ತ ।
ಸೋಮಾರಿಯಾತೆರದಿ ಕಾಲವನು ತಳ್ಳದಲೆ ॥
" ದೇಶ ಸೇವೆ ಈಶ ಸೇವೆ " ಎಂದೆಂಬ ನುಡಿಯರಿತು ।
ಮಠಬಿಟ್ಟು ಹೊರಬಿದ್ದು ಸಾಗಿರುವಿರೆಲ್ಲೆಡೆಗು ॥
ಪಾಂಡಿತ್ಯ ಪರಿಪೂರ್ಣ ಪ್ರತಿಭೆಯಿಂ ತುಂಬಿರುವ ।
ತಮ್ಮ ನಾಲಿಗೆಯಲ್ಲಿ ಕನ್ನಡವು ಕರಗತವು ॥
ಜನಜಲಧಿ ಮಧ್ಯದಲಿ ನಿರ್ಭಯದಿ ಈಸುವಿರಿ ।
ಸ್ತುತಿನಿಂದೆಗಳ ಬಿಸುಟ ನಿರ್ವಿಕಾರ ಮನದಿಂದ ॥

ವಿದ್ವತ್ತು ತುಂಬಿಹುದು ವಾಗ್ದೇವಿ ಒಲಿದಿಹಳು |
ಓಜಸ್ಸು ತೇಜಸ್ಸು ತುಂಬಿ ತುಳುಕುವ ತಮಗೆ ||
ಕುಮಾರವ್ಯಾಸನ ನೆರವು ನಾರಾಯಣನ ವರವು |
ದೊರೆತಿಹುದು ತಮಗೆಂದು ಭಾವ ಬರುತಿದೆ ಎಮಗೆ ||
ಬ್ರಹ್ಮಚಾರಿಗಳಾಗಿ ಸಂಸಾರವನೆ ತೊರೆದು |
ಆಶೆ ಆಮಿಶವಳಿದು ನಿಷ್ಕಾಮಕರ್ಮವ ಪಿಡಿದು ||
ಗಿರಿಯ ಗುಹೆಯಲಿ ಕುಳಿತು ಕಠಿಣ ತಪವಾಚರಿಸಿ |
ಆತ್ಮೋನ್ನತಿಯ ಪೊಂದಲ್ಕೆ ಬಲುಸುಲಭವಾಗಿದ್ದರೂ ||
ಎಲ್ಲವನು ಬೀಸಾಡಿ ನಿಲ್ಲದಲೆ ಒಂದೆಡೆಗೆ |
ಮಾಯೆಯಾ ಮಧ್ಯದಲಿ ಮನವನ್ನು ಬಿಗಿಹಿಡಿದು ||
ಕೆಸರ ಮಧ್ಯದ ಕಮಲ ಹೆಸನಾಗಿ ಇರುವಂತೆ |
ವೀರಯೋಗಿಯು ಆಗಿ ಬೆಳಗುವಿರಿ ಎಲ್ಲೆಡೆಗೆ ||
ತನ್ನೊಬ್ಬನುನ್ನತಿಯು ಸ್ವಾರ್ಥದಾಪಡಿನೆಳಲು |
ಸರ್ವರನು ಎತ್ತಲ್ಕೆ ಬೇಕವಗೆ ಎಂಟೆರ್ದೆಯು ||
ತಾನುಂಡ ಅನುಭವವ ಅನ್ಯರಿಗು, ನೀಡುವದು |
ತನ್ನ ಉದ್ಧಾರದ ಜೊತೆಗೆ ಸರ್ವರಿಗು ಸಮಪಾಲ ||
ಎಂದೆಂಬ ಭಾವನೆಯು, ಸರ್ವಮಾನ್ಯವು ಎಂದು |
ಮನಕರಗಿ ತಾವಿಂದು ಚರಿಸುವಿರಿ ಅಲ್ಲವೇ ? ||
ರೀತಿನೀತಿಯು ಬಿಟ್ಟು ಹದಗೆಟ್ಟ ಜನತೆಯಲಿ |
ಯೋಗ್ಯ ಮಾರ್ಗವತೋರಿ ನಿಜತತ್ವವನು ತಿಳುಹಿ ||
ಮೋಕ್ಷ ಮಾರ್ಗದ ಕಡೆಗೆ ಮನವತಿರುಗಿಸುವಂಥ |
ಶ್ರೇಷ್ಠ ಕಾರ್ಯವ ನೀವು ಪಿಡಿದಿರುವಿರಲ್ಲವೆ ? ||
ಬೇಕುಬೇಕೆಂಬುವಾ ಬೇಡಿಕೆಗಳತಿಯಾಗಿ |
ಸ್ವಾರ್ಥಮಯ ಜೀವನವು ತಾಂಡವ ಗೈಯ್ಯುತಿದೆ ||
ರಾಜಕೀಯ ರಂಗದಲಿ ಚದುರಂಗ ತುಂಬಿಹುದು |
ಧರ್ಮಗುರುಗಳ ಮನದಿ ಧನದಾಶೆ ಮುಸುಕಿಹುದು ||
ಧನವಂತರಾ ಎದೆಯು ಧನಮದದಿ ಮುಳುಗಿಹುದು |
ಅಧಿಕಾರಿಗಳ ಹೃದಯ ದರ್ಪದಲಿ ಬೀಗಿಹುದು ||
ಹೀಗಾಗಿ ಒಂದೆಡೆಗು ಶಾಂತಿ ಇಲ್ಲದುದಾಗಿ |
ಮಾನವತೆ ಅಳಿದಿಹುದು ದಾನವತೆ ಬೆಳದಿಹುದು ||

ಸ್ವಾತಂತ್ರ ಸ್ವಾತಂತ್ರ ಎಂದೆಂದು ಕೂಗುತ್ತ ।
ಸ್ವೈರ ವೃತ್ತಿಯ ಕಡೆಗೆ ಮನವನ್ನು ಕಳಿಸಿಹರು ॥
ವಿಜ್ಞಾನ ರಕ್ಕಸಿಯು ಅಧ್ಯಾತ್ಮ ಮರೆಯಿಸಿತು ।
ಪಾಂಡಿತ್ಯದಾಭಾಸ ದೇವರನು ಸರಿಯಿಸಿತು ॥
ಸತ್ಯವನೆ ಮರೆತೀಗ ಮಿಥ್ಯದಾ ಬೆನ್ನತ್ತಿ ।
ಎತ್ತಲೋ ಸಾಗಿಹೆವು ಪಥಕಾಣದಂತಾಗಿ ।
ಕೋಮಲತೆ ಅಳಿದಿಹುದು ಕಾಠಿಣ್ಯ ಬೆಳೆದಿಹುದು ।
ಸರ್ವರಾ ಹೃದಯದಲಿ ಅಶಾಂತಿ ಕೆದರಿಹುದು ।
ಚಂದ್ರನನು ಹತ್ತುವೆವು ಮಂಗಳನ ಸುತ್ತುವೆವು ।
ಎಂದೆಂಬ ಭಾವನೆಯು ಭೌತಿಕದ ಬೆನ್ನತ್ತಿ ।
ನಿತ್ಯಾತ್ಮ ಆನಂದ ತೇಜವನೆ ಬೀಸಾಕಿ ।
ಎತ್ತೆತ್ತೊ ಚದರಿಸುತ್ತ ಸಾಗಿರುವೆವಾವಿಂದು ।
ಓ ಗುರುವೆ ಮಹಾಗುರುವೆ ಮಲ್ಲಿಕಾರ್ಜುನಗುರುವೆ ।
ಅಧ್ಯಾಸಿ ಅನುಭಾವಿ ವೇದಾಂತ ಕೇಸರಿಯೇ ।
ಗುರಿಮರೆತು ಗತಿಸುತಿಹ ಅರಿವು ಮರೆತಿಹ ನಮಗೆ ।
ಕತ್ತಲೆಯ ಪರಿಹರಿಸಿ ಕೈನೀಡಿ ಕರೆಯಲ್ಕೆ ।
ತಾವು ದೊರೆತಿರಿ ಇಂದು ನಮ್ಮ ಪುಣ್ಯದ ಬಲದಿ ।
ಯೋಗ್ಯ ಪಥವನು ತೋರಿ ಭಾಗ್ಯವಾಡಿಯ ಭಾಗ್ಯ ।
ಮತ್ತೊಮ್ಮೆ ತೆರೆಯಿಸುವಿರೆಂದೆಂಬ ಭಾವನೆಯು ।
ಉಕ್ಕುಕ್ಕಿ ಹರಿಯುತಿದೆ ಸರ್ವರಾ ಹೃದಯದಲಿ ।
ಜಂಗುಹತ್ತಿದ ಸುರಗಿ ನಿಸ್ಸತ್ವವಾದಂತೆ ।
ನಮ್ಮೆಲ್ಲರಾಹೃದಯ ಮಾಯೆಯಿಂ ತುಂಬಿಹುದು ।
ಬೂದಿಮುಚ್ಚಿದ ಕೆಂಡ ಗುಪ್ತವಾಗಿರುವಂತೆ ।
ಅಡಗಿರುವ ತೇಜವನು ಕೆದರಿ ಬೆಳಗಿಸಲಿಕ್ಕೆ ।
ಕೃಪೆದೋರಿ ಬಂದಿರುವ ತಮ್ಮನ್ನು ನಾನೀಗ ।
ಊರವರ ಪರವಾಗಿ ಸ್ವಾಗತವ ಮಾಡುವೆನು ।
ಸ್ವಾಗತವು ಸ್ವಾಗತವು ಸುಸ್ವಾಗತವು ತಮಗೆ
ಭದ್ರಂ ಶುಭಂ ಮಂಗಲಂ.
ಜೈ ಜಗಜ್ಯೋತಿ ಬಸವೇಶ!
—ರು. ಸಿ. ಮಠ, ತಾಲೂಕಾ ಮಾಸ್ತರ ಬಾಗೇವಾಡಿ.

# ಕರುಣೆಯ ಕರೆ.

ಕರೆದಾಗ ಓ ಎನ್ನಿ ಮರೆತಾಗ ಬಾ ಎನ್ನಿ । ಅರಿವು
ತೋರಿದ ಪ್ರಭುವೇ ಮಲ್ಲಿಕಾರ್ಜುನ ಗುರುವೇ ॥ಪ॥

ಜ್ಞಾನಸಾಗರದೊಳು ಕೈಯ ಬಿಡದಲೇ ಈಸಿ । ಜ್ಞಾನ
ದೀಪವ ತಂದೆ ನಿತ್ಯ ಬೆಳಗುತಲಿರುವೇ ॥೧॥

ಅಭಿಮಾನವನು ತೊರೆದು ಅಪಮಾನವನು ಸಹಿಸಿ ।
ನಿತ್ಯ ಶ್ರೀಶಿವಾನಂದರ ಸೇವೆಯನು ಮಾಡುತಲಿ ॥೨॥

ಕೂಸಾಗಿ ನಿಮ್ಮಯ ಚರಣದೊಳು ಆಡುವೆನು ।
ಲೇಸಾಗಿ ಹೃದಯದಲಿ ವಾಸಿಸಲು ಬಯಸುವೆನು ॥೩॥

ಸೋಸಿ ನೋಡಲಿಬೇಡಿ ಘಾಸಿ ಆಗುವೆ ನಾನು । ಈಶ
ನನ್ನಯ ದೇವಾ ಮಲ್ಲೇಶನೇ ಸಲಹು ॥೪॥

ಪ್ರತ್ಯಗಾತ್ಮನುನೀವೇದಿಪರಂಜ್ಯೋತಿಯು ನೀವೆ । ನಿತ್ಯ
ನಿರಂಜನ ಪ್ರಭುವೇ ಗುರುವಾಗಿ ಬಂದಿರುವೆ ॥೫॥

## ವಚನಗಳು.

ನೀ ಮಾಡಿದ ಸಂಸಾರ ಎಂಬ ಜಗದ ಜಂಜಡದೊಳ್ ನಾ ಕಾಣದೇ ಕಾಲು ಜಾರಿದೆನಯ್ಯಾ. ಕಾಲು ಜಾರಿ ಬಿದ್ದಿರುವೆ ನಯ್ಯಾ । ಘೋರ ಸಂಸಾರದೊಳ್ । ನಿನ್ನತ್ತ ಮನವರಿಸಿ ನೀ ಸಲುಹಬೇಕಲ್ಲದೇ ಮತ್ತಾರು ಸಲಹುವರು ಹೇಳಾ? ಚನ್ನಮಲ್ಲಿಕಾರ್ಜುನಾ ॥೧॥

ಜಗವ ಮಾಡಿದರಾರು, ಜಗಕೆ ಕಳುಹಿದರಾರು ಬಗೆ ಬಗೆಯ ರೀತಿಯಲಿ ಆಟವ ಮಾಡಿದವರಾರು, ಆಟದೋಳ್ ವೈ ಮರೆಸಿ ಕೂಟದೋಳ್ ಪಮಳಿಸಿ. ಮಾಟನೋಡುತ್ತ ನಿಂತವನು ನೀನಲ್ಲದೇ ಬೇರಿಲ್ಲ ನೋಡಾ ಚನ್ನಮಲ್ಲಿಕಾರ್ಜುನಾ ॥೨॥

ಕರ್ಮದಿಂದಲಿ ಭವಕ್ಕೆ ಕಳುಹಿದಿ, ಮರ್ಮದಿಂದಲಿ ಬೆಳೆಸಿನಿಲಿಸಿದಿ ಮರ್ಮವಿಟ್ಟೊ ಧರ್ಮವಂತರ ಕೈ ಹಿಡಿಸಿ ಕಾಯ್ದುವ ನೀನಲ್ಲದೇ ಮತ್ತಾರು ಹೇಳು ಚನ್ನಮಲ್ಲಿಕಾರ್ಜುನಾ ||೩||

ಆಗ ಕರೆದೆನು ನಿನ್ನ ನಿಜ ರೂಪವನು ತೋರೆಂದು ನೀ ಮಾಡಿದ ಪ್ರಪಂಚ ನಾಟಕದೊಳ್, ಪಾತ್ರವಹಿಸಲೆಂದು ಮುಂದ ಹಾಸದಿ ಮರೆಯಾಗಿ ನಿಂತೆಯಾ ಹೇಳು ಚನ್ನಮಲ್ಲಿಕಾರ್ಜುನಾ ||೪||

ಮನೆಮಾಡಿ, ನೆಲಮಾಡಿ, ಮನೆಗೆ ಮಕ್ಕಳು ಮಾಡಿ, ಮನಸ್ಸಿನೊಳ್ ನಿನ್ನ ಕಾಣುವ ಹಂಬಲವಿರಲು ಅನುಮರಿತು ಬಂದೆಯಾ ತಂದೆ. ಚನ್ನ ಮಲ್ಲಿಕಾರ್ಜುನಾ ||೫||

—ಶ್ರೀಮತಿ ಕುಂ. ಸೌ|| ಸೋನುಬಾಯಿ ಎಸ್.
ಪಾಟೀಲ ವಿಜಾಪೂರ.

# ಆಧ್ಯಾತ್ಮಿಕ ರತ್ನ ಕಳಚಿತು !

ಲಿಂಗೈಕ್ಯ ಗುರುಶಾಂತಲಿಂಗ ಸ್ವಾಮಿಜಿಯವರ ದುಃಖಸೂಚಕ ಸಭೆಯಲ್ಲಿ
ಶ್ರೀ ವ್ಯೆಂದರ್ಗಿ ಪಟ್ಟದಾರ್ಯರು ( ಸ್ವಾಮಿಜಿಯವರು ) ಮಾಡಿದ ಭಾಷಣ ಸಂಗ್ರಹ.

O

ಇಂದು ಜಗತ್ತಿಗೆ ಶಾಂತಿನೀಡಬಲ್ಲ ಮಹಾ ಶಕ್ತಿಯೆಂದರೆ ಹೈಡ್ರೋಜನ್ ಬಾಂಬು, ಅಟೆಂಬ್ ಬಾಂಬು, ರಾಕೆಟ್ಟು ಬಾಂಬು. ಅಲ್ಲಾ, ಅದರಿಂದ ಜಗತ್ತಿನ ಪ್ರಳಯವೇ ಹೊರ್ತು ಶಾಂತಿ ಸುಖ ದೊರೆಯಲಾರದು. ಜಗತ್ತಿಗೆ ಶಾಂತಿ ಸುಖ ನೀಡಬಲ್ಲ, ನೀಡಿದ ಶಕ್ತಿ ಎಂದರೆ ಅಧ್ಯಾತ್ಮಿಕ ಶಕ್ತಿ. ಅದು ಅಂದೇ ಶಾಂತಿಯನ್ನು ಉಳಿಸಬಲ್ಲುದು; ಬೆಳಿಸಬಲ್ಲುದು. ಅಂಥ ಶಕ್ತಿ ಪಡೆದು; ಶಕ್ತಿಯೇ ತಾನಾಗಿ ಜೀವಿಸುತ್ತಿದ್ದ ಅಧ್ಯಾತ್ಮಿಕ ರತ್ನಪ್ರದೀಪವಾಗಿ ಬೆಳಗುತ್ತಿದ್ದ, ಪ್ರಕಾಶಮಾನವಾಗಿದ್ದ ಶ್ರೀ ಗುರುಶಾಂತಲಿಂಗ ಮಹಾಸ್ವಾಮಿಗಳವರು ಒಬ್ಬರು ಅಂಥ ಒಂದು ರತ್ನ ಇಂದು ಉರುಳಿತು. ಪ್ರಕಾಶವಾಗಿ ಪ್ರಕಾಶದಲ್ಲಿ ಸೇರಿಕೊಂಡಿತು. ಭಾರತದ ಹಿರಿಮೆ ಇಂದು ಜಗತ್ತಿಗೆ ತೋರಿಸುವದರಲ್ಲಿ ಅಧ್ಯಾತ್ಮಿಕ ಮಹಾ ಪ್ರಕಾಶವೇ ಕಾರಣವಾಗಿದೆ. ಅಂಥ ಒಂದು ದಿವ್ಯ ಮತ್ತು ಭೌವ್ಯ ಜೀವನದ ಸಾಕಾರವನ್ನು ಸ್ವಾಮಿಜಿಯವರು ಪಡೆದಿದ್ದರು.

ಹರಮುನಿದರೆ ಗುರುಕಾಯ್ವ; ಆದರೆ ಗುರುಮುನಿದರೆ ಹರಕಾಯಲಾರ; ಎಂದು ಹೇಳಬಹುದು. ಅವರು ಹೆಸರಿಗೆ ತಕ್ಕಂಥ ಗುರುವಾಗಿದ್ದರು. ಶಾಂತವಾಗಿದ್ದ ಲಿಂಗವಾಗಿದ್ದರು. ಗುರು; ಲಿಂಗ; ಜಂಗಮವಾಗಿದ್ದರು. ಎಂದು ಧಾರಾಳವಾಗಿ ಹೇಳಬಹುದು.

ಅವರು ಬೀಳೂರ ಸ್ವಾಮಿಜಿಯವರಿಗಿಂತ ಮುಂದುವರಿದಿದ್ದರು. ತಮ್ಮ ಕೈಯ ಕಲ್ಪತರು ಮಾಡಿಕೊಂಡಿದ್ದರು. ನುಡಿ ಪರುಷಮಾಡಿಕೊಂಡಿದ್ದರು. ನೋಡ ಕಾಮದೇನು ಮಾಡಿಕೊಂಡಿದ್ದರು. ಅವರು ಚಿಂತಾಮಣಿಯಂತೆ ಬಂದ ಭಕ್ತವೃಂದಕ್ಕೆ ಆಶಾದೀಪವಾಗಿದ್ದರು. ಅವರ ಪವಿತ್ರಸಾನಿಧ್ಯವೆಂದರೆ ಅದೊಂದು ಭಾಗ್ಯವೆಂದು ತಿಳಿಯಬೇಕಾಗಿತ್ತು. ಅಧ್ಯಾತ್ಮಿಕ ತೇಜಸ್ಸಿನಿಂದ ಇಡೀ ಜೀವನವನ್ನೇ ಬೆಳಗುತ್ತಿದ್ದರು. ಸನ್ಯಾಸಿಯಾಗಿ; ಕೇವಲ ಅವರ ಡಂಬಾಚಾರ, ಕೀಳುವಿಚಾರಕ್ಕೆ ಎಡೆಕೊಡದೆ; ಸಾಧಿಸಬೇಕಾಗಿದ್ದ ಸತ ನೋಡಬೇಕಾಗಿದ್ದ ಬೆಳಕು ಅವರಾಗಿದ್ದರು.

ಕನ್ನಡನಾಡು ಇಂಥ ತೇಜಸ್ವಿಗಳಿಂದ ಪಾವನಗೊಂಡಿದೆ. ಅವರ ಪತ್ತಿನಿಂದ ಪುಣ್ಯಪಡೆದಿದೆ.

ಇಂದು ಪ್ರತಿಯೊಂದು ರಂಗದಲ್ಲಿ ಅಶಾಂತಿಯ ಕೋಲಾಹಲ; ಮತ್ಸರ ಮತ್ತು ಮಮಕಾರಗಳ ಮಂದಮತಿ. ರಾಜಕೀಯದ ಚದುರಂಗದಾಟ; ಧಾರ್ಮಿಕ ಆಡಂಬರದ ಭಂಡಾಟಿಕೆ, ಹೀಗೆ ಪ್ರತಿಯೊಂದರಲ್ಲಿ ಮನಮೆಚ್ಚುವ ಹಾಗೆ; ಒಂದೂ ನಡೆಯುತ್ತಿಲ್ಲ—ಇಂಥ ಸಮಯದಲ್ಲಿ ಸ್ವಾಮಿಜಿಯವರಂಥ ಮಹಾ ಶಕ್ತಿ ಪುರುಷರು ತಮ್ಮ ಕಲ್ಪನೆಯ ಮಾತ್ರದಿಂದ; ಮನಸ್ಸೀಮಾತ್ರದಿಂದ ಎಷ್ಟೋ ಉದ್ಧಾರ ಮಾಡುತ್ತಿದ್ದರು. ಅಂಥ ಒಂದು ಸುಯೋಗ; ಸುದಿನ ಇಂದು ಇಲ್ಲದಾಯಿತು.

ಅವರನ್ನು ಹೊಗಳಿದರೆ, ಅವರನ್ನು ಸ್ತುತಿಸಿದರೆ ಕಾರ್ಯವಾಗಿದಹಾಗಿಲ್ಲ. ಅಂಥವರು ತಮ್ಮ ಜೀವಮಾನದಲ್ಲಿ ಯಾವ ಯಾವ ರೀತಿಯಿಂದ ನಡೆದುಕೊಂಡರು; ಸಮಾಜಕ್ಕೆ. ನಾಡಿಗೆ, ದೇಶಕ್ಕೆ; ಯಾವರೀತಿಯಲ್ಲಿ ಸಹಾಯ ಸಹಕಾರ ಮಾಡಿ ಉದ್ಧರಿಸಿದರು, ಅವರು ಮಾಡುವ; ಅವರು ನುಡಿವ ಮಂತ್ರವನ್ನು ನಾವು ಪಠಿಸಬೇಕು. ಅವರ ಹಾಗೆ ನಮ್ಮ ನಡೆನುಡಿಯಾಗಬೇಕು. ಅಂದರೆ ಮಾತ್ರ ಅವರನ್ನು ನಾವು ನೆನಪಿಸಿದಂತೆ; ಅವರೇ ನಾವಾದಂತೆ.

ಅಂಥ ಮಹಾನುಭಾವರ ಪುಣ್ಯತಮ ಹೆಸರು ಉಳಿಯಬೇಕಾದರೆ ಅವರ ಸ್ಮಾರಕ ಕಾರ್ಯವನ್ನು ಮಾಡಿ ಕೃತಾರ್ಥರಾಗಬೇಕು. ದುಧನಿಯ ಯಾವುದೋ ಪುಣ್ಯದಿಂದ ಇಂಥ ಮಹಾ ಸ್ವರೂಪಿಗಳು ದೊರೆತಿದ್ದರು. ಅವರು ಮಾತ್ರ ನಮಗೆ ಕಾಣದಿದ್ದರೂ ಇಲ್ಲಿಯ ಪ್ರತಿಯೊಂದು ಕಣಕಣದಲ್ಲಿ ಗಾಳಿಯ ಪ್ರತಿಯೊಂದು ತರಂಗದಲ್ಲಿ ಜೀವಂತವಾಗಿ ಸುತ್ತಿದ್ದಾರೆ. ಅವರಿಗಾಗಿ; ಮಾಡಬೇಕಾದುದೇನು? ಎಂದು ಶೀಘ್ರವಾಗಿ ವಿಚಾರಿಸಿ ಕಾರ್ಯಕ್ಕೆಕೊಳ್ಳಬೇಕು. ನುಡಿಯದೆ ನಡೆದು ಸ್ವಾಮಿಜಿಯವರ ಜೀವನ ಪ್ರತಿಷ್ಠಾಪಿಸಬೇಕು. ಎಂದು ಈ ಸಮಯದಲ್ಲಿ ಹೇಳುವೆ.

ಓಂ ಶಾಂತಿ.

# ಶಿವಶರಣರು ಸತ್ತಿಲ್ಲ—ಸಾಯುವದಿಲ್ಲ !!

(ಸರ್ದಾರ ಶರಣಗೌಡರು ಗುಲ್ಬರ್ಗಾ ಅವರು ದಿ. ೪-೧೦-೫೮ರ ಶ್ರೀಗುರುಶಾಂತಲಿಂಗ ಮಹಾಸ್ವಾಮಿಜಿಯವರು ಲಿಂಗೈಕ್ಯರಾದ ನಿಮಿತ್ತ ದುಃಖಸೂಚಕ ಸಭೆಯಲ್ಲಿ ಮಾತಾಡಿದ ಭಾಷಣ ಸಾರ ಸಂಗ್ರಹ.)

## ದುಧನಿ—ರವಿವಾರ ೪—೧೦—೫೮.

ಇಂದು ರವಿವಾರವಿದ್ದರೂ ನಮಗೆ ಬೆಳಕು ಕಡಿಮೆಯಾಗಿದೆ. ದಿನದ ರವಿಯ ಬೆಳಕು ನಮ್ಮ ಸುತ್ತುಮುತ್ತು ಪ್ರಕಾಶಿಸುತ್ತಿದ್ದರೂ ಆತ್ಮದ; ಮತ್ತು ತತ್ವದ; ಆಧ್ಯಾತ್ಮಿಕ; ಧಾರ್ಮಿಕ; ನೈತಿಕ ಸೂರ್ಯನು ಇಂದು ನಮ್ಮ ಗಡಿ ನಾಡಿನ ಭಾಗದಿಂದ ಮಾಯವಾದನು. ಆ ಬೆಳಕು ಸುಮಾರು ಅರ್ವತ್ತೈದು ವರುಷಗಳವರೆಗೆ ತನ್ನದೇ ಆದ ಪ್ರಕಾಶವನ್ನು ಬೀರಿ ಭಕ್ತವೃಂದಕ್ಕೆ ಪುನೀತ ಗೊಳಿಸಿತ್ತು. ಬಂದವರಿಗೆ ಹರುಷದಿಂದ ಆಶೀರ್ವದಿಸಿ ಉದ್ಧಾರ ಮಾಡಿತ್ತು. ಅಂಥ ರವಿ ನಮಗಿಂದು ಕಾಣದಾಯಿತು. ಇದು ದುರ್ದೈವದ ಸಂಗತಿ. ನಾಡಿನ ಪುಣ್ಯದ ಮಹಿಮೆಯಿಂದ ನಾವು ಇಂಥ ಮಹಾ ವಿಭೂತಿ ಪುರು ಷರನ್ನು ಜಿತೇಂದ್ರಿಯವಾದಿಯನ್ನು ಆಜನ್ಮಬ್ರಹ್ಮಚಾರಿಯನ್ನು ಶಿವಯೋಗ ಸುಶೀ ಲರನ್ನು ಪಡೆದಿರುತ್ತೇವೆ. ಅಂಥ ಒಂದು ಮಹಾನಿಧಿ; ಮಹಾಶಕ್ತಿ; ಮಹಾ ವಿರಕ್ತಿ ಇಂದು ಕಾಣದಾಯಿತು.

ಹಾಗೆಂದರೆ ಶಿವಶರಣರೂ, ಮಹಾ ತೇಜಸ್ವಿಗಳೂ, ಸತ್ತರೆಂದು ಹೇಳ ಬಹುದೇ ? ಅದು ನಮ್ಮ ವೀರಶೈವ ಮತತತ್ವ ಸಿದ್ಧಾಂತದಲ್ಲಿ ಇಲ್ಲವೇ ಇಲ್ಲ. ಶಿವಶರಣರು ಅಮರರು! ಅವರು ಶಿವಸ್ವರೂಪಿಗಳು. ತಮ್ಮ ಜೀವಮಾನದ ಬದುಕಿನ ಅವಧಿಯನ್ನು ಇಲ್ಲಿ ಜನರುದ್ಧಾರಕ್ಕಾಗಿ ಜಗಹಿತ, ಲೋಕಹಿತ ಕ್ಕಾಗಿ ದುಡಿದು ಧನ್ಯತೆಯ ದಾರಿದೀಪವಾಗಿ ಹೋಗುವವರು. ಅದಕ್ಕಾಗಿ ನಮ್ಮ ಶ್ರೀಗುರುಶಾಂತಲಿಂಗಮಹಾಸ್ವಾಮಿಜಿಯವರು ಸತ್ತಿಲ್ಲ. ಸಾಯುವದಿಲ್ಲ. ಅಮರವಾದ ಅವರ ಆತ್ಮ; ಅಮರವಾದ ಅವರ ತತ್ವ ಜೀವನ; ಅಮರ ವಾದ ಅವರ ಬದುಕು ಬಾಳು; ಈ ನಾಡು; ಈ ದೇಶ ಇರುವವರೆಗೆ ಮಹಾ ಚೇತನ ಶಕ್ತಿಯಾಗಿ; ಒಂದು ಬೆಳಕಾಗಿ. ಇರುವದು. ಹೀಗಿರುವಾಗ ನಾವು ಅವರನ್ನು ಪ್ರತ್ಯಕ್ಷವಾಗಿ ಕಾಣಲಿಕ್ಕಿಲ್ಲವೆಂದು ಶಂಕೆ ಇರಬಹುದು. ಆದರೆ ಅದೂ ಸಾಧ್ಯವಿದೆ. "ನಾವು ನಂಬಿ ಕರೆದರೆ; ಓ ಎಂಬನೇ ಶಿವನು" ಎನ್ನು ವಂತೆ ನಾವು "ನಂಬದೆ ನಚ್ಚದೆ ಬರಿ ಆಡಂಬರದಿಂದ ಕರೆದರೆ ಶಂಭು ಮೌನ ವಾಗಿರುವಂತೆ; ಅವರೂ ಮೌನ.

"ಶರಣರ ಮಹಿಮೆ ಮರಣದಲ್ಲಿ" ಎನ್ನುವಂತೆ ಅವರು ಶಿವೈಕ್ಯರಾಗುವ ಮೊದಲೇ ಕೇವಲ ೮।೧೦ ದಿನಗಳ ಹಿಂದೆಯೇ ಅವರು ಮುನುವಳ್ಳಿ ಗ್ರಾಮದಲ್ಲಿ ಅವರಿಗೆ ಅಡ್ಡಪಲ್ಲಕ್ಕಿ ಉತ್ಸವದ ಸಮಯದಲ್ಲಿ ಒಳ್ಳೇ ಮಾರ್ಮಿಕ ಮಾತು ಸ್ವಾಮಿಜಿಯವರು ಹೇಳಿದರು "ನಾವು ಏನು ಮಾಡಬೇಕಾಗಿದೆ, ಏನು ಮಾಡಿದ್ದೇವೆ" ಎಂದು ಪ್ರತಿಯೊಬ್ಬರೂ ವಿಚಾರಿಸಿದರೆ ಸಂಸಾರದಲ್ಲಿಯಾಗಲಿ, ನಾಡಿನ, ರಾಷ್ಟ್ರದ ಕಾರ್ಯದಲ್ಲಿಯಾಗಲಿ ಒಳ್ಳೇ ಉತ್ತಮ ಪ್ರಗತಿ ಕಾಣುವದು. ಅದೇ ಪ್ರಕಾರ ಜೀವನದ ಮತ್ತು ಬದುಕಿನ ವಿಚಾರವಾಗಿ ನಾವು ಅಭ್ಯಾಸಮಾಡಿ ಅದರ ಪ್ರಗತಿಗಾಗಿ ಪ್ರಯತ್ನಿಸಿದರೆ ಅಲ್ಲಿಯೂ ಪ್ರತಿಫಲ ದೊರೆಯುತ್ತದೆ. ಆಂತರಿಕ ಮತ್ತು ಹೊರಗಿನ ಎರಡೂ ರೀತಿಯಲ್ಲಿ ನಾವು ವಿಚಾರಿಸಬೇಕು. ಬಟ್ಟೆ ಹೊಲಸಾದರೆ ಮೈಗೆ ನೆಟ್ಟಗಲ್ಲ. ಮೈ ಹೊಲಸಾದರೆ ಬಟ್ಟೆಗೆ ನೆಟ್ಟಗಲ್ಲ. ಹಾಗೆ ಮೈ ಹಾಗೂ ಬಟ್ಟೆ ಸ್ವಚ್ಛವಾಗಿದ್ದರೆ ಮಾತ್ರ ಮನಸ್ಸು, ಆತ್ಮ ಶಾಂತವಾಗಿ ಮತ್ತು ಸುಖವಾಗಿರುತ್ತದೆ. ಇದಕ್ಕೆ ಸತತ ಧ್ಯಾನ ಆಲೋಚನೆ ಇರಬೇಕು ಎಂದು ಭಕ್ತವೃಂದಕ್ಕೆ ಪರಿಣಾಮ ರೀತಿಯಲ್ಲಿ ಹೇಳಿದಮಾತು ಇಂದಿಗೂ ನನ್ನ ಜ್ಞಾಪಕದಲ್ಲಿದೆ. ಎಂದು ಹೇಳಿದರು.

ಅವರು ಮುಂದುವರಿಯುತ್ತ ೧೯೪೦ ರಿಂದ ನಾನು ಸ್ವಾಮೀಜಿಯವರ ಆಶ್ರಯ ಅವರ ದರ್ಶನದಲ್ಲಿ ಪಾವನವಾಗಿರುವೆ. ಎಲ್ಲಿಯೂ ನನಗೆ ಆತ್ಮ ಶಾಂತಿ ಸಿಕ್ಕಿರಲಿಲ್ಲ. ಕಡೆಗೆ ಇವರಿಂದ ಇವರ ಪುಣ್ಯದರ್ಶನದಿಂದ ನಾನು ಶಾಂತಿಗೊಂಡಿರುವೆ, ಅವರ ಪ್ರಸನ್ನ ಮುಖಭಾವ ಮತ್ತು ಮಿತ ಹಿತ ಹಾಸ್ಯಮಯವಾದ ತಾತ್ವಿಕ ನುಡಿಗಳು ನನ್ನನ್ನು ಆಕರ್ಷಿಸಿದವು. ಮಹಾಸ್ವಾಮಿಜಿಯವರ ದರ್ಶನ ಲಾಭವಾದವರು ತಮ್ಮ ಅಭೀಷ್ಟ ತೀರಿಸಿಕೊಂಡು ಪುನೀತರಾಗಿದ್ದಾರೆ.

ಅಂಥ ಮಹಾಯೋಗಿಗಳೂ, ತಪಸ್ವಿಗಳೂ, ಅಚಿನ್ಮಯ ಸ್ವರೂಪಿಗಳೂ ಇಂದು ಅಮರ ಜೀವನದಲ್ಲಿ ಇರುವರು. ಅವರು ಕಾಣುವ ಶರೀರವನ್ನು ತೊರೆದು ಸೂಕ್ಷ್ಮ ಶರೀರದಲ್ಲಿ ಜೀವಿಸುವದು ನಮ್ಮ ಆಶೆ, ಇಚ್ಛೆ, ಆಕಾಂಕ್ಷೆ ಬೇಕಾದಾಗ ಪೂರೈಸುತ್ತಾರೆ. ಆದರೆ ಅವರ ಜೀವನವನ್ನು ಅವರ ಆದರ್ಶವನ್ನು ನಮ್ಮೆದುರಿಗೆ ಇಟ್ಟುಕೊಂಡು ನಡೆಯಬೇಕು ಎಂದು ಒಳ್ಳೇ ಪರಿಣಾಮಕಾರಕವಾಗಿ ಭಾಷಣ ಮಾಡಿದರು.

ಆಧ್ಯಾತ್ಮಿಕ ರತ್ನ ಕಳಚಿತು!

# ಮರಣವು ಯಾರಿಗೂ ತಪ್ಪಿಲ್ಲ!

ವೀರಶೈವ

ಶ್ರೀ. ಮ. ನಿ. ಪ್ರ. ಸಿದ್ಧರಾಮದೇವರು ಕುಂಟೋಜಿಮಠ ಸೊಲ್ಲಾಪುರ ಇವರ ಭಾಷಣ

ಜೀವವು ಜಗತ್ತಿಗೆ ಬಂದೊಡನೆ ಸಾವವೂ ಅದರೊಡನೆ ಹಿಂಬಾಲಿಸಿರುತ್ತದೆ. ಜೀವವಿದ್ದಲ್ಲಿ ಸಾವಿನ ಉಸುರಾಟವಿರುತ್ತದೆ. ಜೀವ ಸಾವುಗಳು ನಾಣ್ಯದ ಎರಡು ಮೈಗಳು. ಇಂದು ಸಾವು ಯಾವದೇ ಕಾಲದ ಇತಿಹಾಸವನ್ನು ನೋಡಲಿ ತತ್ತ್ವವನ್ನು ಓದಲಿ ಸಾವಿಲ್ಲದ ಸಾಸುವೆಯು ಮನೆ ಮಾತ್ರ ಸಿಕ್ಕಿಲ್ಲ. ಸಿಗುವದೂ ಇಲ್ಲ. ಜೀವನ ಗರ್ಭದಲ್ಲಿ ಸಾವು ಮನೆಮಾಡಿ ಜೀವಿಸಿರುತ್ತದೆ. ಜೀವದ ಇತ್ಯರ್ಥ ತಿಳಿದವರು ಸಾವು ಒಂದು ಪರಿಣಾಮ, ಅದೊಂದು ಪೂರ್ತಿಯಾದ ಘಟ್ಟವೆಂದು ಹೇಳುತ್ತಾರೆ. "ಜಾತಸ್ಯ ಮರಣಂ ಧೃವಂ." ಎಂದು ಶರಣರು ನುಡಿದುದು ತ್ರಿಕಾಲ ಸತ್ಯವಾದುದು. ಚಿರಂಜೀವಿಗಳೂ ಅಮರವ್ಯಕ್ತಿಗಳೂ ಎಂದು ಹೆಸರು ಪಡೆದವರು ಸಹ ಈ ಸಾವು ಬದುಕಿನ ಶರೀರವನ್ನು ತೊರೆದೇ ಹೋಗಿದ್ದಾರೆ.

ಅಂಥ ಒಂದು ಅನಿವಾರ್ಯ ಬಿಡಲಾರದು ಸಾವು ಎಂಥ ತಪಸ್ವಿಗಳೇ ಇರಲಿ. ಋಷಿಗಳೇ ಇರಲಿ; ಶಿವಯೋಗಿಗಳೇ ಇರಲಿ; ಸಂಸಾರಿಕರೇ ಇರಲಿ; ಬಿಡಲಾರದು; ಬಿಟ್ಟಿಲ್ಲ. ಅಂಥ ಒಂದು ಸಾವು ನಮ್ಮ ಶ್ರೀ ಗುರುಶಾಂತಲಿಂಗ ಸ್ವಾಮಿಜಿಯವರಿಗೆ ಬಂತು. ಆದರೆ ಸಾವಿನಲ್ಲಿ ಒಂದಾದ, ಸಾವಿಗೆ ಸ್ವಾಧೀನವಾದ ತಪಸ್ವಿಗಳು- ತಮ್ಮ ಶಕ್ತಿ ಮಾತ್ರದಿಂದ; ಆತ್ಮಬಲದಿಂದ;- ಈ ಜಗತ್ತನ್ನು ಉದ್ಧರಿಸಬಲ್ಲರು. ಮರಣವನ್ನು ಶರಣರು ಮೆಟ್ಟಿದ್ದಾರೆ. "ಮರಣವೇ ಮಹಾನವಮಿ ಎಂದು ಕರೆದಿದ್ದಾರೆ. ಅವರು ಬದುಕಿರುವರೆಗೆ ಮಾಡಿದ ಕಾರ್ಯವನ್ನು ನೋಡಿದಾಗ ಎಂಥ ನಾಡಾಭಿಮಾನಿಯೂ ಹೆಮ್ಮೆ ಪಡುವಂಥದಿದೆ.

ಮಹಾ ಶಕ್ತಿಪುರುಷರು; ತಪಸ್ವಿಗಳನ್ನು ಇಂದು ಕಾಣಲಾರೆವು. ಅವರ ಪ್ರತ್ಯಕ್ಷ ಪಾರ್ಥಿವ ಶರೀರ ನೋಡಲಾರೆವು. ಇಂದಿನ ವರೆಗೆ ಅಂದರೆ ೬೦–೬೫ ವರುಷ ಪರ್ಯಂತ ಸ್ವಾಮಿಜಿಯವರ ಪುಣ್ಯತಮ ದೃಷ್ಟಿಯಲ್ಲಿ ನಾಡು ನಾಡಿಗರು ಪುನೀತರಾಗಿದ್ದಾರೆ. ಅವರ ಆತ್ಮಕ್ಕೆ ಚಿರಶಾಂತಿ ಸಿಗಲಿ.

# ಗಡಿನಾಡಿನ ಸೂರ್ಯ ಮುಳುಗಿದನು !

( ಲಿಂಗೈಕ್ಯ ಶ್ರೀ ಗುರುಶಾಂತಲಿಂಗ ಮಹಾಸ್ವಾಮಿಯವರ ನಿಧನದ ನಿಮಿತ್ಯ ಏರ್ಪಡಿಸಲಾಗಿದ್ದ ದುಃಖಸೂಚಕ ಸಭೆಯ ಅಧ್ಯಕ್ಷೀಯಸ್ಥಾನದಿಂದ ಶ್ರೀ ಬಂಥನಾಳ ಶಿವಯೋಗಿಗಳವರು ಮಾಡಿದ ಭಾಷಣ ಸಾರಸಂಗ್ರಹ ದಿ. ೪-೧೦-೫೯ )

ದುಧನಿ- ಹತ್ತುಸಾವಿರದಷ್ಟು ನೆರೆದ ಜನಸ್ತೋಮದೆದುರಿಗೆ ಒಳ್ಳೇ ಪರಿಣಾಮಕಾರಕ; ಮತ್ತು ಭಾವಯುಕ್ತವಾಗಿ ನುಡಿದ ಮಾತುಗಳು ಚಿರ ಸ್ಮರಣೀಯವಾಗಿವೆ. ಶ್ರೀ ಬಂಥನಾಳ ಸ್ವಾಮಿಜಿಯವರು ತಮ್ಮ ಭಾಷಣ ಪ್ರಾರಂಭಿಸುತ್ತ ಹೀಗೆ ನುಡಿದರು.

ಈದಿನ ಉತ್ತರ ಕರ್ನಾಟಕದವರಿಗೆ ಗಡಿನಾಡ ಕನ್ನಡಿಗರಿಗೆ ಕತ್ತಲೆಯದಿನ. ಸೂರ್ಯ ಅಸ್ತಮಾನವಾದದಿನ ತ್ರಾಸಿನ, ತಾಪದ, ಹಾನಿಯದಿನವೆಂದು ಹೇಳಬಹುದು. ಅಂಧಃಕಾರ ಕವಿದ ಈ ಸಮಯದಲ್ಲಿ ನಾವು ಕೆಲವು ಮಾತನ್ನು ಹೇಳುವೆವು. ದುಧನಿಯವರು ಯಾವುದೋ ಒಂದು ಪುಣ್ಯದಿಂದ ಅವರ ಭಾಗ್ಯದಿಂದ ಶ್ರೀ ಗುರುಶಾಂತಲಿಂಗ ಸ್ವಾಮಿಜಿಯವರಂಥ ಮಹಾ ತಪಸ್ವಿಗಳೂ, ಭೀಷ್ಮಬ್ರಹ್ಮಚಾರಿಗಳೂ, ಶಿವಯೋಗ ಸಂಪನ್ನರೂ ಮತ್ತು ಉದಾತ್ತ ತತ್ವಜೀವಿಗಳೂ ದೊರಕಿದ್ದರು. ಅವರನ್ನು ಕಳೆದುಕೊಂಡ ನಾಡು ನುಡಿ ಬಡವಾಗಿದೆ ಎಂದು ಹೇಳಬಹುದು. ಉಜ್ವಲಜೀವನ ಪ್ರಕಾಶದಿಂದ ಸ್ವಾಮಿಜಿಯವರು ಬದುಕಿದ್ದರು. ನುಡಿಗಿಂತ ಹೆಚ್ಚು ನಡೆದು ತೋರಿಸಿದರು. ಕೇವಲ ನುಡಿದರೆ ಕಾರ್ಯವಾಗಲಾರದು. ನುಡಿವವರು ಕೋಟಿಜನ ಆದರೆ ನಡೆವವರು ಒಬ್ಬರೇ. ಅಂಥ ಒಂದು ಆದರ್ಶಜೀವನವನ್ನು ಆ ಗುರುಶಾಂತಲಿಂಗಸ್ವಾಮಿಜಿಯವರು ಪಡೆದಿದ್ದರು.

ಜಗತ್ತಿನಲ್ಲಿ ಬೇಕಾದಂಥ ಪಂಡಿತರು, ತತ್ವಶಿಖಾಮಣಿಗಳು, ಮಹಾ ಜ್ಞಾನಿಗಳು, ವಿಜ್ಞಾನಿಗಳು ಇದ್ದಾರೆ. ಮಾತಿನ ಚಾತುರ್ಯ ಪುರುಷರಿದ್ದಾರೆ. ಬೇಕಾದಂಥ ಕಠಿಣ ಮತ್ತು ಕ್ಲಿಷ್ಟ ವಿಷಯಗಳನ್ನು ಅರಗಿಸಿಕೊಂಡು ಅರಿತುಕೊಂಡು ಮಾತಾಡುತ್ತಾರೆ. ಆದರೆ ನಡೆಯುವದು ಎಷ್ಟರ ಮಟ್ಟಿಗೋ ತಿಳಿಯದು. ಪ್ರತಿಯೊಂದು ಕ್ಷೇತ್ರದಲ್ಲಿ ಪ್ರತಿಯೊಂದು ಧಾರ್ಮಿಕ, ನೈತಿಕ, ರಾಜಕೀಯ, ವ್ಯವಹಾರಿಕ ಜೀವನದಲ್ಲಿ ಜನರು ಮಾತಾಡುತ್ತಾರೆ ಹೊರತು ನಡೆದು ತೋರಿಸುವವರು ಕಡಿಮೆ. ಒಬ್ಬ ಯೋಗಿಯಲ್ಲಿರಬೇಕಾದ ಜೀವನ,

ಒಬ್ಬ ತ್ಯಾಗಿಯಲ್ಲಿರಬೇಕಾದ ಬಾಳು, ಒಬ್ಬ ಸತ್ಯವಾದಿಯಲ್ಲಿರಬೇಕಾದ ಸೌಮ್ಯತನ ಎಲ್ಲ ಸ್ವಾಮಿಜಿಯವರಲ್ಲಿ ಇದ್ದವು. ಅದಕ್ಕಾಗಿ ಅವರ ಸ್ಪರ್ಶ ಮಾತ್ರದಿಂದ, ದೃಷ್ಟಿಮಾತ್ರದಿಂದ ಪುನೀತರಾದವರು ಅಸಂಖ್ಯ ಜನ. ಅವರ ಜೀವನ ನಾಡಿಗೆ, ದೇಶಕ್ಕೆ ಆದರ್ಶವಾಗಿತ್ತು. ಗಡಿನಾಡ ಮೂಲೆಯಲ್ಲಿದ್ದರೂ ಅವರು ತಮ್ಮ ನಾಡು ನುಡಿಯ ಅಭಿಮಾನವನ್ನು ಬಿಟ್ಟಿರಲಿಲ್ಲ. ಇಂಥ ಸಮಯದಲ್ಲಿ ಸ್ವಾಮಿಜಿಯವರಿದ್ದರೆ ನಾಡಿನ ನುಡಿಯ ಕಲ್ಯಾಣ ಕಾರ್ಯಗಳಾಗುತ್ತಿದ್ದವು.

ಶರಣ ಸಾಂಪ್ರದಾಯದಲ್ಲಿ ಸತ್ತವರಿಗೆ ಅಳುವ ಪದ್ಧತಿಯಿಲ್ಲ. ಇಂಥ ಶಿವಯೋಗಸಂಪನ್ನು ಸತ್ತಿಲ್ಲ. ಶಿವಸ್ವರೂಪಿಗಳಾಗಿದ್ದಾರೆ ಅಷ್ಟೆ. ಅವರ ಪಾರ್ಥಿವ ಪಂಚಭೂತಾತ್ಮಕ ಶರೀರ ನಮಗೆ ಕಾಣಲಾರದು. ಅವರು ನುಡಿದ ಮೃದುವಚನವೇ ನಮ್ಮನ್ನು ಉದ್ಧರಿಸುವದು. ಅವರ ನಡೆಯ ನೀತಿಯಮಾರ್ಗ ವೇನಮಗುಳಿದ ಭಾಗ್ಯ. ಅವರ ಜೀವನದಿಂದ ನಾವು ಕಲಿಯಬೇಕಾದುದಿಷ್ಟು. ಕೇಳುವದು ಹೆಚ್ಚಾಗಲಿ, ನೋಡುವದು ಹೆಚ್ಚಾಗಲಿ, ಶಿವಮಂತ್ರ ಶಿವರೂಪ. ಆದರೆ ನುಡಿಯುವದು ಮಾತ್ರ ಕಡಿಮೆಯಾಗಲೆಂದೇ ದೇವರು ನಮಗೆ ಎರಡು ಕಿವಿ ಎರಡು ಕಣ್ಣು ಒಂದೇ ನಾಲಿಗೆ ಕೊಟ್ಟಿರುವನು. ಅವರು ಎಂದೂ ಹೆಚ್ಚು ಮಾತಾಡಿದವರಲ್ಲ. ಮಾತು ಅಂದರೆ ಅವರಿಗೆ ಆಗದು. ಸದಾ ತಮ್ಮ ಜೀವನವನ್ನು ಕರ್ತವ್ಯ, ಆಚಾರ, ಶೀಲ, ಶಿವಚಿಂತನೆಯ ಚಿನ್ಮಯ ಚಿತೆಯಲ್ಲಿ ಪರಿಶುದ್ಧಗೊಳಿಸುತ್ತಿದ್ದರು.

ಜಗತ್ತಿನಲ್ಲಿ ಮಹಾತ್ಮರಾಗಲಿ, ಮಹಾಪುಣ್ಯಪುರುಷರಾಗಲಿ, ಅವರು ಕೇವಲ ಮಾತಾಡಿ ಹೋಗಿಲ್ಲ. ಅದರಂತೆ ಆಚರಿಸಿ ನಡೆದು ಹೋಗಿದ್ದಾರೆ. ಅಂಥ ಒಂದು ದಿವ್ಯ ಜೀವನವನ್ನು ಶ್ರೀಗುರುಶಾಂತಲಿಂಗ ಮಹಾಸ್ವಾಮಿಜಿವರು ಪಡೆದಿದ್ದರು. ಅವರ ಆದರ್ಶ ನಮಗೆ ಹಾದಿಯಾಗಲಿ. ಅವರ ಅಮರ ಆತ್ಮ ನಮ್ಮ ಬೆಂಗಾವಲಿಗಿರಲಿ ಎಂದು ಆಶಿಸಿ, ಅವರ ಆತ್ಮಕೆ ಚಿರಶಾಂತಿ ಸಿಗಲೆಂದು ಪ್ರಾರ್ಥಿಸುವೆವು.

ಓಂ ಶಾಂತಿಃ ಶಾಂತಿಃ

—ಸಂಗ್ರಾಹಕರು ಸುರೇಶ ಹೊಸಟ್ಟಿ.

# ಮಠಗಳು ಮತ್ತು ಶಿಷ್ಯರು.

(ಲೇ- ಪಾಟೀಲ ಶಿವಾಜಿಗೌಡ ನಾಯಕ, ಕೋಡಿಹಳ್ಳಿ, ತಾ. ಶಿಕಾರಿಪುರ)

ಜಗತ್ತಿನಲ್ಲಿ ಮಾನವ ಜನಾಂಗವು ಉತ್ಪತ್ತಿ ಆದ ಬಹುಕಾಲದವರೆಗೂ ಮಾನವನು ಅರಿವಿಲ್ಲದೆ ಮೃಗಪಶು ರೂಪದಲ್ಲಿ ಬೆಳೆಯುತ್ತಿದ್ದ ಪ್ರಪಂಚಕ್ಕೆ ಜ್ಞಾನೋದಯ ಉಂಟು ಮಾಡದೆ ಗತ್ಯಂತರವಿಲ್ಲವೆಂದು ಪರಶಿವನು ತನ್ನ ಲೀಲೆಯಿಂದ ತಾನೇ ಅಂಗ ಲಿಂಗವಾಗಿ ಗುರುಲಿಂಗ ಜಂಗಮವಾಗಿ ಮಾನವರಿಗೆ ದೇವರೆಂಬುವನೊಬ್ಬ ಇದ್ದಾನೆ. ಎಂಬುವ ಕಲ್ಪನೆಯನ್ನು ಮೂಡಿಸಲು ಅಲ್ಲಲ್ಲಿ ದೇಗುಲಗಳನ್ನು ನಿರ್ಮಿಸಿ ಈ ಭಾವನೆಯ ಪ್ರಚಾರಕ್ಕಾಗಿ ಅಲ್ಲಲ್ಲಿ ಒಬ್ಬ ಸಾಧುವನ್ನು ಏರ್ಪಡಿಸಿ ಅವರಿಗೆ ಸ್ವಲ್ಪ ತಿಳುವಳಿಕೆಯನುಂಟು ಮಾಡಿದನು.

ಮೊದಲಿನ ಸಾಧು ವರ್ಗವೇ ಇಂದಿನ ಗುರುವರ್ಗವು. ಈ ವರ್ಗದವರು ಅಲ್ಲಲ್ಲಿ ಶಿವ ಧರ್ಮವನ್ನು ಪ್ರಚಾರ ಮಾಡುತ್ತಾ ಅನೇಕ ಕಷ್ಟನಷ್ಟಗಳನ್ನು ಅನುಭವಿಸುತ್ತಾ ಜನತೆಯನ್ನು ಸುಧಾರಿಸುತ್ತಾ ಅವರ ಮನಸ್ಸನ್ನು ದೇವರತ್ತ ಸೆಳೆಯುತ್ತಾ ಬಂದರು. ಸ್ವಲ್ಪ ತಿಳುವಳಿಕೆಯು ಪ್ರಾರಂಭವಾದ ಮೇಲೆ ಜನತೆಯು ಇವರಿಗೆ ಕುಠೀರಗಳನ್ನು ನಿರ್ಮಿಸಿ ಇವರ ಜೀವನಕ್ಕೆ ಆಹಾರ ರೂಪದಲ್ಲಿ ಸಂಭಾವನೆ ಕೊಡಲು ಏರ್ಪಾಟು ಮಾಡಿತು. ಇದರಿಂದ ಈ ಗುರುಗಳು ಜೀವನವನ್ನು ನಡೆಸುತ್ತಾ ಈ ಕುಠೀರಗಳಲ್ಲಿ ಹಗಲಿರುಳು ಜನತೆಗೆ ಜ್ಞಾನೋಪದೇಶ ಮಾಡುತ್ತಾ ಬಂದರು. ಬರುಬರುತ್ತಾ ಈ ಕುಠೀರಗಳೆ ವಿದ್ಯಾಪೀಠ, ದೇವಾಲಯಗಳೇ ಜ್ಞಾನ ಮಂದಿರಗಳಾದವು.

ತರುವಾಯ ಈ ಸಾಧು ವರ್ಗದಲ್ಲಿ ನಾನು ಹೆಚ್ಚು ತಾನು ಹೆಚ್ಚು ಎಂಬ ಕಲಹಗಳು ಪ್ರಾರಂಭವಾಗಿ ತಮ್ಮ ತಮ್ಮೊಳಗೆ ಒಂದೊಂದು ಪಕ್ಷವನ್ನು ನಿರ್ಮಿಸಿಕೊಂಡು ಜನಗಳಲ್ಲಿ ಮೇಲು ಕೀಳು ಭಾವನೆಯನ್ನುಂಟು ಮಾಡಿ ಜನತೆಯ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಾ ಅವರ ಮೇಲೆ ತಮ್ಮ ಅಧಿಕಾರವನ್ನು ಚಲಾಯಿಸುತ್ತಾ ನಡೆದರು. ಈ ಪಕ್ಷಗಳ ಮುಖಂಡರು ಜನತೆಯಲ್ಲಿ ಕೆಲಸಗಳನ್ನು ಹಂಚುತ್ತಾ ಕಾಯಕವೆಂಬುವ ಹೆಸರಿನ